GOVERNMENT OF BOMBAY

Kannada Research Grant Publication

# ಕರ್ನಾಟಕ ಸಾಹಿತ್ಯ-ಸಂಸ್ಕೃತಿ ದರ್ಶನ



ಎಸ್. ಎಸ್. ಮಾಳವಾಡ

# ಕರ್ನಾಟಕ
# ಸಾಹಿತ್ಯ-ಸಂಸ್ಕೃತಿ ದರ್ಶನ

ಎಸ್. ಎಸ್. ಮಾಳವಾಡ ಎಂ. ಎ.,
ಬಿ. ಈ. ಎಸ್.,
ಕರ್ನಾಟಕ ಕಾಲೇಜ, ಧಾರವಾಡ

ಕರ್ನಾಟಕ ವಿದ್ಯಾವರ್ಧಕ ಸಂಘದ ಸುವರ್ಣ ಮಹೋತ್ಸವಕ್ಕಾಗಿ

# ಅರಿಕೆ

ಕನ್ನಡ ವಾಚಕರಿಗೆ ನನ್ನ ಈ ಆಳಿಲು ಕಾಣಿಕೆಯನ್ನು ಸಲ್ಲಿಸುವ ಸುಪ್ರಸಂಗ ದೊರೆತುದಕ್ಕಾಗಿ ನನಗೆ ಆನಂದವಾಗುತ್ತದೆ. ಇದಕ್ಕೆ ಕಾರಣರಾದವರೆಂದರೆ ಮುಂಬಯಿ ಸರಕಾರದ ಕನ್ನಡ ಸಂಶೋಧನ ಸಮಿತಿಯವರು. ಅದಕ್ಕಾಗಿ ನಾನವರಿಗೆ ಋಣಿಯಾಗಿದ್ದೇನೆ. ನಾನು ೧೯೫೪ನೆಯ ವರುಷದಿಂದ (ನಾನು ಎಂ. ಎ. ದ ವಿದ್ಯಾರ್ಥಿಯಾಗಿದ್ದಾಗಿನಿಂದ) ಇದು ವರೆಗೆ ಬರೆದ ಸಂಶೋಧನಾತ್ಮಕ ವಿಮರ್ಶಾತ್ಮಕ ಲೇಖಗಳಲ್ಲಿಯ (ಒಂದೆರಡು ಭಾಷಣಗಳನ್ನೂ ಸೇರಿಸಿ) ಹದಿನಾಲ್ಕು ಲೇಖನಗಳ ಸಂಗ್ರಹವೇ ಈ ಪುಸ್ತಕವಾಗಿದೆ. ನನ್ನ ಅಭ್ಯಾಸದ ಚಪಲಕ್ಕಾಗಿ, ಸಂಪಾದಕರ ಆಗ್ರಹಕ್ಕಾಗಿ, ವಿದ್ಯಾರ್ಥಿಗಳ ಅನುಕೂಲತೆಗಾಗಿ ಬೇರೆ ಬೇರೆ ಕಾಲಕ್ಕೆ ಬರೆದ ಲೇಖಗಳ ಈ ಸಂಕಲನದಲ್ಲಿ ಅದೊಂದು ಬಗೆಯ ಪರಿಪೂರ್ಣತೆಯಾಗಲಿ, ಸೂತ್ರಬದ್ಧತೆಯಾಗಲಿ ಕಂಡುಬರಲಿಕ್ಕಿಲ್ಲ. ಆದರೆ ಕರ್ನಾಟಕ ಸಾಹಿತ್ಯ ಸಂಸ್ಕೃತಿಗಳ ಬಗೆಗೆ ಅಭ್ಯಾಸ ಮಾಡಬೇಕೆಂಬ ನನ್ನ ಆಶೆಯೇ ಈ ಲೇಖಗಳಿಗೆ ಪ್ರಚೋದನವಾಗಿರುವುದರಿಂದ ನಮ್ಮ ಸಾಹಿತ್ಯ-ಸಂಸ್ಕೃತಿಗಳ ಪರಿಚಯಕ್ಕೆ ಈ ಸಂಕಲನವು ಸಹಾಯಕಾರಿಯಾಗಬಹುದೆಂದು ನಂಬಿ ಇದನ್ನು ನಾನು ಪ್ರಕಟಿಸುತ್ತಿದ್ದೇನೆ. ಬಹುಮುಖವಾದ ನಮ್ಮ ಸಾಹಿತ್ಯ ಸಂಸ್ಕೃತಿಗಳ ಪರಿಪೂರ್ಣ ವಿವೇಚನೆಯು ಇಂತಹ ಚಿಕ್ಕ ಗ್ರಂಥದಲ್ಲಿ ಆಳವಡಲಾರದಾದರೂ ಅವುಗಳ ಒಂದು ಬಗೆಯ ಸ್ಥೂಲಪರಿಚಯ ಇಲ್ಲಿ ದೊರೆಯಬಹುದು. ಈ ಗ್ರಂಥಕ್ಕೆ ಇಟ್ಟ ಹೆಸರಿನಲ್ಲಿಯೂ ಈ ಸೂಚನೆಯಿದೆ. 'ದರ್ಶನ' ಎಂಬ ಶಬ್ದವನ್ನು ನಾನು ಗಂಭೀರವಾದ ಅರ್ಥದಲ್ಲಿ ಉಪಯೋಗಿಸದೆ 'ನೋಟ' ಎಂಬರ್ಥದಲ್ಲಿ ಅದನ್ನು ಉಪಯೋಗಿಸಿಕೊಂಡಿದ್ದೇನೆ. ಈ ಗ್ರಂಥದಲ್ಲಿ ಕಂಡುಬರುವ ಸಂಶೋಧಕ, ವಿಮರ್ಶಕ ದೃಷ್ಟಿಯು ಹೆಚ್ಚಿನ ಅಭ್ಯಾಸಕ್ಕೆ ಅನುಕೂಲವಾಗಬೇಕೆಂಬುದೇ ನನ್ನಿಚ್ಛೆ.

ಈ ಸಂಕಲನದಲ್ಲಿ ಸಾಹಿತ್ಯ ವಿಷಯಕ ಪ್ರಬಂಧಗಳೇ ಹೆಚ್ಚಾಗಿರುವುದು ನಿಜವಾದರೂ ಕೂಡ ನಮ್ಮ ಸಾಹಿತ್ಯ ಪರಿಚಯವು ಸಂಸ್ಕೃತಿ ಪರಿಚಯಕ್ಕೂ ಕಾರಣವಾಗುತ್ತಿದೆ. ಏಕೆಂದರೆ ನಮ್ಮ ಪ್ರಾಚೀನ ಸಾಹಿತ್ಯವು ನಮ್ಮ ಸಂಸ್ಕೃತಿಯ ಪ್ರತೀಕವೇ ಆಗಿದೆ. ಇಲ್ಲಿಯ ಕೆಲವು ಸಾಹಿತ್ಯ ವಿಷಯಕ ಲೇಖಗಳಲ್ಲಿ ಈ ಮಾತಿಗೆ ನಿದರ್ಶನ ದೊರೆಯುತ್ತಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಮೇಲಣ ಗ್ರಂಥಗಳು ನಮ್ಮಲ್ಲಿ ಇನ್ನೂ ಹೊರಟಿಲ್ಲ. ಈ ದೃಷ್ಟಿಯಿಂದ ಇದರಲ್ಲಿಯ ಕೆಲವು ಲೇಖಗಳು

ಉಪಯುಕ್ತವಾಗಬಹುದೆಂಬ ಆಶೆಯನ್ನಿಟ್ಟುಕೊಂಡಿದ್ದೇನೆ. ಆದರೆ ನಮ್ಮ ಸಾಹಿತ್ಯ ಚರಿತ್ರೆಯ ಸಂಪೂರ್ಣ ವಿವರಣೆಯು ಇಲ್ಲಿ ಬಂದಿಲ್ಲ. ಈ ಗ್ರಂಥವು ಕೆಲವು ಲೇಖಗಳ ಸಂಕಲನವಾಗಿರುವುದೇ ಅದಕ್ಕೆ ಕಾರಣ. ಈ ಗ್ರಂಥದಲ್ಲಿಯ 'ಕೋಡಿಯ ಮಠ' ವೆಂಬಂತಹ ಲೇಖನಗಳಲ್ಲಿ ಸಂಶೋಧನ ದೃಷ್ಟಿಯು ಕಂಡುಬರಬಹುದು. ನಾನು ಸಂಶೋಧನ ಕ್ಷೇತ್ರದಲ್ಲಿ ಪ್ರವೇಶಿಸುವುದಕ್ಕೆ ಕಾರಣರಾದ ಪ್ರೊ. ಕುಂದಣಗಾರ ಅವರ ಹೆಸರನ್ನು ಈ ಸಂದರ್ಭದಲ್ಲಿ ಸ್ಮರಿಸುವುದು ನನ್ನ ಕರ್ತವ್ಯವಾಗಿದೆ. ಇಲ್ಲಿಯ ಬೇರೆ ಬೇರೆ ಪ್ರಬಂಧಗಳನ್ನು ತಯಾರಿಸುವಾಗ ನಾನು ಉಪಯೋಗಿಸಿದ ಆಧಾರ ಗ್ರಂಥಗಳ ಪಟ್ಟಿಯನ್ನು ಬೇರೆ ಪುಟದ ಮೇಲೆ ಕೊಟ್ಟದ್ದೇನೆ.

ಈ ಸಂಕಲನದಲ್ಲಿಯ ಮೂರು ಲೇಖಗಳನ್ನು ಬಿಟ್ಟರೆ ಉಳಿದವುಗಳು ಈ ಮೊದಲೇ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿವೆ. ಅವುಗಳನ್ನು ಮೊದಲು ಬೆಳಕಿಗೆ ತಂದ ಶಿವಾನುಭವ, ಕರ್ನಾಟಕ ವಿದ್ಯಾಲಯ ಪತ್ರಿಕೆ, ಜಯಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಶರಣ ಸಾಹಿತ್ಯ ಈ ಪತ್ರಿಕೆಗಳ ಮಾನ್ಯ ಸಂಪಾದಕರುಗಳಿಗೆ ನಾನು ಉಪಕೃತನಾಗಿದ್ದೇನೆ. ಲೇಖಗಳನ್ನು ಪುಸ್ತಕರೂಪಕ್ಕೆ ತರುವಾಗ ಅಲ್ಲಲ್ಲಿ ಕೊಂಚ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದೇನೆ. ಹಾಗು ಅವುಗಳನ್ನು ಒಂದು ವಿಧದಲ್ಲಿ ವಿಭಾಗಿಸಿ ಐದು ಪ್ರಕರಣಗಳನ್ನಾಗಿ ಮಾಡಿ ಅವುಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದೇನೆ. ಪುಸ್ತಕವಾಚನಕ್ಕೆ ಮೊದಲು 'ಲೇಖನ ಪರಿಚಯ' ವನ್ನು ಓದಿಕೊಳ್ಳುವುದು ಒಳ್ಳೆಯದು. 'ಬಸವದೇವರಾಜರ ರಗಳೆ' ಎಂಬ ಹೆಸರಿನಲ್ಲಿಯ ೞ ಕಾರವನ್ನು ನಾನು ಉಪಯೋಗಿಸಿಕೊಂಡಿಲ್ಲ. ಉದು, ಉವು ಎಂಬ ಪ್ರಯೋಗಗಳನ್ನೂ 'ತತ್ತ್ವ' ಶಬ್ದದಲ್ಲಿ 'ತ' ದ ದ್ವಿತ್ವವನ್ನೂ ಇಟ್ಟುಕೊಂಡಿದ್ದೇನೆ. ಭಾಷಾ ಪರಿಶುದ್ಧತೆಯ ಕಡೆಗೆ ನಾನು ಸಾಧ್ಯವಾದಷ್ಟು ಗಮನ ಕೊಟ್ಟಿದ್ದರೂ ಕೆಲವು ಸಲ ಸ್ವಾತಂತ್ರ್ಯ ವಹಿಸಿದ್ದೇನೆ. ಕೆಲವೆಡೆ ದೋಷಗಳು ನುಸುಳಿ ಬಂದಿದ್ದರೆ ತಿದ್ದಿಕೊಳ್ಳುವುದಾಗಿ ನನ್ನ ಬಿನ್ನಹ. ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬಯಸುತ್ತೇನೆ. ನನ್ನ ಭಾಷಣಗಳಲ್ಲಿಯ ಭಾಷೆಯು ಬೆಂಗಳೂರ, ಮಂಗಳೂರ ಪ್ರಾಂತದ ಸ್ನೇಹಿತರಿಗೆ ಹೆಚ್ಚಾಗಿ ತಮ್ಮ ಕಡೆಯ ಭಾಷೆಯಂತೆ ಅನಿಸುವುದೆಂದು ಅವರು ನನಗೆ ಹೇಳುತ್ತಾರೆ. ಈ ಮಾತು ನನ್ನ ಗ್ರಂಥಕ್ಕೂ ಅನ್ವಯಿಸುವಂತಿದ್ದರೆ ಭಾಷಾ ಏಕರೂಪತೆಯ ದೃಷ್ಟಿಯಿಂದ ಅದು ಅಪೇಕ್ಷಣೀಯವೇ ಅಹುದು.

ಈ ಪುಸ್ತಕವು ಪ್ರಕಟವಾಗಲಿರುವಾಗ ಕರ್ನಾಟಕ ವಿದ್ಯಾವರ್ಧಕ ಸಂಘದವರು ಇದನ್ನು ತಮ್ಮ ಸುವರ್ಣ ಮಹೋತ್ಸವ ಪ್ರಕಟಣೆಗಳಲ್ಲಿ ಸೇರಿಸಬೇಕೆಂದೂ ಕೆಲವು ಪ್ರತಿಗಳನ್ನು ಸಂಘಕ್ಕೆ ಕೊಡಬೇಕೆಂದೂ ಬಿನ್ನವಿಸಿಕೊಂಡರು. ಕರ್ನಾಟಕ ಸಾಹಿತ್ಯ ಸಂಸ್ಕೃತಿಗಳಿಗೆ ಅಮೋಘವಾದ ಕಾಣಿಕೆಯನ್ನು ಸಲ್ಲಿಸಿದ ಈ ಹಿರಿಯ

ಸಂಸ್ಥೆಗೆ ನನ್ನ ಈ ಬಡ ಕಾಣಿಕೆಯನ್ನು ನೀಡುವ ಅವಕಾಶ ದೊರೆತದ್ದಕ್ಕಾಗಿ ನಾನು ಸಂತೋಷದಿಂದ ಅದಕ್ಕೆ ಒಪ್ಪಿಕೊಂಡಿದ್ದೇನೆ.

ನನ್ನ ಲೇಖನಗಳ ಬಗೆಗೆ ಆಸ್ಥೆ ತೋರಿಸಿ ಅವುಗಳು ಈ ಪುಸ್ತಕರೂಪಕ್ಕೆ ಬರುವಾಗ ಉಪಯುಕ್ತ ಸಲಹೆಗಳನ್ನು ಕೊಟ್ಟವರು ಹಿರಿಯರಾದ ಪ್ರೊ. ಬಸವನಾಳರು. ಪುಸ್ತಕ ಪ್ರಕಟಣೆಯಲ್ಲಿ ಹೆಚ್ಚಾದ ಆಸ್ಥೆ ವಹಿಸಿ ಮುದ್ರಣ ಹಾಗು ಹೊರಕಟ್ಟು ಸುಂದರವಾಗುವಂತೆ ಶ್ರಮ ವಹಿಸಿದವರು ಶ್ರೀ. ಎಂ. ಜಿ. ವಿರೂಪಾಕ್ಷನ್ ಅವರು. ಈ ಗ್ರಂಥಕ್ಕಾಗಿ 'ಒಪ್ಪೋಲೆ' ಯನ್ನು ತಯಾರಿಸುವಾಗ ಸಹಾಯ ಮಾಡಿದವರು ಶ್ರೀ. ಕೇಪೂ ಅವರು. 'ಗ್ರಂಥ ಹಾಗೂ ಗ್ರಂಥಕರ್ತರ ಸೂಚಿ'ಯನ್ನು ತಯಾರಿಸಿ ಕೊಟ್ಟವರು ನನ್ನ ವಿದ್ಯಾರ್ಥಿಯಾದ ಶ್ರೀ. ವಿ. ಆರ್. ಹಿರೇಮಠರು. ಇವರೆಲ್ಲರಿಗೂ ಹಾಗೂ ಪುಸ್ತಕವನ್ನು ಅಲ್ಪಾವಧಿಯಲ್ಲಿಯೇ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟ ತೋಂಟದಾರ್ಯ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ. ಎಸ್. ಬಿ. ಹರಿಹರ ಅವರಿಗೂ ನನ್ನ ಕೃತಜ್ಞತೆಗಳನ್ನು ಸೂಚಿಸುತ್ತೇನೆ.

ಕರ್ನಾಟಕ ಕಾಲೇಜ<br>ಧಾರವಾಡ<br>ತಾ. ೧—೬—೧೯೩೯

ಎಸ್. ಎಸ್. ಮಾಳವಾಡ,<br>ಎಂ. ಎ.

# ಪರಿವಿಡಿ

# ಲೇಖನ ಪರಿಚಯ

೧. **ಪ್ರಾಚೀನ ಕನ್ನಡ ಕಾವ್ಯಗಳ ವಿಮರ್ಶೆಯ ರೀತಿ:**—೧೯೩೬ನೆಯ ಡಿಸೆಂಬರಿನಲ್ಲಿ ಹಂಪೆಯಲ್ಲಿ ನಡೆದ ವಿಜಯನಗರ ಸ್ಮಾರಕೋತ್ಸವದ ಸಾಹಿತ್ಯೋತ್ಸವದ ಕಾಲಕ್ಕೆ ಓದಿದ ಪ್ರಬಂಧವಿದು. ಪ್ರಾಚೀನ ಕನ್ನಡ ಕವಿಗಳ ಕಾವ್ಯಗಳಲ್ಲಿಯ ಹೇಳಿಕೆಗಳಿಂದ ಆಗಿನ ವಿಮರ್ಶೆಯ ರೀತಿಯು ಹೇಗೆ ಸೂಚಿತವಾಗುತ್ತದೆಂಬುದನ್ನು ಈ ಲೇಖನದಲ್ಲಿ ನಿರೂಪಿಸಿದೆ.

೨. **ಸಾಹಿತ್ಯವು ಬಾಳಬಟ್ಟೆಯ ಪರಮಾಗಮು:**–ಗದುಗಿನಲ್ಲಿ ತಾ. ೫-೧೦ ೧೯೪೫ ನೆಯ ದಿನ ನಡೆದ ಧಾರವಾಡ ಜಿಲ್ಹಾ ಎರಡನೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣವಿದು. ಇದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಸಂದೇಶವೇನಿತ್ತೆಂಬುದನ್ನೂ ಇಂದು ನಮ್ಮ ಸಾಹಿತ್ಯವು ಯಾವ ದಿಶೆಯಲ್ಲಿ ಮುಂದು ವರಿಯಬೇಕೆಂಬುದನ್ನೂ ಸೂಚಿಸಿದೆ.

೩. **ಕನ್ನಡ ಸಾಹಿತ್ಯಕ್ಕೆ ಜೈನ ಕವಿಗಳ ಕಾಣಿಕೆ:**—ವಿಜಾಪುರದಲ್ಲಿ ನಾಡಹಬ್ಬದ ಕಾಲಕ್ಕೆ ಮಾಡಿದ ಒಂದು ಭಾಷಣಾಂಶವನ್ನು ವಿಸ್ತರಿಸಿ ಈ ಪ್ರಬಂಧ ವನ್ನು ಬರೆಯಲಾಗಿದೆ. ಲೇಖನದ ಹೆಸರೇ ಸೂಚಿಸುವಂತೆ ಕನ್ನಡ ಸಾಹಿತ್ಯಕ್ಕೆ ಜೈನ ಕವಿಗಳು ಸಲ್ಲಿಸಿದ ಕಾಣಿಕೆ ಯಾವುದೆಂಬುದನ್ನು ಇಲ್ಲಿ ತೋರಿಸಿದೆ.

೪. **ಮಹಾದೇವಿಯಕ್ಕನ ವಚನಾಮೃತ:**—'ಶಿವಾನುಭವ' ಪತ್ರಿಕೆ ಯಲ್ಲಿಯ ನನ್ನ ಲೇಖನಗಳಲ್ಲಿ ಇದೊಂದು. ಅಕ್ಕನ ವಚನಗಳನ್ನು ಒಂದು ವಿಧದಲ್ಲಿ ಆರಿಸಿ ವಿಭಾಗಿಸಿ ಅವುಗಳ ತಿರುಳನ್ನು ಕೊಟ್ಟು, ಅಕ್ಕನ ಉಜ್ವಲ ವಿಚಾರಸರಣಿಯ ಪರಿಚಯ ಮಾಡಿಕೊಡುವಂತೆ ಈ ಲೇಖನವನ್ನು ಬರೆಯಲಾಗಿದೆ.

೫. **ಜನ್ನಕವಿ ಪರಿಚಯ:**— ಕವಿಚಕ್ರವರ್ತಿ ಜನ್ನನ ಹಾಗೂ ಆತನ ಕೃತಿಗಳ ಪರಿಚಯವು ಈ ಲೇಖನದಲ್ಲಿದೆ. ವಿಶ್ವವಿದ್ಯಾನಿಲಯದ ಪರೀಕ್ಷೆಗೆ ಓದುವ ವಿದ್ಯಾರ್ಥಿಗಳಿಗೆ ಸಹಾಯಕಾರಿಯಾಗುವಂತೆ 'ಕರ್ನಾಟಕ ವಿದ್ಯಾಲಯ ಪತ್ರಿಕೆ' ಯಲ್ಲಿ ಪ್ರಕಟಿಸಲ್ಪಟ್ಟ ಲೇಖಗಳಲ್ಲಿ ಇದೊಂದಾಗಿದೆ.

೬. **ಕವಿ ರಾಘವಾಂಕನ ಹೊಸ ಹಾಡಿ:**—೧೯೩೮ನೆಯ ಡಿಸೆಂಬರದಲ್ಲಿ ಬಳ್ಳಾರಿಯಲ್ಲಿ ನಡೆದ ಕರ್ನಾಟಕ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ಮಾಡಿದ ಭಾಷಣ ವನ್ನು ವಿಸ್ತರಿಸಿ ಈ ಪ್ರಬಂಧವನ್ನು ಬರೆಯಲಾಗಿದೆ. ಇದರಲ್ಲಿ ರಾಘವಾಂಕನು

ಕನ್ನಡ ಕಾವ್ಯಪ್ರಪಂಚದಲ್ಲಿ ಹೇಗೆ ಹೊಸ ಹಾದಿಯನ್ನು ಹಾಕಿ ಕೊಟ್ಟಿರುವನೆಂಬು ದನ್ನು ತೋರಿಸುವ ಪ್ರಯತ್ನವಿದೆ.

೭. ವೀರಶೈವ ಸಾಹಿತ್ಯ :— ೧೯೩೪ ನೆಯ ವರುಷ ಮೇ ತಿಂಗಳಿನಲ್ಲಿ ಗದುಗಿನಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಭಾಷಣಮಾಲೆಯಲ್ಲಿಯ ನನ್ನ ಭಾಷಣದ ಅಂಶಗಳನ್ನೇ ವಿಸ್ತರಿಸಿ ಬರೆದ ಪ್ರಬಂಧವಿದು. ವೀರಶೈವ ಸಾಹಿತ್ಯಚರಿತ್ರೆ ಹಾಗೂ ಆದರ ವೈಶಿಷ್ಟ್ಯಗಳನ್ನು ಇಲ್ಲಿ ನಿರೂಪಿಸಲಾಗಿದೆ.

೮. ಹದಿಮೂರನೆಯ ಶತಮಾನದ ಸಾಹಿತ್ಯ :— ಈ ಶತಮಾನದ ಒಲವು-ವೈಶಿಷ್ಟ್ಯಗಳನ್ನೂ ಕವಿ-ಕಾವ್ಯಗಳನ್ನೂ ಇಲ್ಲಿ ಸೂಚಿಸಿ, ಜೈನರ ಪುನರುತ್ಥಾನವು ಈ ಶತಮಾನದಲ್ಲಿ ಹೇಗೆ ತಲೆದೋರಿತೆಂಬುದನ್ನು ತೋರಿಸಿದೆ.

೯. ಹದಿನೇಳನೆಯ ಶತಮಾನದ ಸಾಹಿತ್ಯ :— ಈ ಪ್ರಬಂಧವಾದರೂ ಮೇಲಿನ ಲೇಖದಂತೆಯೇ ಬರೆಯಲ್ಪಟ್ಟಿದೆ. ಕನ್ನಡ ಸಾಹಿತ್ಯಚರಿತ್ರೆಯ ದೃಷ್ಟಿಯಿಂದ ಮಹತ್ವದ್ದಾದ ಈ ಶತಮಾನದ ಸಾಹಿತ್ಯದ ಸ್ಥೂಲ ವಿಭಜನೆಯನ್ನು ಈ ಪ್ರಬಂಧದಲ್ಲಿ ಕೊಟ್ಟಿದೆ.

೧೦. ಬಸವರಾಜದೇವ ರಗಳೆಯೂ ಬಸವನ ಚರಿತ್ರೆಯೂ :— ಈ ವಿಷಯವನ್ನು ಕುರಿತು ನಾನು 'ಶಿವಾನುಭವ' ಪತ್ರಿಕೆಯಲ್ಲಿ ಬರೆದ ಲೇಖನಮಾಲೆಯಲ್ಲಿಯ ಲೇಖಗಳನ್ನೇ ಈ ಒಂದು ಪ್ರಬಂಧ ರೂಪಕ್ಕೆ ತಿರುಗಿಸಿದ್ದೇನೆ. ಹರಿಹರನ ಹೇಳಿಕೆಗಳಲ್ಲಿ ಅನೇಕ ಮಹತ್ವದ ವ್ಯತ್ಯಾಸಗಳಿರುವುದನ್ನೂ ಹಾಗೂ ಆ ಗ್ರಂಥದಲ್ಲಿ ಬಸವನ ಜೀವನವು ಸ್ಫುಟವಾದ ರೀತಿಯಲ್ಲಿ ವಿಕಾಸವಾಗಿರುವುದನ್ನೂ ಇಲ್ಲಿ ವಿವರಿಸಲಾಗಿದೆ.

೧೧. ಚಿಕದೇವರಾಯ ವಂಶಾವಳಿಯಲ್ಲಿ ಚರಿತ್ರಾಂಶಗಳು :— ತಿರುಮಲಾರ್ಯನ ಚಿಕದೇವರಾಯ ವಂಶಾವಳಿ ಗ್ರಂಥದ ಅಭ್ಯಾಸಕ್ಕೆಂದು ಕರ್ನಾಟಕ ವಿದ್ಯಾಲಯಪತ್ರಿಕೆಯಲ್ಲಿ ಪ್ರಕಟಿಸಲಾದ ಲೇಖನಮಾಲೆಯಲ್ಲಿಯ ಒಂದು ಭಾಗವಿದು. ಕಾವ್ಯದಲ್ಲಿ ಚರಿತ್ರಾಂಶಗಳು ನಿಜವಾಗಿಯೂ ಎಷ್ಟಿವೆಯೆಂಬದನ್ನು ತುಲನಾತ್ಮಕ ಚರಿತ್ರೆಯ ದೃಷ್ಟಿಯಿಂದ ಇಲ್ಲಿ ತೋರಿಸಲಾಗಿದೆ.

೧೨. ಕೋಡಿಯುಮಠ :— ಬಸವಣ್ಣನವರ ಕಾಲದ ಸಾಮಾಜಿಕ ಜೀವನವನ್ನು ಅರಿತುಕೊಳ್ಳುವ ದೃಷ್ಟಿಯಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿಯ ಕನ್ನಡ ಶಿಲಾಶಾಸನಗಳನ್ನು ಅವಲೋಕಿಸುವಾಗ 'ಕೋಡಿಯುಮಠ'ವೆಂಬ ವಿಷಯವು ನನ್ನ ದೃಷ್ಟಿಪಥಕ್ಕೆ ಬಂದಿತು ಆ ಸಂಸ್ಥೆಯ ಘನತೆಯನ್ನರಿತು ನಾನು ಆ

ವಿಷಯವಾಗಿ ೧೯೩೬ರಲ್ಲಿ ಒಂದು ಲೇಖನವನ್ನು ಬರೆದು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದೆನು. ಸಂಶೋಧನ ವಿಷಯವಾಗಿ ಇದು ನನ್ನ ಮೊದಲನೆಯ ಲೇಖನವು.

೧೩. ಬಳ್ಳಿಗಾವಿ :— ೧೯೩೮ ನೆಯ ವರುಷ ಮೇ ತಿಂಗಳು ಧಾರವಾಡದಲ್ಲಿ ನಡೆದ ಆರನೆಯ ಕರ್ನಾಟಕ ಇತಿಹಾಸ ಸಮ್ಮೇಲನದ ಕಾಲಕ್ಕೆ ಓದಿದ ಪ್ರಬಂಧವಿದು. 'ಕೋಡಿಯ ಮಠ' ಲೇಖನವನ್ನು ಬರೆದಾಗ ಬಳ್ಳಿಗಾವಿಯ ಐತಿಹಾಸಿಕ ಮಹತ್ವದ ವಿಷಯವಾಗಿ ನನಗೊಳ್ಳೆ ಆಸ್ಥೆಯುಂಟಾಗಿದ್ದಿತು. ಒಮ್ಮೆ ಬಳ್ಳಿಗಾವಿಯನ್ನು ನಾನು ಸ್ವತಃ ನೋಡುವ ಅವಕಾಶವೂ ನನಗೆ ದೊರೆತಿತ್ತು. ಆ ಮೇಲೆ ಬರೆದ ಲೇಖನವಿದು.

೧೪. ವಿಜಯನಗರ ಸಾಮ್ರಾಜ್ಯದಲ್ಲಿ ಸಂಸ್ಕೃತಿ ಸಂವರ್ಧನ:— ವಿಜಯ ನಗರ ಸಾಮ್ರಾಜ್ಯ ಸ್ಮಾರಕೋತ್ಸವದ ಕಾಲಕ್ಕೆ ಪ್ರಕಟವಾದ ಜಯಕರ್ನಾಟಕದ ವಿಜಯನಗರ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೇಖನವಿದು. ವಿಜಯ ನಗರದಲ್ಲಿ ಆಗ ಬಹುಮುಖವಾಗಿ ಸಂಸ್ಕೃತಿ ಸಂವರ್ಧನ ಕಾರ್ಯವು ಹೇಗೆ ನಡೆಯಿತೆಂಬುದನ್ನು ಸಪ್ರಮಾಣವಾಗಿ ಇಲ್ಲಿ ವಿವರಿಸಿದೆ.

---

## ಆಧಾರ ಗ್ರಂಥಗಳ ಪಟ್ಟಿ




೧. ಕರ್ನಾಟಕ ಕವಿಚರಿತೆ. ಭಾಗಗಳು ೧, ೨, ಮತ್ತು ೩.

೨. ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ.

೩. ಅಪ್ರತಿಮ ವೀರ ಚರಿತೆ.

೪. ಗದಾಯುದ್ಧ.

೫. ಅನಂತನಾಥ ಪುರಾಣ.

೬. ಯಶೋಧರ ಚರಿತೆ.

೭. ಮಹಾದೇವಿಯಕ್ಕನ ವಚನಗಳು.

೮. ಹರಿಶ್ಚಂದ್ರ ಕಾವ್ಯ.

೯. ಆದಿಶೆಟ್ಟಿ ಪುರಾಣ. (ಸೋಮನಾಥ ಚರಿತೆ)

೧೦. ಬಸವರಾಜ ದೇವರ ರಗಳೆ.

೧೧. ಭೀಮಕವಿಯ ಬಸವ ಪುರಾಣ.

೧೨. ಸಿಂಗಿರಾಜ ಪುರಾಣ.

೧೩. ಭಕ್ತಿ ಭಾಂಡಾರಿ ಬಸವಣ್ಣನವರು.

೧೪. ಕಾಲಜ್ಞಾನದ ವಚನಗಳು.

೧೫. ಚಿಕದೇವರಾಯ ವಂಶಾವಳಿ.

೧೬. ಮೈಸೂರ ಸಂಸ್ಥಾನದ ಚರಿತ್ರಸಾರ. (ಎಂ. ಶ್ಯಾಮರಾಯ ಕೃತ.)

೧೭. ಅರುಣೋದಯ (ವಿಜಯನಗರ ಸ್ಮಾರಕ ಸಂಚಿಕೆ.)

೧೮. History of Kanarese Literature – E. P. Rice.

೧೯. Epigraphica Carnatica (Shimoga District.)

೨೦. Mysore Gazetteer Volume II and VII.

೨೧. Epigraphica Indica Volume I.

೨೨. Social and Political life under Vijayanagar. Volume II

೨೩. Character and Significance of the Empire of Vijayanagar in Indian History — Dr. Krishnaswamy Aiyangar.

೨೪. ಅಲ್ಲಲ್ಲಿ ಉದಾಹರಿಸಿದ ಕನ್ನಡ ಕವಿಗಳ ಕಾವ್ಯಗಳು ಹಾಗು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', 'ಶಿವಾನುಭವ' ಪತ್ರಿಕೆಗಳಲ್ಲಿಯ ಲೇಖನಗಳು ಇತ್ಯಾದಿ.




# ಪ್ರಾಚೀನ
# ಕನ್ನಡ ಕಾವ್ಯಗಳ ವಿಮರ್ಶೆಯ ರೀತಿ

ಆಧುನಿಕ ರೀತಿಯಿಂದ ಸಾಹಿತ್ಯವನ್ನು ಅಭ್ಯಾಸ ಮಾಡುವವರು ಹಳಗನ್ನಡದಲ್ಲಿ ವಿಮರ್ಶ ಪದ್ಧತಿಯು ಇದ್ದಿತೇ ಎಂದು ಕೇಳುವುದು ಸಹಜವಿದೆ. ವಿಮರ್ಶೆಯು ಸಾಹಿತ್ಯದ ಒರೆಗಲ್ಲು; ಸಾಹಿತ್ಯದ ಬೆಳವಣಿಗೆಗೆ—ಉತ್ತಮ ಸಾಹಿತ್ಯದ ಬೆಳವಣಿಗೆಗೆ—ಆವಶ್ಯಕವಾದ ಸಾಧನ. ಅಲ್ಲದೆ ವಿಮರ್ಶೆಯೇ ಒಂದು ಅನೂಲ್ಯವಾದ ಸಾಹಿತ್ಯ ವಿಭಾಗ. ಇದು ಆಧುನಿಕ ಸಾಹಿತ್ಯ ಪ್ರಪಂಚದಲ್ಲಿ ಉನ್ನತಸ್ಥಾನ ಪಡೆಯುತ್ತಿದೆ. ಆಧುನಿಕ ಗ್ರಂಥಗಳಲ್ಲಿ ಇದು ಇನ್ನೂ ಹೆಚ್ಚಾಗಿ ಬೆಳೆದಿಲ್ಲವಾದರೂ ಜಿಜ್ಞಾಸುಗಳು ಹಳಗನ್ನಡ ಸಾಹಿತ್ಯದಲ್ಲಿ ಇದು ದೊರೆಯಬಹುದೇ ಎಂದು ನಿರೀಕ್ಷಿಸುವದು ಸ್ವಾಭಾವಿಕವಾಗಿದೆ. ಹಾಗೆ ನಿರೀಕ್ಷಿಸುವಾಗ ವಿಮರ್ಶಾವಿಭಾಗವು ನಮಗೆ ಬೇರೆಯಾಗಿ ದೊರೆಯದೆ ಇದ್ದರೂ ಕೂಡ, ಒಂದು ದೃಷ್ಟಿಯಲ್ಲಿ ನಮ್ಮ ಕವಿಗಳು ಈ ವಿಭಾಗವನ್ನು ಒದಗಿಸಿಕೊಟ್ಟಿದ್ದಾರೆಂದು ಹೇಳಬಹುದು.

ಕನ್ನಡ ಕಾವ್ಯಗಳನ್ನು ಓದುವವರಿಗೆ ನಮ್ಮ ಕವಿಗಳ ಆತ್ಮಶ್ಲಾಘನೆ ಪರನಿಂದೆಗಳಿಂದ ಎಷ್ಟೋಸಲ ಬೇಜಾರು ಬರುತ್ತದೆ. ಒಮ್ಮೊಮ್ಮೆ ಅಸಹ್ಯವೂ ಅನಿಸುತ್ತದೆ. ತಮ್ಮ ನಾಲಗೆಯ ಮೇಲೆ ಸರಸ್ವತಿಯೇ ಬಂದು ನಿಂತು ಕಾವ್ಯ ನುಡಿಸುವಳೆಂದು ಹೇಳುವುದು ನಮ್ಮ ಕವಿಗಳಿಗೆ ಸಹಜ ಮಾತಾಗಿದೆ. ಹೀಗಿದ್ದರೂ ಅಬಲೆಯಾದ ಸರಸ್ವತಿಯ ಗೋಣ್ಮುರಿದು, ಅರ್ಥಕ್ಕೆ ಕುದಿದು, ನೋಯಿಸುವ ಸರಸ್ವತೀದ್ರೋಹಿಗಳಾದ ಅಕ್ಕರಿಗರು ಆಗ ಇದ್ದಿರಬಹುದೆಂದು ರನ್ನನ ಮಾತುಗಳಿಂದ ತಿಳಿದುಬರುತ್ತದೆ. ಅಳಿಗಬ್ಬಿಗರೂ ಹೊಳೆಗಬ್ಬಿಗರೂ ಇದ್ದರೆಂದು ಮಧುರನಿಂದ ತಿಳಿಯುತ್ತದೆ. "ಪುರುಳಿಲ್ಲದ ಅಹಂಕಾರದೊಳೆ ಬಾತು ಬಲ್ಮೆಗೆ ಹಾರೈಸುವ" ಬಯಕೆಗವಿಗಳ ವಿಚಾರವನ್ನು ನೇಮಿಚಂದ್ರನು ಹೇಳುತ್ತಾನೆ. "ಪಟಗಬ್ಬಿಗರ್ನುಡಿದ ಮಾತನ್ನೆ ಪಲ್ಲಟವಿಟ್ಟು..................ಕವಿಗಳ ವೇಷದಿಂದ

ಕುಣಿದೇಡಿಪಜಿಕ್ಕೋಡಗ" ರನ್ನು ಜನ್ನನು ಹಾಸ್ಯ ಮಾಡುತ್ತಾನೆ. "ಚಂದದ ಬಳ್ಳಿ ಸಂಕಲೆಯೊಳಕ್ಕರಮಂ ಸೆರೆಗಯ್ವ ಕಕ್ಕಸರ"ನ್ನು ಅವನು ಹೀಯಾಳಿಸುತ್ತಾನೆ. ಮಿಗೆ ಪದವಿಡಲರಿಯದ ನಾಲಗೆವೆಟಿವರೂ, ಸಲೆ ಸದರ್ಥಮಂ ಕಾಣದಪೋ ಬಗೆಗುರುಡರೂ ಓದುಗೇಳದ ಅಕ್ಕರಗಿವುಡರೂ ಕಬ್ಬಿಗರಾಗಲಾರರೆಂಬುದನ್ನು ನೇಮಿಯು ಹೇಳುತ್ತಾನೆ. ಕನ್ನಡ ಕವಿಗಳ ಈ ಪರನಿಂದೆಯು ಕುಕವಿನಿಂದೆ ಎಂಬ ದಾಗಿ ಕಾವ್ಯಗಳಲ್ಲಿ ಪ್ರಸಿದ್ಧವಿದೆ. ತಮ್ಮ ಗುಣಗಳನ್ನು ಹೊಗಳಿಕೊಂಡು, ತಮ್ಮ ಮೆಚ್ಚಿಗೆಯ ಪೂರ್ವ ಕವಿಗಳನ್ನು ಹೊಗಳಿ, ಕುಕವಿಗಳನ್ನು ನಿಂದಿಸುವುದು ಕನ್ನಡ ಕಾವ್ಯಗಳಲ್ಲಿ ಸಾಂಪ್ರದಾಯಿಕವಾಗಿ ಬೆಳೆದುಬಂದ ಮಾತಾಗಿದೆ. ಹವಣು ಮೀರಿ ಹೊಗಳಿಕೊಳ್ಳುವುದೂ ನಿಂದಿಸುವುದೂ ಅನೇಕಸಲ ನಮಗೆ ಅನುಚಿತವೆನಿಸಬಹುದಾದರೂ ಕೂಡ, ಒಂದು ದೃಷ್ಟಿಯಿಂದ ಅಂತಹ ನುಡಿಗಳಲ್ಲಿ ನಮ್ಮ ಪ್ರಾಚೀನ ಕಬ್ಬಿಗರ ವಿಮರ್ಶೆಯ ರೀತಿಯನ್ನು ಅರಿಯಬಹುದೆಂದು ನನಗೆ ಅನಿಸುತ್ತದೆ. ಪಾಶ್ಚಿಮಾತ್ಯ ಪದ್ಧತಿಯ ಶಾಸ್ತ್ರಶುದ್ಧ ವಿಮರ್ಶೆ ನಮಗೆ ಪ್ರಾಚೀನ ಸಾಹಿತ್ಯದಲ್ಲಿ ದೊರೆಯುತ್ತಿಲ್ಲವಾದರೂ ಸಾಂಪ್ರದಾಯಿಕ ಪ್ರಾಚೀನ ಕಾವ್ಯಗಳನ್ನು ಅಳೆಯುವ ಕೆಲವೊಂದು ಪದ್ಧತಿಯು ಅಲ್ಲಿದೆ. ತನ್ನ ಕಾವ್ಯವನ್ನು ವಿಮರ್ಶಿಸುವ "ಎಂಟೆರ್ದೆ" ಯಾರಿಗೆ ಎಂದು ರನ್ನನು ನಮ್ಮನ್ನು ಬೆದರಿಸಬಹುದು. ತನ್ನ ಕೃತಿ ಕಾಳಿದಾಸನುಮನೇ ಳಿಸಿತೆಂದು ನಾಗವರ್ಮನು ಹೇಳಿಕೊಳ್ಳಬಹುದು. ಕಾಳಿದಾಸನಿಗೆ ತಾನು ಕಡಮೆಯಲ್ಲವೆಂದು ಪೊನ್ನನು ಬಿಂಕ ಇಟ್ಟುಕೊಳ್ಳಬಹುದು. ತಮ್ಮ ಕಾವ್ಯಗಳು "ಇನಿಯಳ ಸೋಂಕಿನಂತೆ," "ಚಂದನ ರಸದಣ್ಪಿನಂತೆ," ಇತ್ಯಾದಿಯಾಗಿ ರುದ್ರಭಟ್ಟ, ಹರಿಹರ, ಷಡಕ್ಷರಾದಿಗಳು ಹೇಳಿಕೊಳ್ಳಬಹುದು. ಹೊಗಳಿಕೆಗೆ ತಕ್ಕ ಗುಣಗಳು ಕನ್ನಡ ಕವಿಗಳಲ್ಲಿವೆಯೇ ಎಂಬ ಸಮಸ್ಯೆಯೇನೋ ಇದೆ. ಎಷ್ಟೋಸಲ ಹೊಗಳಿಕೆ ನಿರರ್ಥಕವೆಂದು ಕಂಡುಬರುತ್ತದೆ. ಆದರೂ ಕೂಡ ಈ ಹೊಗಳಿಕೆ ತೆಗಳಿಕೆಗಳಿಂದ ಉತ್ತಮ ಕಾವ್ಯಕ್ಕೆ ಬೇಕಾದ ಗುಣಗಳು ಯಾವುವು, ಕಾವ್ಯಕ್ಕೆ ಕಲಂಕವನ್ನುಂಟು ಮಾಡುವ ದೋಷಗಳು ಯಾವುವು ಎಂಬ ವಿಚಾರವನ್ನು ನಾವು ಸಂಗ್ರಹಿಸಬಹುದಾಗಿದೆ. ಅಂತಹ ಒಂದು ಪ್ರಯತ್ನ ಈ ಪ್ರಬಂಧದಲ್ಲಿದೆ.

ನಮ್ಮಲ್ಲಿ ಅನೇಕ ಲಾಕ್ಷಣಿಕರು ಕಾವ್ಯದ ಲಕ್ಷಣಗಳನ್ನು ಹೇಳಿದ್ದಾರೆ. ಬಹುಶಃ ಅವೆಲ್ಲ ಸಂಸ್ಕೃತ ಲಾಕ್ಷಣಿಕರಾದ ಭಾಮಹ, ದಂಡಿ, ಮಮ್ಮಟ ಇವರ ಅಭಿಪ್ರಾಯಗಳಾಗಿವೆ.

"ಶ್ಲೇಷ ಪ್ರಸಾದಾದಿ ಗುಣಂಗಳುಂ, ಪ್ರಾಸಂ ಮೊದಲಾದ ಶಬ್ದಾಲಂಕಾರಗಳುಂ, ಉಪಮಾ ಉತ್ಪ್ರೇಕ್ಷೆ ಮೊದಲಾದರ್ಥಾಲಂಕಾರಗಳುಮುಳ್ಳುದಾಗಿ

ದೋಷಂಗಳನುೞಿದಿರ್ಪ ಸುಡಿಯುಂ ಪುರುಳುಂ" ಕಾವ್ಯವೆಂದು ಒಬ್ಬ ಲಾಕ್ಷಣಿಕನು ಹೇಳಿದ್ದಾನೆ. ಈ ಮಾತಿನಲ್ಲಿ ಕಾವ್ಯದ ಲಕ್ಷಣಗಳು ಅಡಕವಾಗಿವೆ. ಬಹುಶಃ ಈ ಲಕ್ಷಣಗಳನ್ನು ಅನುಸರಿಸಿಯೇ ನಮ್ಮಲ್ಲಿ ಕಾವ್ಯಗಳು ರಚಿತವಾಗಿವೆ. ಆತ್ಮಶ್ಲಾಘನೆ, ಕುಕವಿನಿಂದೆ—ಈ ವಿಭಾಗಗಳಲ್ಲಿ ಕಂಡುಬರುವ ಉಕ್ತಿಗಳು ಲಾಕ್ಷಣಿಕರ ಉಕ್ತಿಗಳನ್ನು ಹೋಲುತ್ತವೆ. ಆದುದರಿಂದ ವಿಹಂಗಮ ದೃಷ್ಟಿಯಿಂದ ಕೆಲವು ಕನ್ನಡ ಕಾವ್ಯಗಳಲ್ಲಿಯ ಉಕ್ತಿಗಳನ್ನು ಈಗ ಸಂಗ್ರಹಿಸಿ ಚರ್ಚಿಸಬೇಕಾಗಿದೆ.

ಕನ್ನಡ ಕಾವ್ಯಗಳು ವಸ್ತುಕವೆಂದೂ ವರ್ಣಕವೆಂದೂ ದ್ವಿವಿಧವಾಗಿವೆ. ಮೊದಲನೆಯದು ಸಾಂಪ್ರದಾಯಿಕವಾದುದು, ಪೂರ್ವದ ಲಾಕ್ಷಣಿಕರ ಅಭಿಪ್ರಾಯಕ್ಕೆ ಸಮ್ಮತವಾದುದು. ಎರಡನೆಯದು ಸ್ವತಂತ್ರ ರೀತಿಗೆ ಸೇರಿದ್ದು. ಲಕ್ಷಣಗಳನ್ನು ಅನುಸರಿಸಿಯೇ ತೀರಬೇಕೆಂಬ ನಿಯಮವು ಅದಕ್ಕೆ ಇಲ್ಲ. ಇದೇ ಮಾತನ್ನು ರತ್ನಾಕರ ವರ್ಣಿಯು ಸುಂದರವಾಗಿ ಹೇಳಿದ್ದಾನೆ.

"ಸಕಲ ಲಕ್ಷಣವು ವಸ್ತುಕಕೆ, ವರ್ಣಕಕಿಷ್ಟು ವಿಕಳವಾದರು ದೋಷವಿಲ್ಲ"
ಕೇವಲ ಲಕ್ಷಣಕ್ಕಾಗಿ ಕಟ್ಟುಬೀಳುವ ಅವಶ್ಯಕತೆ ಇಲ್ಲವೆಂಬುದು ರತ್ನಾಕರವರ್ಣಿಯ ಅಭಿಪ್ರಾಯ. ಅಂತೆಯೇ ಆತನು—

"ಸಕಲ ಲಕ್ಷಣಕಾಗಿ ಬಿರಸುಮಾಡಿದರೆ ಪುಸ್ತಕ ಬದನೆಕಾಯಹುದು"
ಎಂದು ಹೇಳುತ್ತಾನೆ. ಆದರೆ ಈ ಲಕ್ಷಣಗಳಿಗೆ ಕಟ್ಟುಬಿದ್ದ ಕನ್ನಡ ಕವಿಗಳೇ ಹೆಚ್ಚು. ಆದ್ದರಿಂದ ಕಾವ್ಯಗಳೆಲ್ಲ "ಪೊಸಮಾವಿನ ಪೂವಿನ ಜೊಂಪದಂತೆ" ಇರದೆ ಸಕಲ ಲಕ್ಷಣಕಾಗಿ ಬಿರಸು ಮಾಡಿದ ಬದನೆಕಾಯಂತೆ ಆಗಿರುವ ವಿಷಾದದ ಸಂಗತಿಯನ್ನು ಒಪ್ಪಿಯೇ ನಾವು ಮುಂದುವರಿಯಬೇಕಾಗುತ್ತದೆ.

ಪಸರಿಪ ಕನ್ನಡಕ್ಕೊಡೆಯನೊರ್ವನೆ ಆದ ಪಂಪನು ತಾನು

> ಆ ಸಕಳಾರ್ಥ ಸಂಯುತಮಳಂಕೃತಿಯುಕ್ತಮುದಾತ್ತ ವೃತ್ತಿ
> ವಿನ್ಯಾಸಮನೇಕ ಲಕ್ಷಣ ಗುಣ ಪ್ರಭಾವ ಮೃದುಮಾದ ವಾಕ್ಶ್ರೀಸುಭಗಂ

ಎಂದು ಹೇಳಿಕೊಳ್ಳುತ್ತಾನೆ. ಕಾವ್ಯವು ಅರ್ಥಸಂಯುತವಾಗಿ ಅಳಂಕೃತಿಯುಕ್ತವಾಗಿ, ಉದಾತ್ತವೃತ್ತಿವಿನ್ಯಾಸವನ್ನುಳ್ಳದ್ದಾಗಿ ಮೃದುಪದವುಳ್ಳದ್ದಾಗಿರಬೇಕೆಂಬುದು ಈ ಕವಿಸಾರ್ವಭೌಮನ ಅಭಿಪ್ರಾಯ. ತನ್ನ ಕಾವ್ಯದ "ಬಗೆ" ಪೊಸತಪ್ಪಾಗಿದೆಯೆಂದು ಈತನು ಹೇಳುತ್ತಾನೆ. "ಪೊಸ ಬಗೆ," "ಮೃದುಬಂಧ," "ದೇಸಿ"— ಇವುಗಳು ಉತ್ತಮ ಕಾವ್ಯದ ಲಕ್ಷಣಗಳೆಂದು ಕಂಡುಕೊಳ್ಳಬಹುದು. "ಲಲಿತಪದಂ," "ಪ್ರಸನ್ನ ಕವಿತಾಗುಣ" ಗಳು ಇಲ್ಲದ ಕಾವ್ಯಗಳು ವ್ಯರ್ಥವೇ ಸರಿ. ಆ ಗುಣಗಳಿಲ್ಲದ ಕೃತಿಬಂಧಗಳಿಂದ ಬರೆಹಗಾರರ ಕೈಗಳ ಕೇಡು, ಸುಣ್ಣನೆ

ಅಪ್ಪುಳಕದ ಕೇಡು, ಪೇಳಿಸಿದೊಡೆ ಅರ್ಥದ ಕೇಡು. "ಪುದಿದ ಜಸಂ," "ಪೊದಳ್ದ ಚಳಂ," "ಒಂದಿದ ಅಳಂಕೃತಿ," "ಕೈತ ದೇಸಿ" ಇವುಗಳ ಮೂಲಕ ತನ್ನ ಕಾವ್ಯವು ಮುನ್ನಿನ ಕಬ್ಬವನೆಲ್ಲ ಮೆಟ್ಟಿತೆಂದು ಪಂಪನು ಹೇಳುತ್ತಾನೆ. ಅವನ ಗುಣಗಳನ್ನು ಅವನ ಮಾತಿನಲ್ಲಿಯೇ ಸಂಗ್ರಹಿಸಿ ಹೀಗೆ ಹೇಳಬಹುದು: 'ಸೂಕ್ತಿಗರ್ಭಂ,' 'ಮೃದುಸಂದರ್ಭಂ,' 'ವಿಚಾರಕ್ರಮಮುಚಿತಪದಂ,' 'ಗಂಭೀರ ಕವಿತ್ವಂ,' 'ಹಿತಮಿತ ಮೃದುವಚನಂ.'

ಕಾರಕಪೂರಕ ವಸ್ತುವಿಚಾರಕ ನಿಸ್ತಾರರ್ಕಳೋಳಿಯೆ ಸಭೆಗೊಟ್ಟೋರಂತೆ ನಾಲ್ವರಿರ್ದು ವಿಚಾರಂ ಬೇಳ್ವಂತೆ ಪೇಳ್ದ ಕೃತಿಯು ಕೃತಿಯೇ ಅಲ್ಲವೆಂದು ವಾಗ್ದೇವೀ ಭಾಂಡಾರದ ಮುದ್ರೆಯನೊಡೆದ ರನ್ನನ ಅಭಿಪ್ರಾಯ. "ದರವುರಮು ಮುಂಟ ಸುಂಟೆಯುಮರೆವೊರಕನುಮೆನಿಸಿದ" ನುಡಿಗಳು ಕಾವ್ಯದಲ್ಲಿ ಬರಕೂಡದು. ಕೆಲರ್ ಮಹಾಪುರುಷರ್ಕಳ್ ಸಾರಣಿಯಂತಿರೆ ರಸಮಂ ಪಿಡಿಯಬಹುದು. ಆದರೆ ರನ್ನನ ಅಭಿಪ್ರಾಯದ ಪ್ರಕಾರ ಉತ್ತಮ ಕಾವ್ಯದಲ್ಲಿ "ಪೊಸ ದೇಸೆ," "ಬೆಡಂಗು," "ರಸಘಟ್ಟಿ," "ಅರ್ಥದೃಷ್ಟಿ" ಇರಬೇಕು. ರನ್ನನ ಈ ಉಕ್ತಿ ಹಳಗನ್ನಡ ಕಾವ್ಯಗಳ ವಿಮರ್ಶೆಯ ರೀತಿಯನ್ನು ಚೆನ್ನಾಗಿ ಸ್ಪಷ್ಟಗೊಳಿಸುತ್ತದೆ. ನಾಗಚಂದ್ರನು "ರಸಮಂ, ಭಾವಮಂ, ಅರ್ಥಮಂ, ರಚನೆಯಂ" ಕಾವ್ಯಜ್ಞರು ಅರೈದು ಭಾವಿಸಬೇಕೆಂದು ಹೇಳುತ್ತಾನೆ. ಕಾವ್ಯ ವಿಮರ್ಶೆಯನ್ನು ಮಾಡುವವರು ರಸ, ಭಾವ, ಅರ್ಥ, ರಚನೆ ಇವುಗಳನ್ನು ಅನುಲಕ್ಷಿಸಬೇಕೆಂಬ ತತ್ತ್ವ ಇಲ್ಲಿ ಅಡಕವಾಗಿದೆ. ಈ ತತ್ತ್ವ ಬಹುಜನ ಕನ್ನಡ ಕವಿಗಳಿಗೆ ಸಮ್ಮತವಾಗಿದೆ. ನಾಗವರ್ಮನು "ನವರಸಮುಣ್ಮೆ, ಮಾತು ಪೊಸದಾಗಿರೆ, ದೇಸೆಯೆ ದೇಸಿವೆತ್ತುದೆಂಬವೊಲಿರೆ, ಜಾಣ್ ಮನಂಗೊಳಿಸೆ........ಅರ್ಥಕೃತಿ ಪ್ರಬಂಧಮುಂ ಕಿವಿಗಿನಿದಾಗೆ, ಪೊಚ್ಚ ಪೊಸತಾಗೆ, ಮನೋಹರಮಾಗೆ" ಎಂದು ಹೇಳುವಾಗ ಮೇಲಿನ ತತ್ತ್ವವನ್ನೇ ಉಸುರಿದ್ದಾನೆ. ಅಂತೂ ಪಂಪ, ರನ್ನ, ನಾಗಚಂದ್ರ, ನಾಗವರ್ಮರ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಹೇಳಬಹುದಾದರೆ ಉತ್ತಮ ಕಾವ್ಯಗಳಲ್ಲಿ ಅರ್ಥ, ಅಳಂಕೃತಿ, ಉದಾತ್ತ ವೃತ್ತಿ, ಮೃದುಪದಬಂಧ, ಪೊಸ ಬಗೆ, ದೇಸಿ, ಪ್ರಸನ್ನ ಕವಿತಾಗುಣ, ರಸಭಾವ, ರಚನೆ, ಪೊಸಮಾತು—ಇವುಗಳು ಬೇಕೆಂದು ಹೇಳಬೇಕಾಗುತ್ತದೆ. ಈ ತತ್ತ್ವವನ್ನು ಅನುಸರಿಸಿ ನಾವು ಕನ್ನಡ ಕಾವ್ಯಗಳನ್ನು ಅಳೆಯಬಹುದಾಗಿದೆ. "ರಸ"ಕ್ಕಂತು ಕನ್ನಡ ಕವಿಗಳು ಹೆಚ್ಚಾದ ಪ್ರಾಶಸ್ತ್ಯ ಕೊಟ್ಟಂತಿದೆ. ನಾಗಚಂದ್ರನು ತನ್ನ ಕಾವ್ಯಸ್ಥಲೀರಂಗದೋಳ್ "ಸರ್ವರಸೋತ್ಪಾದನ ನವೀನ ಸೃಷ್ಟಿ" ಇರಬೇಕೆಂದು ಕೋರುತ್ತಾನೆ. ಸಜ್ಜನ ಸಂಸ್ತವವು ಆತನ ರಸ

ಪ್ರವಾಹದ ನೆಲವೆರ್ಚಿನ ಇಂಬಱಿದು ಮೆಚ್ಚಿ ಮೆಚ್ಚಿ ತಲೆದೂಗುವುದೆಂದು ಆತನ ಹಾರೈಕೆ. ರಸಭಾವದೋಕುಳಿಯಾಡುವಂತೆ ತಾನು ಕಾವ್ಯವನ್ನು ಬರೆದಿದ್ದೇ-ನೆಂದು ಹೇಳುತ್ತಾನೆ. ಗುಣವರ್ಮನು ಆತನ "ರಸವೃತ್ತಿ"ಯನ್ನು ಹೊಗಳುತ್ತಾನೆ. ಕವಿಯ ಚತುರ್ಮುಖಗಳಲ್ಲಿ "ರಸವು" ಮೊದಲನೆಯವೆಂದು ರನ್ನನಿಂದ ತಿಳಿದುಬರುತ್ತದೆ. ಷಡಕ್ಷರದೇವನು ರಸದ ಉನ್ನತಿಯನ್ನು ಬಹು ಸುಂದರವಾಗಿ ಬಣ್ಣಿಸುತ್ತಾನೆ. ಕೃತಿಯಂ ಪೇಳ್ವುದಾದರೆ "ಕವಿ ವಿಬುಧರ ಕಿವಿಯೊಳ್ಸೂಸುವ ನವರಸಮಿಳಿದು ತೀವಿ ತನುವಂ ಮನಮಂ ಕವಿದು ಪೊಣ್ಮುವ ಸುಖ ಬಾಷ್ಪಂ ಪೊರಸೂಸಿತೆನೆ ತುಳುಂಕುವಂತೆ" ಪೇಳಬೇಕೆಂದು ಆತನ ಅಭಿಪ್ರಾಯ. ಕೃತಿಕಾದಂಬಿನಿಯಿಂದ ರಸವು ಕ್ಷಿತಿಪ ಸಭಾಕ್ಷಿತಿಗೆ ಸುರಿಯುತ್ತಿರಬೇಕೆಂದು ಆತನ ಅಭಿಪ್ರಾಯ. ತನ್ನ ಹೆಸರು ಅನ್ವರ್ಥಕವಾಗುವಂತೆ ಕಾವ್ಯವನ್ನು ಬರೆವೆನೆಂದು ಹೇಳುವ ಮಧುರನು ಕಾವ್ಯದಿಂದ ತನಿರಸಮುರ್ವಿ, ಕೊರ್ವಿ, ಪೊರಪೊಣ್ಮಬೇಕೆಂದು ಹೇಳುತ್ತಾನೆ. ಕಬ್ಬವು ಕಬ್ಬಿನಂತೆ ರಸಭರಿತವಾಗಿರಬೇಕಲ್ಲದೆ ಬಿದಿರಿನಂತೆ ರಸವಿಹೀನವಾಗಿರಕೂಡದೆಂಬ ರತ್ನಾಕರವರ್ಣಿಯ ಉಕ್ತಿ ಸುಂದರವೂ ಅರ್ಥಗರ್ಭಿತವೂ ಆಗಿದೆ. ಲಕ್ಷ್ಮೀಶನು ತನ್ನ ಕಾವ್ಯವು "ನವರಸೋದರಭರಿತದಿಂದೆ ವಿಲಸಿತವಾಗಿ"ರುವದೆಂದು ಹೇಳಿಕೊಳ್ಳುತ್ತಾನೆ. ಜೈಮಿನಿ ಭಾರತದ "ನವರಸ ಪ್ರೌಢಿ"ಯನ್ನು ಹೊಗಳದ ರಸಿಕರಿಲ್ಲ. ಜನ್ನನು ಕಾವ್ಯದ ಅಷ್ಟ ವಿಧದ ಅರ್ಚನೆಯನ್ನು ಬಣ್ಣಿಸಿ "ರಸತೋಯ"ವನ್ನು ಮೊದಲು ಹೇಳುತ್ತಾನೆ. ಅಲ್ಲದೆ ಸುಮನಸರ್ಗೆ ತನ್ನ ಕಾವ್ಯದ ರಸಂ ಚಂದ್ರನಂತೆ ಇಷ್ಟವಾಗದೆ ಇರದೆಂದು ಆತನ ನಂಬಿಕೆ. ಸತ್ಕವಿಯೆನಿಸಬೇಕಾದರೆ "ಕವಿಮಾರ್ಗದೊಳೊಳಪೊಕ್ಕುಂ ನವರಸಮಂ ನುಡಿಯ" ಬೇಕೆಂದು ರನ್ನನ ಅಭಿಪ್ರಾಯ. ಹಾಗೆ ಹೇಳದೆ ಮುಚ್ಚಿಪೋದ ಕವಿ ಗೂಡಾರದ ಕವಿ. ಕಸಮಂ ಪಿಡಿಯದೆ ರಸಘಟ್ಟೆಯನರಸಬೇಕು. ಕವಿಯು ರಸವತ್ಕೃತಿಯನ್ನು ಪೇಳಬೇಕೆಂದು ಜನ್ನನ ಅಭಿಪ್ರಾಯ. ಅಲ್ಲದೆ ರಸಸ್ಯಂದಿಗಳಾದ ಮಾತುಗಳಿಂದ ಮನಮಂ ಸಲೆ ಸೋಲಿಪ ಕಾವ್ಯ ಬೇಕೆಂದು ಆತನು ಹೇಳುತ್ತಾನೆ.

ಕಾವ್ಯದ ಕಮನೀಯತೆಗೆ ಮೃದುಪದಬಂಧವು ಅವಶ್ಯ ಬೇಕೆಂದು ಪ್ರಾಚೀನ ಕನ್ನಡ ಕವಿಗಳ ಅಭಿಪ್ರಾಯ. ಲಲಿತಪದಮಿಲ್ಲದ ಕಾವ್ಯವು ಕೇಡೆಂದು ಕನ್ನಡದ ಆದಿಕವಿ ಪಂಪನು ಹೇಳುತ್ತಾನೆ. ನಾಗಚಂದ್ರನಾದರೋ ತನ್ನ ಕಾವ್ಯವು ಮೃದುಪದಬಂಧದಿಂದ ಮೆಚ್ಚಿಗೆ ಪಡೆಯುವುದೆಂದು ತಿಳಿಯುತ್ತಾನೆ. ಅಲ್ಲದೆ ತನ್ನ "ಪದರಚನೆ ಸಜ್ಜನ ಶ್ರವಣದೊಳಂಚೆಯ ತುಪ್ಪುಳಂಚೆಯಿಂ ತಿರುಪಿದವೋಲ್ ಮೃದುವೆನೆ" ಎಂದು ಭಾವಿಸುತ್ತಾನೆ. ಕವಿಚೂತವನಚೈತ್ರನಾದರೋ ತನ್ನ

ಕಾವ್ಯವು "ವಾಣಿ ವೀಣೆಯಿಂ ಗಾನಮಂ ನುಡಿಸುವಂದದೆ" ಎಂದು ತಿಳಿಯುತ್ತಾನೆ. ಆತನ ಕಾವ್ಯ ಮೃದುಪದವಿಲಾಸದಿಂದ ನೆಗಳ್ತೆವಡೆದಿದೆ. ರಾಜವಿದ್ವತ್ಸಭಾಕಳ ಹಂಸಂ, ಕವಿಭಾಳಲೋಚನಂ ಆದ ಜನ್ನನು "ಕಳಕಂಠಸ್ವನಮಂ, ಪಳಂಚಲೆವ ಶಬ್ದ"ಗಳಿಂದ ಕಾವ್ಯವು ಇಳಾ ಸಂಸೇವ್ಯವಾಗಬಹುದೆಂದು ತಿಳಿಯುತ್ತಾನೆ. ಷಡಕ್ಷರದೇವನಿಗೆ ಕೃತಿಕಾಂತೆಯು ಮೃದುಪದವಿನ್ಯಾಸೆಯಾಗಿರಬೇಕು. ಆದರೆ ಇಲ್ಲಿ ಷಡಕ್ಷರದೇವನು ಒಂದು ಎಚ್ಚರಿಕೆ ಕೊಟ್ಟಿದ್ದಾನೆ. ಮಂಜುಳ ಯುಕ್ತಿಯೊಂದರಿಂದಲೇ ಕಾವ್ಯವು ಧನ್ಯತೆಯನ್ನು ಪಡೆಯಲಾರದು. ಅಳಿಗಬ್ಬಿಗನೊಬ್ಬನು ಮಂಜುಳ ಯುಕ್ತಿಯೊಂದನ್ನು ಪಡೆದಿರಬಹುದು. ಅಷ್ಟರಿಂದಲೆ ಆತನು ಶ್ರೇಷ್ಠ ಕವಿಯಾಗಲಾರನು. ಅಂತಹನು ರನ್ನಮೊಂದಂ ತಳೆದ ಅಹಿಯಂತಿರಬಹುದು. ಆದರೆ ಆತನು ರತ್ನಾಕರಕ್ಕೆ ಸರಿಯಾಗಲಾರನಷ್ಟೇ. ಷಡಕ್ಷರದೇವನ ಈ ಕುಶಲತನದ ಉಕ್ತಿ ಮನನೀಯವಾಗಿದೆ. ಈ ಮಾತನ್ನು ಆಧುನಿಕ ಕನ್ನಡ ಕವಿಗಳು ಚೆನ್ನಾಗಿ ಗಮನಿಸಬೇಕಾಗಿದೆ. ರಸ, ಮೃದುಪದಗಳ ಜೊತೆಗೆ ಶ್ರೇಷ್ಠ ಕಾವ್ಯದಲ್ಲಿ ಅರ್ಥವು ಮುಖ್ಯವಾಗಿರಬೇಕು. ನಾಗಚಂದ್ರನ 'ಅರ್ಥವ್ಯಕ್ತಿ' ಸುಪ್ರಸಿದ್ಧವಿದೆ. ಲಾಕ್ಷಣಿಕ ನಾಗವರ್ಮನು ಅರ್ಥಯುಕ್ತವಾಗಿ ಕಾವ್ಯ ರಚಿಸಬೇಕೆಂದು ಹೇಳುವಂತೆ ಬಹು ಜನರು ಹೇಳಿದ್ದಾರೆ. ಪುರುಳಿಲ್ಲದ ನುಡಿ ಕಾವ್ಯವಾಗಲಾರದು. ಅರ್ಥಕ್ಕೆ ಕುಧಿದು ಅಬಲೆಯಾದ ಸರಸತಿಯ ಗೋಣ್ಮುರಿಯುವವನು ಪಾತಕಿಯೆಂದು ನಿಷ್ಠುರವಾದರೂ ಸತ್ಯವಾಗಿ ರನ್ನನು ಹೇಳುತ್ತಾನೆ. ಅರ್ಥವು ಕಾವ್ಯದ ಜೀವವೆಂದು ಕೆಲವು ಲಾಕ್ಷಣಿಕರು ಹೇಳಿದ್ದಾರೆ. ಪಂಪನ ಕವಿತೆ "ಸಕಳಾರ್ಥ ಸಂಯುತ"ವಾಗಿದೆ. ಕಾವ್ಯಜ್ಞರು ರಸ, ಭಾವ, ರಚನೆಗಳೊಂದಿಗೆ ಅರ್ಥವನ್ನು ಆರಯ್ಯಬೇಕೆಂದು ನಾಗಚಂದ್ರನ ಅಭಿಪ್ರಾಯ. ಆದಿಪಂಪನ ಸೂಕ್ತಿಗರ್ಭವು ಪ್ರಶಂಸನೀಯವಾಗಿದೆ. ಸವಿವಾತಿನ ಜೊತೆಗೆ ಸರಸಾರ್ಥ ಬೇಕೆಂಬುದು ಷಡಕ್ಷರದೇವನ ಅಭಿಪ್ರಾಯ. ಸಲೆ ಸದರ್ಥಮಮಂ ಕಾಣದ ಬಗೆಗುರುಡರ್ ಕಬ್ಬಿಗರಕ್ಕುಮೇ ಎಂದು ನೇಮಿ ಕೇಳುತ್ತಾನೆ. ಪುರುಳಿಲ್ಲದ ಅಹಂಕಾರದೊಳೆ ಬಾತು ಬಲ್ಮೆಗೆ ಹಾರೈಸುವ ಬಯಕೆಗವಿಯು ನೀರೊಳಗಿನ ಪೆಣದಂತೆ ಎಂದು ಆತನು ತಿರಸ್ಕರಿಸುತ್ತಾನೆ.

ಕಾವ್ಯಕ್ಕೆ ಅಲಂಕಾರವು ಬೇಕೇ ಎಂಬ ಲಾಕ್ಷಣಿಕರ ಚರ್ಚೆ ಸ್ವಾರಸ್ಯವಾಗಿದೆ. ನುಡಿದೊಡವುಗಳು ಬಾಹ್ಯ ಅಲಂಕಾರಗಳಂತೆಯೂ, ಪುರುಳ್ತೊಡವುಗಳು ಅಂತಸ್ಥ ಉಜ್ವಲ ಗುಣಗಳಂತೆಯೂ ಶೋಭಿಸುತ್ತಿವೆಯೆಂದು ಒಬ್ಬ ಲಾಕ್ಷಣಿಕನ ಅಭಿಪ್ರಾಯ. ಕನ್ನಡ ಕವಿಗಳಾದರೋ ಅಲಂಕಾರವನ್ನು ಬಿಟ್ಟು ಕಾವ್ಯ ರಚಿಸಲಾರರು. ಲಾಕ್ಷಣಿಕನಲ್ಲದಿದ್ದರೂ ಲಕ್ಷ್ಮೀಶನು ಲಾಕ್ಷಣಿಕರಂತೆ "ಛಂದಸ್ಸು,

ಲಕ್ಷಣ,ಅಲಂಕಾರ,ಭಾವ, ರಸಮೊಂದಿ ಕಳಿವೆತ್ತ ಸತ್ಕೃತಿ-ಚಮತ್ಕೃತಿಯುಕ್ತಮೊಂದು ಮಿಲ್ಲದ ಕಾವ್ಯಂ ಅಶ್ರಾವ್ಯಂ ಅಹುದೆ"ಂದು ಹೇಳುತ್ತಾನೆ. ದೇವಪುರದ ಲಕ್ಷ್ಮೀ ಕಾಂತನ ವಿಲಸಿತದ ಕೃತಿಲಲನೆ ಪಲವಲಂಕಾರಗಳಿಂದ ಪರಿರಂಜಿಸುತ್ತಾಳೆ. ಆ ಸಕಳಾರ್ಥಸಂಯುತವಾದ ಪಂಪನ ಕಾವ್ಯವು ಅಳಂಕೃತಿಯುಕ್ತವೂ ಅಹುದು; ಷಡಕ್ಷರದೇವನ ಕೀರ್ತಿಸಖಿ, ಕಾವ್ಯಕಾಂತೆ, ಮೃದುಪದವಿನ್ಯಾಸೆಯಿದ್ದಂತೆ ವಿತತಾ ಲಂಕಾರ ವಿಭ್ರಾಜಿತೆಯೂ ಅಹುದು. ಆದರೆ ಈ ಅಲಂಕಾರಗಳ ಅತಿಮೋಹದಿಂದ ಕನ್ನಡ ಕವಿತೆ ಹದಗೆಟ್ಟುದೂ ಉಂಟು. ಭಾರವಾದ ಅಲಂಕಾರಗಳಿಂದ ಕನ್ನಡ ಕಾವ್ಯವನಿತೆ ಒಮ್ಮೊಮ್ಮೆ ಲಂಬಾಣಿ ಹೆಂಗಸಿನಂತೆ ತೋರುತ್ತಾಳೆ. ಅರ್ಥವಿಲ್ಲದ ಅಲಂಕಾರಕ್ಕೆ ಮಾತ್ರ ಕಟ್ಟುಬಿದ್ದರೆ ಕಾವ್ಯವು ಕೀಳಾಗದೆ ಇರದು. ಈ ಮಾತನ್ನು ಕೆಲ ಕನ್ನಡ ಕವಿಗಳು ಅರಿಯದೆ ಇಲ್ಲ. ಮಧುರನು ಈ ಅನುಚಿತವಾದ ಅಲಂಕಾರದ ಹೊರೆಯನ್ನು ಅಲ್ಲಗಳೆದಿದ್ದಾನೆ. "ಬಡವರ ತೊಟ್ಟಿನ ಶೃಂಗಾರದಂತೆ ತಳ್ತಳವ ಟ್ಟಿರಲವಯವಮೊಳ್ತೂಗದ ಕೃತಿಯೊಳಿಟ್ಟಲಂಕಾರ" ಹಾಸ್ಯಾಸ್ಪದವಾಗುತ್ತದೆ. ಜನ್ನನಾದರೋ ತನ್ನ ಚರಿತ ಪುರಾಣವನ್ನು "ಅರುಹನ ಮೂರ್ತಿಯಂತೆ ನಿರಾ ಭರಣಂ ಮೆರೆಯಲ್ಕೆ ಪೇಳ್ದಪೆ"ನೆಂದು ಹೇಳುತ್ತಾನೆ. ಆದರೂ ಒಟ್ಟಿನ ಮೇಲೆ ಕನ್ನಡ ಕಾವ್ಯಗಳಲ್ಲಿ ಅಲಂಕಾರಗಳ ಗಲಭೆ ಹೆಚ್ಚು.

ಪೂರ್ವ ಕವಿಗಳ ಸಂಪ್ರದಾಯವನ್ನು ಅನುಸರಿಸಿಯೇ ಹಳಗನ್ನಡ ಕಾವ್ಯವು ಬಳೆದು ಬಂದಿದೆ. ಹರಿಹರ, ರಾಘವಾಂಕ, ರತ್ನಾಕರವರ್ಣಿ, ಸರ್ವಜ್ಞರಂತಹ ಕ್ರಾಂತಿಕಾರಕ ಕವಿಗಳನ್ನು ಬಿಟ್ಟರೆ ಕನ್ನಡ ಕಾವ್ಯವೆಲ್ಲ ಸಂಪ್ರದಾಯ ಶೃಂಖಲಾ ಬದ್ಧವಾಗಿದೆಯೆಂದೇ ಹೇಳಬೇಕು. "ಬಗೆಯರಿದರ್ ಆವ ಲಕ್ಷಣದಿಂದೆ ಮುನ್ನ ಕಬ್ಬಂಗಳಂ ಉಸುರಿದರ್ ಅದೇ ಲಕ್ಷ್ಯಮಲ್ಲದೆ ಪೆರತು ಎನಗೆ ಸಲ್ಲದುದರಿಂದೆ ಪೂರ್ವ ಸತ್ಕವಿಗಳಿಗೆ ನಮಿಸಿ ಕೃತಿವೇಳ್ವೆ" ಎಂದು ಕವಿಜೂತವನ ಚೈತ್ರನೇ ಕಾವ್ಯಾರಂಭ ಮಾಡುತ್ತಾನೆ. ಬಹುಜನರು ಹೀಗೆ ಸ್ಪಷ್ಟವಾಗಿ ಹೇಳದಿದ್ದರೂ ಈ ರೀತಿಯ ನ್ನೇನೋ ಅನುಸರಿಸಿದ್ದಾರೆ. ಇದರಿಂದ ವರ್ಣನೆಗಳಲ್ಲಿ ವೈವಿಧ್ಯವಾಗಲಿ ಹೃದ ಯಂಗಮ ಆತ್ಮೀಯತೆಯಾಗಲಿ ಕನ್ನಡ ಕಾವ್ಯಗಳಲ್ಲಿ ಹೆಚ್ಚಾಗಿ ಕಂಡುಬರುವದಿಲ್ಲ. ಸಮುದ್ರವನ್ನು ಕವಿಯು ನೋಡಲಿ ನೋಡದಿರಲಿ, ಅದನ್ನು ವರ್ಣಿಸಬೇಕೆಂದು ಕವಿಗೆ ಅನಿಸಲಿ ಅನಿಸದೆ ಇರಲಿ, ಅದನ್ನು—

> ನಳಿನೀ ಗರ್ಭಾಂಡಮೂಲಾಫಳಿತಮೆನಿಪ ಪೃಥ್ವೀ ಮಹಾವಲ್ಲಿಯಂ ಮುಂ
> ಡಳಿಸಿರ್ದಾವಾಲದಂತಿರ್ಪುದು ಜಲಚರಸಂಭೂತ ಸಂಪದ್ವಿಧಾನಂ।
> ವಿಳಸದ್ರುತ್ನ ಪ್ರತಾನಂ ಕುಲಗಿರಿ ಶರಣಸ್ಥಾನಮುತ್ಕೀರ್ಣ ಫೇನಂ
> ಬಳವದ್ವೀಚೀವಿತಾನಂ ಪ್ರಬಳ ಘುಳುಘುಳು ಧ್ವಾನಮಂಭೋನಿಧಾನಂ॥

ಎಂದು ವರ್ಣಿಸಿಯೇ ತೀರಬೇಕು. ಹೀಗಾಗಿ ಸ್ವತಂತ್ರ ರೀತಿಯ ಕಾವ್ಯ ನಿರ್ಮಾಣ ವಾಗಲಿ, ಅದಕ್ಕನುಗುಣವಾಗಿ ಬೆಳೆಯಬಹುದಾದ ವಿಮರ್ಶೆಯಾಗಲಿ ಕನ್ನಡಕ್ಕೆ ದೊರೆಯಲಿಲ್ಲವೆಂಬ ಮಾತನ್ನು ಒಪ್ಪದೇ ನಿರ್ವಾಹವಿಲ್ಲ. ನಾಗಚಂದ್ರನಂತಹನೂ ಕೂಡ "ಆದಿ ಕವೀಶ್ವರರ್ ನಡೆದ ಪದ್ಧತಿಯಿಂ ತನಗರ್ಥಶುದ್ಧಿ "ಯೆಂದು ಬಗೆದು ಆ ರಾಜವೀಥಿಯೊಳೆ ಹೊರಟಿದ್ದಾನೆ. ರತ್ನಾಕರವರ್ಣಿಯು ಮಾತ್ರ "ಪ್ರಚುರದಿ ಪದಿನೆಂಟು ರಚನೆಯ ಕಾವ್ಯ ರಚಿಸುವರಾ | ಉಚಿತಕ್ಕೆ ತಕ್ಕಷ್ಟು ಪೇಳ್ವೆಂ" ಎಂಬ ಹೊಸ ಹಾದಿಯನ್ನು ತುಳಿದಿದ್ದಾನೆ. ಅದೇನಿದ್ದರೂ ಹಳೆಗನ್ನಡ ಕಾವ್ಯವಿಮರ್ಶ ಪದ್ಧತಿಯು ಈ ರಾಜವೀಥಿಯಲ್ಲಿಯೇ ಅಡಕವಾಗಿದೆಯೆಂದು ಹೇಳಬಹುದು. ಈ ಪಡಿಯಚ್ಚಿನ ರಾಜವೀಥಿಯ ಮೂಲಕ ಸ್ವತಂತ್ರವಾದ ವಿಮರ್ಶಮಾರ್ಗ ಬೆಳೆಯುವುದು ಸಾಧ್ಯವಾಗಲಿಲ್ಲ. ಅಲ್ಲದೆ ಕೃತಿಯನ್ನು "ಪಂಡಿತರುಂ ನಿವಿಧ ಕಳಾ ಮಂಡಿತರುಂ" ಆದವರೇ ಕೇಳಬೇಕು; ಕಂಡವರು ಕೇಳುವದಕ್ಕೆ ಅದೇನು "ಗೊರವರ ದುಂಡುಚಿಯೇ, ಬೀದಿವಱಿಯ ಬೀರನ ಕತೆಯೇ" ಎಂಬ ಜಂಭದಿಂದ ಹೊರಟ ಕವಿಗಳೇ ನಮ್ಮಲ್ಲಿ ಹೆಚ್ಚು.

ಕಾವ್ಯವು "ಜಾರ ಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಿಂ ಬಱಿಕೆಯ್ವ ಚರ್ಚೆಯಾಗಿರಕೂಡದೆಂದೂ, ಅದು "ಬಾಳಬಟ್ಟೆಯ ಪರಮಾಗಮ" ವಾಗಿರಬೇಕೆಂದೂ ಜನ್ನನು ಹೇಳುವಲ್ಲಿ ಕಾವ್ಯೋದ್ದೇಶ ವ್ಯಕ್ತವಾಗಿದೆ.

ಕಾವ್ಯವು ಅಕಳಂಕವಾಗಿರಬೇಕೆಂದು ಕನ್ನಡ ಕವಿಗಳು ಹೇಳುತ್ತಾರೆ. ಅಂತಹ ಅಕಳಂಕಗಳನ್ನು ಜನ್ನ ಕವಿಯು ಒಂದೆಡೆಗೆ ಸಂಗ್ರಹಿಸಿದ್ದಾನೆ.

ಉಭಯ ಕವಿಚಕ್ರವರ್ತಿಯ
ಸಭೆಯಿಂ ಪುಗಲಣ್ಮವಲ್ತೆ ಪದ ವಾಕ್ಯಾರ್ಥ |
ಪ್ರಭವ ಕಲಂಕಮಲಂಕಾ
ರ ಭಾವ ರಸ ರೀತಿ ದೂಷಣಾಭಾಸಂಗಳ್ ||

ಕಾವ್ಯದಲ್ಲಿ "ಪದವಾಕ್ಯಾರ್ಥಪ್ರಭವಕಲಂಕಂ, ಅಲಂಕಾರ ಭಾವರಸ ರೀತಿ ದೂಷಣಾಭಾಸಂಗಳ್" ಬರಕೂಡದೆಂಬ ವಿಧಿಯಿತ್ತೆಂದು ಇದರಿಂದ ತಿಳಿಯುತ್ತದೆ. ಇದೊಂದು ಆಗಿನ ಕಾವ್ಯ ವಿಮರ್ಶೆಯ ತತ್ತ್ವವಾಗಿದೆ. ಪದವಿನ್ಯಾಸಮಂ ಅಱಿಯದೆ, ಸ್ವಾರಸ್ಯಮಂ ಅಱಿಯದೆ, ವರಪ್ರತಿಭೆಯ ಗುಣ್ಪಱಿಯದೆ ಕವಿತ್ವ ರಚಿಸಕೂಡದೆಂಬ ವಿಧಿಯನ್ನು ಜನ್ನನು ಹೇಳುತ್ತಾನೆ. ಕಾವ್ಯವನ್ನು "ಸಹಜಂ ಪೇಳ್ದುದು, ಮುನ್ನೆವೇಳ್ದುದು ಪದವ್ಯುತ್ಪತ್ತಿವೇಳ್ದಿಂ" ಎಂದು ಹೇಳಿ ಅಂತಹ ಕಾವ್ಯರಚನೆಗೆ "ಬಹುಕಾವ್ಯಾನುಭವಂ, ಕಳಾಪ್ರತಿಭೆ, ಲೋಕಜ್ಞಾನ ಆತ್ಮಾಗಮಸ್ಪೃಹೆ"ಗಳು

ಬೇಕೆಂದು ಅಭಿಪ್ರಾಯಪಡುತ್ತಾನೆ. ಕಿರಿದರೊಳ್ ಪಿರಿದರ್ಥಮಂ ಪೇಳುವ ಜಾಣ್ಮೆ ಕವಿಗೆ ಆವಶ್ಯಕವೆಂಬ ಮಾತು ಪ್ರಾಚೀನ ಕಾವ್ಯಗಳಲ್ಲಿ ಹೇಳಲ್ಪಟ್ಟಿದ್ದರೂ ಆ ಹೇಳಿಕೆಯನ್ನು ಅನುಸರಿಸಿದವರು ಕಡಮೆಯೇ ಸರಿ. ತಮ್ಮ ಕಾವ್ಯವು 'ಪೊಚ್ಚ ಪೊಸತು' ಎಂದು ಹೇಳಿಕೊಂಡಿದ್ದರೂ "ಪುರಾಣಮಾರ್ಗ ಪದ್ಧತಿ"ಯ ಅನು ಯಾಯಿಗಳೇ ನಮ್ಮಲ್ಲಿ ಹೆಚ್ಚಾಗಿದ್ದಾರೆ.

ಪೂರ್ವದ ಕವಿಗಳನ್ನು ಹೊಗಳುವಾಗ ಕನ್ನಡ ಕವಿಗಳು ತಮಗೆ ಒಪ್ಪಿಗೆ ಯಾದ ಗುಣಗಳು ತಮ್ಮ ಕಾವ್ಯಗಳಲ್ಲಿರಬೇಕೆಂದು ಕೋರುತ್ತಾರೆ. ಇಂತಹ ಉಕ್ತಿಗಳು ಪ್ರಾಚೀನ ಕನ್ನಡ ಕಾವ್ಯಗಳ ವಿಮರ್ಶರೀತಿಯನ್ನು ಅರಿಯಲಿಕ್ಕೆ ಸಹಾಯಕಾರಿಗಳಾಗುತ್ತವೆ. ಜನ್ನನು ಗುಣವರ್ಮನ ಜಾಣ್ನುಡಿಯನ್ನು, ಪಂಪನ ಇಂಪನ್ನು, ಪೊನ್ನನ ಬಗೆಯನ್ನು, ನಾಗವರ್ಮನ ಬಹುಜ್ಞತೆಯನ್ನು, ರನ್ನನ ಕಾಂತಿಯನ್ನು, ನಾಗಚಂದ್ರನ ರಸಭಾವವನ್ನು. ಅಗ್ಗಳನ ವಕ್ರತೆಯನ್ನು, ನೇಮಿಯ ದೇಸಿಯನ್ನು, ಪುಷ್ಪಬಾಣನ ಮೃದುಬಂಧವನ್ನು ಹೊಗಳುತ್ತಾನೆ. ರುದ್ರ ಭಟ್ಟನು ಶಂಖವರ್ಮನ ಬಗೆಯನ್ನು, ಶಾಂತಿವರ್ಮನ ನಯವನ್ನು, ಗುಣವರ್ಮನ ಬಂಧಗೌರವವನ್ನು, ಮನಸಿಜನ ಓಜೆಯನ್ನು, ಕರ್ಣಮನ ಜಾಣ್ನುಡಿಯನ್ನು, ಪಂಪನ ರೀತಿಯನ್ನು, ಚಂದ್ರಭಟ್ಟನ ಜತೆಯನ್ನು ಪೊನ್ನಮಯ್ಯನ ಬೆಡಂಗನ್ನು, ಗಜಾಂಕುಶನ ಒಳ್ಪ ಬಿನ್ನಣವನ್ನು ಬಣ್ಣಿಸುತ್ತಾನೆ. ಇಂತಹ ಮಾತುಗಳಿಂದ ಆಗಿ ನವರ ವಿಮರ್ಶೆಯ ರೀತಿಯನ್ನು ನಾವು ಅರಿಯಬಹುದಾಗಿದೆ. ಹೀಗೆ ಸಂಗ್ರಹಿಸಿದ ರೀತಿಗಳಿಂದ ಹಳಗನ್ನಡ ಕಾವ್ಯಗಳನ್ನು ಅಳೆಯುವದು ಉಪಯುಕ್ತವೆಂದು ತೋರ ಬಹುದು. ಈ ಪ್ರಬಂಧವು ಅಂತಹ ಪ್ರಯತ್ನಕ್ಕೆ ಒಂದು ಸೂಚನೆಯಾಗಬಹು ದೆಂದು ನಾನು ನಂಬುತ್ತೇನೆ.

# ಸಾಹಿತ್ಯವು ಬಾಳ ಬಟ್ಟೆಯ ಪರಮಾಗಮ

ಕನ್ನಡ ಸೋದರ ಸೋದರಿಯರೆ, ಕನ್ನಡಿಗರು " ಚದುರರ್ನಿಜದಿಂ ಕುಱಿ ತೋದದೆಯುಂ ಕಾವ್ಯ ಪರಿಣತಮತಿಗಳ್ " ಎಂಬುದಾಗಿ ನೃಪತುಂಗದೇವನು ಹೇಳಿದ್ದಾನೆ. ಆ ಮಾತಿಗೆ ಉತ್ತಮ ನಿದರ್ಶನವೆಂಬಂತೆ ಇದ್ದ " ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ "ಯ, " ಕಂಠ ಪತ್ರದ ಉಲುಹುಗೆಡದಗ್ಗಳಿಕೆ "ಯ ಸಹಜ ಕವಿ ನಾರಾಯಣಪ್ಪನ ಕಾವ್ಯ ನಿರ್ಮಾಣದ ರಂಗಸ್ಥಲವಾದ ಗದುಗಿಗೆ ಇಂದು ಕನ್ನಡ ಶಾರದೆಯ ಪೂಜಾ ಸಮಾರಂಭಕ್ಕೆ ಪೂಜಾರಿಯಾಗಿ ಬರುವ ಸುಯೋಗ ನನಗೆ ದೊರೆತುದಕ್ಕೆ ವಿಶೇಷ ಆನಂದವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಕರ್ನಾಟಕ ಸಾಂಸ್ಕೃತಿಕ ಪೋಷಣೆಗೆ ಸಾಹಿತ್ಯ ಸಮ್ಮೇಲನಗಳು ಉತ್ತಮ ಸಾಧನಗಳೆಂದು ನಾನು ದೃಢವಾಗಿ ನಂಬಿದ್ದೇನೆ. ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಲನವಲ್ಲದೆ ಇನ್ನೂ ಅನೇಕ ಸಮ್ಮೇಲನಗಳು ಅಲ್ಲಲ್ಲಿ ಆಗಾಗ ನಡೆಯುವುದು ಕನ್ನಡ ಸಾಹಿತ್ಯ ಪ್ರಚಾರದ ದೃಷ್ಟಿಯಿಂದ ಅವಶ್ಯವೆಂದು ನನ್ನ ಅಭಿಪ್ರಾಯ. ಅದಕ್ಕಾಗಿಯೇ ಧಾರವಾಡ ಜಿಲ್ಲಾ ಮೊದಲನೆಯ ಸಾಹಿತ್ಯ ಸಮ್ಮೇಲನವು ನಡೆಯುವುದಕ್ಕೆ ನಾನು ಸ್ವಲ್ಪ ಉತ್ಸಾಹ ತೋರಿಸಿದ್ದೆ. ತಮ್ಮ ಆಮಂತ್ರಣವನ್ನು ನಾನು ಒಪ್ಪಿದುದಕ್ಕೆ ಅದೂ ಕೆಲಮಟ್ಟಿಗೆ ಕಾರಣವಾಯಿತೆಂದು ಹೇಳಬಯಸುತ್ತೇನೆ. ಸಾಹಿತ್ಯ ನಿರ್ಮಾಣ ಕರ್ತರಿಗೆ ಉತ್ಸಾಹವನ್ನೂ ಬೆಂಬಲವನ್ನೂ ಕೊಡುವ, ಹಾಗೂ ನಿರ್ಮಾಣವಾದ ಸಾಹಿತ್ಯದ ಪರಿಚಯವನ್ನು ಜನಸಾಮಾನ್ಯರಿಗೆ ಮಾಡಿಕೊಡುವ ಉದ್ದೇಶದಿಂದ ಜಿಲ್ಲಾ ಸಾಹಿತ್ಯ ಸಮ್ಮೇಲನದ ಕಲ್ಪನೆಯನ್ನು ಮುಂದುವರಿಸಿದ ತಮ್ಮನ್ನು ಅಭಿನಂದಿಸುವುದು ನನ್ನ ಕರ್ತವ್ಯವೆಂದು ತಿಳಿಯುತ್ತೇನೆ.

ಸಾಹಿತ್ಯ ಸಮ್ಮೇಲನಗಳು ಹೆಚ್ಚಬೇಕೇದೇನೋ ನಾನು ಹೇಳಿದೆ. ಆದರೆ ಜಾಗತಿಕ ರಾಜಕೀಯ ಕ್ಷೇತ್ರವಲ್ಲಿ ನಡೆದಿರುವ ರಣಕೋಲಾಹಲ, ಭಾರತದ ಅಪೂರ್ವ ರಾಜಕೀಯ ಆಂದೋಲನ, ದೀನರಾದ ಭಾರತೀಯರ ಆರ್ಥಿಕ ದೈನ್ಯ— ಇವುಗಳೇ ಹೆಚ್ಚಾಗಿ ನಮ್ಮ ಮನಸ್ಸನ್ನು ಸೆಳೆದಿರುವಾಗ, ಸಾಹಿತ್ಯದಂತಹ ವಿಷಯ ಗಳಿಗೆ ಹೆಚ್ಚಾಗಿ ಗಮನಕೊಡುವುದು ಅವಶ್ಯವಿದೆಯೇ ಎಂದು ಯಾರಾದರೂ ಕೇಳಿದರೆ ಆ ಪ್ರಶ್ನೆಯು ಅಸಮಂಜಸವೆಂದು ಹೇಳಲಾಗದು. ಆದರೆ ಜಗತ್ತಿನ, ಭಾರತದ, ಕರ್ನಾಟಕದ ವಿಷಮ ಸ್ಥಿತಿಯಲ್ಲಿಯೂ ಕೂಡ ಸಾಹಿತ್ಯಕ್ಕೆ ಗಮನ ಕೊಡುವುದು ಅವಶ್ಯವಿದೆಯೆಂಬುದನ್ನು ಮಾತ್ರ ನಾನು ಹೇಳಲಿಚ್ಛಿಸುತ್ತೇನೆ. ಹೀಗೆ ಹೇಳುವಾಗ ನಾನು, "ಹಿತೇನ ಯುಕ್ತಂ ಸಹಿತಂ, ತಸ್ಯ ಭಾವಃ ಸಾಹಿತ್ಯಂ" ಹಾಗೂ "ಸಹಾನಾಂ ಜನಾನಾಂ ಉಪಕಾರಕಂ ಸಾಹಿತ್ಯಂ" ಎಂಬ ಸಾಹಿತ್ಯದ ವ್ಯಾಖ್ಯೆಗಳನ್ನು ಅನುಮೋದಿಸುತ್ತೇನೆ. ಸಾಹಿತ್ಯವು ಮನುಷ್ಯನ ಹಿತವನ್ನೇ ಗುರಿ ಯಾಗಿಟ್ಟುಕೊಂಡಿರಬೇಕು; ಸಾಹಿತ್ಯವು ಜನತೆಯ ಉಪಕಾರಕ್ಕಾಗಿಯೇ ಇರಬೇಕು ಎಂಬ ಅಭಿಪ್ರಾಯಗಳನ್ನು ನಾವು ಒಪ್ಪುವುದಾದರೆ — ಒಪ್ಪಬೇಕು — ಭಾರತದ ಇಂದಿನ ವಿಷಮಪರಿಸ್ಥಿತಿಯಲ್ಲಿಯೂ ಕೂಡ ಸಾಹಿತ್ಯ ಸಮ್ಮೇಲನಗಳ ಅವಶ್ಯಕತೆ ಇದೆಯೆಂದು ಒಪ್ಪಬೇಕಾಗುತ್ತದೆ. ನಾಡುಗಳು ದೇಶದ ಘಟಕಗಳು. ನಾಡುಗಳ ನೆಮ್ಮದಿಯು ದೇಶದ ನೆಮ್ಮದಿಗೆ ಸಹಾಯಕಾರಿಯಾಗುವುದು. ಅಂತೆಯೆ ಕನ್ನಡ ನಾಡು ತನ್ನ ನೆಮ್ಮದಿಗಾಗಿ ಸಾಹಿತ್ಯದ ಸಂಬಂಧವಾಗಿ ವಿಚಾರ ಮಾಡುವುದು ಅವಶ್ಯವಷ್ಟೆ.

ಸಾಹಿತ್ಯವು ಮನರಂಜನೆಯ ಸಾಧನವೆಂಬ ಕಲ್ಪನೆ ಕೆಲವರಲ್ಲಿ ಬಳೆದು ಬಂದಿದೆ. ಆದರೆ ನಮ್ಮ ಕನ್ನಡ ಸಾಹಿತ್ಯದ ನಿಜವಾದ ತಿರುಳನ್ನು ನಾವು ಪರಿಕ್ಷಿ ಸುವದಾದರೆ ಸಾಹಿತ್ಯಕ್ಕೆ ನಮ್ಮ ಜೀವನದಲ್ಲಿ ಹೆಚ್ಚಿನ ಸ್ಥಾನ ಕೊಡುವುದು ಅವಶ್ಯ ವೆಂದು ಕಂಡುಬರುವುದು. ಸಾಹಿತ್ಯದಲ್ಲಿ ನಾವು ಶಬ್ದಶಕ್ತಿಯ ಪರಾಕಾಷ್ಠತೆಯನ್ನು ಕಾಣುತ್ತೇವೆ. ವಾಕ್ಯಕ್ತಿಯನ್ನು ಮಹಾಕವಿ ದಂಡಿಯು—

ಇಹಶಿಷ್ಟಾನುಶಿಷ್ಟಾನಾಂ ಶಿಷ್ಟಾನಾಮಪಿ ಸರ್ವದಾ
ವಾಚಾಮೇವ ಪ್ರಸಾದೇನ ಲೋಕಯಾತ್ರಾ ಪ್ರವರ್ತತೇ
ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಂ
ಯದಿ ಶಬ್ದಾಹ್ವಯಂ ಜ್ಯೋತಿಃ ಆಸಂಸಾರಂ ನ ದೀಪ್ಯತೇ

ಮನುಷ್ಯನು ಶಿಷ್ಟನಿರಲಿ, ಇಲ್ಲದೆ ಇರಲಿ, ಆತನ ಜೀವನದ ಎಲ್ಲ ವ್ಯವಹಾರಗಳಲ್ಲಿ ಶಬ್ದಶಕ್ತಿಯ ಪ್ರಭಾವವಿದ್ದೇ ಇದೆ. ವಾಕ್ಯಕ್ತಿಯು ಪ್ರಪಂಚದ ಅಂಧಕಾರವನ್ನು

ಹೊಡೆದೋಡಿಸುವ ಜ್ಯೋತಿಯಾಗಿದೆ. ವಾಗ್ಜ್ಯೋತಿಯಿಲ್ಲದಿದ್ದರೆ, ಸಂಸಾರವು ಅಂಧಕಾರದಲ್ಲಿ ಮುಳುಗಿಹೋಗುವುದು. ಒಬ್ಬ ಕನ್ನಡ ಕವಿ, ಸಕಲ ಜನಾಂತಸ್ಥ ಳದ ತಮವನ್ನು ಹೊಡೆದೋಡಿಸುವ ಕವಿಗಳು ಎಮಗೆ ವಂದ್ಯರು ಎಂಬುದಾಗಿ ವಾಗ್ಜ್ಯೋತಿಯನ್ನು ನೀಡುವ ಕವಿರೂಪದ ರವಿಗಳನ್ನು ಹೊಗಳುತ್ತಾನೆ. ಶಬ್ದಶಕ್ತಿಯನ್ನು "ಆವಾವಿಂದ್ರಿಯದ ವಿಷಯಮಂ ಶ್ರೋತ್ರದೊಳುದ್ಭಾವಿಪ" ಎಂಬುದಾಗಿ ಕೇಶಿರಾಜನು ಬಣ್ಣಿಸುತ್ತಾನೆ. ನೇಮಿಚಂದ್ರನು—

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರೊತ್ತಿ ಮೆಟ್ಟಿದರದೇನಳವಗ್ಗಳಮೋ ಕವಿಂದ್ರರಾ

ಮರನೀಗುಂ ಮಣಿಯಾಗುಮೊಂದು ಪಶುವೀಗುಂ ಕೇಳಿಮೆಂದೋಳಿಯೋಳ್
ಪುರುಡಂ ಪುಟ್ಟಿಸಿ ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್
ಮರುಳಂ ಪೋ ಪುರುಳಾಗಿಪರಾ ಕಿವಿಗಳೊಳ್ ಪೀಯೂಷಮಂ ಪಿಂಡಲು
ರ್ವರೆಯೊಳ್ ಕವಿಪ್ರವೇಕರೆ ವಲಂ ಬಲ್ಲರ್ ಪೆರರ್ ಬಲ್ಲರೇ

ಎಂದು ಹೇಳುತ್ತಾನೆ. ಕಾಷ್ಠವನ್ನು ಕೊನರಿಸುವ, ಕಲ್ಲಲ್ಲಿ ನಾರೆತ್ತುವ ಶಕ್ತಿಕವಿಗಳ ಶಬ್ದದಲ್ಲಿದೆ. ಆಧುನಿಕ ಕವಿವರ್ಯ ಪುಟ್ಟಪ್ಪನವರು, "ಕಬ್ಬಿಗರು ವಾಗ್ಯೆಂದ್ರಜಾಲಿಕರು" ಎಂದು ಹೇಳುತ್ತ ಕವಿಗಳ ವಾಕ್ಯಕ್ತಿಯನ್ನು ಹೀಗೆ ಬಣ್ಣಿಸುತ್ತಾರೆ:

ಸವಿನುಡಿಯ ಸಿರಿಗುಡಿಯ
ಕಟ್ಟುವರು ನಾವು;
ಹೊಂಗನಸುಗಳ ಮುಡಿಯ
ಮುಟ್ಟುವರು ನಾವು.

* * *

ಸೊನ್ನೆಯಲಿ ಸಗ್ಗವನು
ಕೆತ್ತುವರು ನಾವು;
ಶೂನ್ಯದಲ್ಲಿ ಪೂರ್ಣತೆಯ
ಬಿತ್ತುವರು ನಾವು.

ಖಡ್ಗಗಳಿಗೆಮ್ಮ ಸಿರೆ
    ಹರಿವಜ್ರಸಾಣೆ;
ನಮ್ಮ ಲೇಖನಿಗಿಂತ
    ಬರಸಿಡಿಲ ಕಾಣೆ.

ದೇಶಗಳು ತಾಗುವವು;
ಸೋತು ತಲೆಬಾಗುವುವು.
ವಿಪ್ಲವಗಳೇಳುವುವು,
    ಮುಕುಟ ಬೀಳುವುವು!

* * *

ಸಂಕ್ಷಿಪ್ತ ಬ್ರಹ್ಮವೈ
    ನಮ್ಮ ಕೈಬುಟ್ಟ!
ಕಲ್ಪಕಲ್ಪಗಳಲ್ಲಿ
    ಸಾಯುವುವು ಹುಟ್ಟ!

ಸವಿನುಡಿಯ ಸಿರಿಗುಡಿಯ ಕಟ್ಟುವ, ಸೊನ್ನೆಯಲಿ ಸಗ್ಗವನು ಕೆತ್ತುವ ಸಾಮರ್ಥ್ಯ ಲೆಕ್ಕಣಿಕೆಯಲ್ಲಿದೆ. ಲೇಖನಿಯ ಕೂರಸಿಯಿಂದ ದೇಶಗಳು ತಾಗುವುವು; ಸೋತು ತಲೆಬಾಗುವುವು. ಹೆಚ್ಚೇನು; ಕವಿಯ ಕೈಬುಟ್ಟ ಸಂಕ್ಷಿಪ್ತ ಬ್ರಹ್ಮವಿದ್ದಂತೆ.

ವಾಕ್ಯಕ್ತಿಯ ಪರಿಪೂರ್ಣವಾದ ಫಲವು ಕಂಡುಬರುವುದು ಸಾಹಿತ್ಯದಲ್ಲಿಯೇ. ಪಾರ್ವತಿ ಪರಮೇಶ್ವರರಂತಿದ್ದ ವಾಗರ್ಥಗಳ ಸುಂದರ ಸಂಯೋಗವು ಕಂಡು ಬರುವುದು ಸಾಹಿತ್ಯಕ್ಷೇತ್ರದಲ್ಲಿಯೇ. ಶಾಸ್ತ್ರಗಳಲ್ಲಿ ಶಬ್ದಗಳು ಕೇವಲ ಸಂಕೇತ ವಾಗಿವೆ. ವೇದಗಳಲ್ಲಿ ಅರ್ಥಕ್ಕೆ ಪ್ರಾಧಾನ್ಯವಿಲ್ಲ.

ವಾಕ್ಯಕ್ತಿಯ ಪರಿಪೂರ್ಣತೆಯ ಫಲವಾದ ಸಾಹಿತ್ಯವು ಜನತೆಯ ಉಪಕಾರ ಕ್ಕಾಗಿ, ಹಿತಕ್ಕಾಗಿ, ಇರಬೇಕೆಂಬ ಮಾತನ್ನು ನಾವು ಪ್ರಾಚೀನ ಕನ್ನಡ ಸಾಹಿತ್ಯ ದಿಂದಲೇ ಅರಿಯಬಹುದಾಗಿದೆ. ಕನ್ನಡದಲ್ಲಿ ಕಂಡುಬರುವ ತ್ರಿವೇಣೀಸಂಗಮದ ಝುರಿಗಳನ್ನು ನಾವು ಪರೀಕ್ಷಿಸಿದಾಗ, ಕನ್ನಡ ಸಾಹಿತ್ಯವು "ಬಾಳ ಬಟ್ಟೆಯ ಪರಮಾಗಮ" ವಾಗಿದೆಯೆಂದು ಕಂಡುಬರುತ್ತಿದೆ. ಕನ್ನಡ ಸಾಹಿತ್ಯವು ಜಗತ್ತಿಗೆ ಬೀರಿದ ಸಂದೇಶವೇ ಇದು ಎಂದು ಹೇಳಬಹುದು. ಕನ್ನಡದ ಆದಿಕವಿಗಳಾದ ಜೈನರ ಕಾವ್ಯದಲ್ಲೆಲ್ಲ ಇದೇ ಧ್ವನಿಯು ಮಿಡಿಯುತ್ತಿದೆ. ಕಾವ್ಯವು ಮನೋರಂಜ ನೆಯ ಸಾಧನೆಯೆಂಬ ಕಲ್ಪನೆಗೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯಂತೂ ಅವಕಾಶ

ವಿಲ್ಲ. "ಮನಸಿಜ ಕೇಳಿ ಮುಖ್ಯ ಜನರಂಜನೆಗೇವುದು, ಅನುಚಿತಮಲ್ತೇ" ಎಂದು ಒಬ್ಬ ಕವಿಯು ಕೇಳುತ್ತಾನೆ. ಭಾರತೀಕರ್ಣಪೂರನಾದ ನಾಗಚಂದ್ರನು ವರ್ಧಮಾನ ಭಟ್ಟಾರಕರ ಪಾದಗಳನ್ನು "ವಚಸ್ಸುಂದರೀ ಚಂದನ ಚರ್ಚೆ"ಗಳಿಂದ ಅರ್ಚಿಸುತ್ತಾನೆ. ಹಾಗೂ "ನಿಚ್ಚಂ ಪೊಸತೆಂಬೀ ವಾಕ್ಯೋಪಹಾರಗಳಿಂದರ್ಚಿಪೆಂ ಶ್ರೀ ಮಲ್ಲಭಟ್ಟಾರಕ ಪಾದಯುಗಮಂ" ಎಂದು ಹೇಳುತ್ತಾನೆ. ಕಾವ್ಯವು ನಮ್ಮ ಕವಿಗಳಿಗೆ ದೇವತಾಪೂಜೆಯ ಸಾಮುಗ್ರಿಯಾಗಿತ್ತು. ನಾಗಚಂದ್ರನನ್ನೇ ಅನುಸರಿಸಿ ನೇಮಿಚಂದ್ರನಾದರೂ, "ಮಧುರ ಮುದ್ವಾಕ್ಯ ಪುಷ್ಪೋಪಹಾರಂ" ಎಂದು ಹೇಳುತ್ತಾನೆ. ಕಾವ್ಯವು "ಭವಕಾಂತಾರದೊಳ್ ವಿಷಯಮಂ ವಿಚ್ಛೇದಿಸಲ್, ಚಿತ್ತಸಂಭವನಂ ಸಂಹರಿಸಲ್, ಕಾಷಾಯಭಟರಂ ಬೆನ್ನಟ್ಟಲ್" ಸಹಾಯಕಾರಿಯಾಗಬೇಕೆಂದು ಸರಸ್ವತೀ ಭಾಂಡಾರದ ಮುದ್ರೆಯನೊಡೆದ ರನ್ನನು ಹೇಳುತ್ತಾನೆ. ಜೈನ ಕವಿಗಳ ತೀರ್ಥಂಕರ ಚರಿತ್ರೆಗಳೆಲ್ಲ ಇದೇ ಮಾರ್ಗವನ್ನು ಅನುಸರಿಸಿವೆ. "ಜಾರ ಚೋರ ವೀರರ ಕಥೆಯಂತೆ ಈ ಬಾಯ್ಸವಿಯ ಮಾತುಗಳಂ ಬಱಿಕೆಯ್ವ" ಕಾವ್ಯವು ತನ್ನದಲ್ಲವೆಂದೂ, ಆದರೆ ಅದು ಬಾಳ ಬಟ್ಟೆಯ ಪರಮಾಗಮವೆಂದೂ ಕವಿಚಕ್ರವರ್ತಿ ಜನ್ನನು ಹೇಳಿಕೊಂಡಿರುವುದು ಯಥಾರ್ಥವಾಗಿದೆ. "ದೇವ ದೇವೋತ್ತಮನ ಪಾಡಿ ಕೈವಲ್ಯ ಲಕ್ಷ್ಮೀವರ"ನಾದ ಹರಿಹರನಿಂದ ಮೊದಲುಗೊಂಡು "ಹೃತ್ಕಮಲ ಕರ್ಣಿಕಾಮಧ್ಯದಲ್ಲಿರ್ಪ ಪಂಪಾಕ್ಷೇತ್ರದೊಡೆಯಂ ಸವಿನುಡಿಗಳಂ ಕೇಳಿಸಿದಂ" ಎಂದು ಹೇಳುವ ವಿರೂಪಾಕ್ಷಪಂಡಿತನೂ, ಹಾಗೂ

ನರನೊಮ್ಮೆ ನೆನೆಯೆ ಸಲೆ ಶಂ
ಕರನಂ ನೆರೆ ಮಾಳ್ಪ ಮಹಿಮೆಯಂ ತಳೆದ ಷಡ-
ಕ್ಷರ ಮಂತ್ರದಮಳ ಕಥನಮು
ನೊರೆವೆನ್ನಿಂದನ್ನರೊಳರೆ ಧನ್ಯರ್ಜಗದೊಳ್

ಎಂದು ಅಭಿಮಾನಪಟ್ಟುಕೊಳ್ಳುವ ಷಡಕ್ಷರದೇವನ ವರೆಗಿನ ವೀರಶೈವ ಕವಿಗಳೂ ಕೂಡ ಕಾವ್ಯಗಳು ಆತ್ಮೋನ್ನತಿಯ ಸಾಧನಗಳಾಗಿರಬೇಕೆಂಬ ಉದ್ದೇಶದಿಂದಲೇ ಕಾವ್ಯನಿರ್ಮಾಣ ಮಾಡಿದ್ದಾರೆ. "ಧರೆಯೊಳ್ಪುಟ್ಟಿ ಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಗಳಂ ಬಿತ್ತರಿಸುತ್ತಂ ಕಬ್ಬಿಗರ್ಕೆಟ್ಟುಪೋದರ್"; ಆದರೆ

ರಸೆಯೊಳ್ರಸವತ್ಕವಿತೆಯ
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸನರಮಂ ಕಳೆದು ಕಸಮನಾಂತವೊಲಕ್ಕುಂ

ಎಂದು ಹೇಳುವ ಸಂಪ್ರದಾಯವು ಹರಿಹರದೇವನಿಂದ ಷಡಕ್ಷರದೇವನ ವರೆಗೆ ಬಳೆದು ಬಂದಿದೆ. ಬಸವ ಮಹಾನುಭಾವನ ಧಾರ್ಮಿಕ ಕ್ರಾಂತಿಯ ಫಲವಾದ ಕನ್ನಡ ಸಾಹಿತ್ಯರತ್ನಾಕರದ ಸ್ತೋಜ್ವಲರತ್ನದಂತಿರುವ ವಚನ ಸಾಹಿತ್ಯವಂತೂ ಆತ್ಮೋನ್ನತಿಯ ಸಾಧನವಲ್ಲದೆ ಮತ್ತೇನು ?

"ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲಿ ನಿರ್ಮಳ ತತ್ತ್ವಮಂ ಬಯಸಿ ಪೇಳಲೊಡರ್ಚಿದೆಂ" ಎಂದು ಹೇಳುವ ರುದ್ರಭಟ್ಟ ಕವಿಯ ಸಂಪ್ರದಾಯವು ಬ್ರಾಹ್ಮಣ ಕವಿಗಳಲ್ಲಿ ಬಳೆದುಬಂದಿದೆ. ಕಾವ್ಯವೆನ್ನುವುದು ಒಂದು ಸಮಾಧಿ. ಆದರಿಂದ ಪರಂಜ್ಯೋತಿ ಪರಮಾತ್ಮನನ್ನು ಹೃದಯದಲ್ಲಿ ನಿಲ್ಲಿಸಿಕೊಳ್ಳಬಹುದು ಎಂದು ಸಾರುವ ಕನ್ನಡ ಸಾಹಿತ್ಯವು ಎಂತಹ ಘನವಾದ ಸಂದೇಶವನ್ನು ಬೀರಿದೆಯೆಂಬದನ್ನು ನಾವು ಲಕ್ಷಿಸಬೇಕು. ಭಾರತೀಯ ಜನಜೀವನವನ್ನು ಸುಸಂಸ್ಕೃತಗೊಳಿಸಿದ— ಈಗಲೂ ಹಾಗೆ ಮಾಡುತ್ತಿರುವ— ರಾಮಾಯಣ ಮಹಾಭಾರತಗಳಂತಹ ಕಾವ್ಯಗಳ ತಿರುಳನ್ನೇ ಬ್ರಾಹ್ಮಣ ಕವಿಗಳು ನಮಗೆ ಕೊಟ್ಟಿದ್ದಾರೆ.

ಕನ್ನಡ ಸಾಹಿತ್ಯದ ಈ ವೈಶಿಷ್ಟ್ಯವನ್ನು ಅವಲೋಕಿಸಿದ ಮೇಲೆ ನಮ್ಮ ಪ್ರಾಚೀನ ಸಾಹಿತ್ಯವು ಕೇವಲ ಪಾರಮಾರ್ಥಿಕವಾಗಿತ್ತು, ನಾವಿರುವ ಈ ಲೋಕವನ್ನು ಮರೆತಿತ್ತು ಎಂದು ಯಾರಾದರೂ ಕೇಳಬಹುದು. ಅಂತಹರಿಗೆ "ರಾಗ ರಸಿಕನಾಗಬೇಕು, ಭಾವಿಸಿ ವೀತರಾಗನಾಗಬೇಕು. ಭೋಗ ವಿಚಾರವು ಬೇಕು, ಆತ್ಮಯೋಗ ವಿಚಾರವು ಬೇಕು. ಶೃಂಗಾರ ಕೋವಿದನಾಗಬೇಕು; ಸಂಗರ ಸಮ್ಮುಖನಾಗಬೇಕು" ಎಂದು ಸಂದೇಶ ಬೀರಿದ ರತ್ನಾಕರವರ್ಣಿಯ ಕಾವ್ಯವು ಸಮಾಧಾನವನ್ನೀಯಬಹುದೆಂದು ನಂಬುತ್ತೇನೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ" ಎಂದು ಸಾರಿದ ಬಸವ ಮಹಾನುಭಾವನ ಕನ್ನಡ ನಾಡು ಐಹಿಕ ಪಾರಮಾರ್ಥಿಕಗಳ ಸುಂದರ ಸಮನ್ವಯವನ್ನು ಸಾರಿದೆ. ಅಂತೆಯೇ ಪ್ರಾಚೀನ ಕನ್ನಡ ಸಾಹಿತ್ಯವು ಬಾಳ ಬಟ್ಟೆಯ ಪರಮಾಗಮವಾಗಿರುವುದರ ಜೊತೆಗೆ ರಸಿಕಮನೋಹಾರಿಯೂ ಆಗಿದೆ. "ಕವಿಮಾರ್ಗದೊಳಪೊಕ್ಕುಂ ನವರಸಮಂ ತೆರೆದು ನುಡಿದನೆನಿಸಿದ ಸತ್ಕವಿ" ರನ್ನನ 'ಗದಾಯುದ್ಧ', "ಕವಿರಸ ಸಂವೃತ್ತಪನ್ನಂ ವಿವಿಧ ಕಳಾಭಿಜ್ಞ ನಾಗಯಜ್ಞಂ" ಆಗಿರುವ ಜನ್ನನ 'ಅನಂತನಾಥ ಪುರಾಣ'ಗಳು ರಸಪರಿಪಾಕದಿಂದ ಜನರ ಮನವನ್ನು ಆಕರ್ಷಿಸಿ, ಜನಮನವನ್ನು ಸಂಸ್ಕಾರಗೊಳಿಸುವ ಸಾಧನಗಳಾಗಿವೆ.

ಈ ಸಂದರ್ಭದಲ್ಲಿ 'ಗದಾಯುದ್ಧ'ದಲ್ಲಿ ವಾಚಕರ ಹೃದಯವನ್ನು ಸೂರೆ

ಗೊಳ್ಳುವ ರಮಣೀಯ ಸ್ಥಾನಗಳಲ್ಲಿ ಒಂದನ್ನು ಇಲ್ಲಿ ಉದಾಹರಿಸದೆ ಮುಂದುವರಿಯು ವುದು ನನಗೆ ಸಾಧ್ಯವಿಲ್ಲವಾಗಿದೆ. ಕುರುಕ್ಷೇತ್ರದಲ್ಲಿ ದುರ್ಯೋಧನನು ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು, ಬಂಧುಗಳನ್ನು, ಮಕ್ಕಳನ್ನು, ಆಪ್ತರನ್ನು ಕಳೆದುಕೊಂಡು ಏಕಾಕಿಯಾಗಿ ರಣರಂಗದಲ್ಲಿರುವ ಸನ್ನಿವೇಶವನ್ನು ರನ್ನನು ಬಹು ಹೃದಯಸ್ಪರ್ಶಿ ಯಾಗಿ ಚಿತ್ರಿಸಿದ್ದಾನೆ. ಪ್ರೀತಿಯ ಕರ್ಣ-ದುಶ್ಯಾಸನರು ಅಳಿದು ಹೋದುದನ್ನು ನೆನೆದು ದುರ್ಯೋಧನನು ಕೊರಗುತ್ತಿರುತ್ತಾನೆ :

ಎನಗಿರ್ವರೆರಡುಂ ತೋ
ಳೆನಗಿರ್ವರುಮೆರಡು ಕಣ್ಗಳೆನ್ನರೆ ಯುವರಾ
ಜನುಮಂಗರಾಜನುಂ ಪೋ
ರೆನೆ ಸಂಜಯ ಮತ್ತಮೆನಗೆ ಮಾನಸವಾಳೇ

ಕಳಿದಂ ದಿನಕರತನಯಂ
ಕಳಿದಂ ಯುವರಾಜನಪ್ಪ ದುಶ್ಶಾಸನನುಂ
ತುಳಿಲಾಳ್ಗಳನಿರ್ವರುಮಂ
ಕಳಿಪಿ ಸುಯೋಧನನ ಬಾಳ್ವುದಂ ನಂಬಿಸರೇ

ಎನಗೆ ಮನವಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ
ವನಿ ಶೂನ್ಯಮಾಯ್ತು ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ

ಬಾಂಧವರನಿಳಿಸಿ ಸರಸಿಜ
ಬಾಂಧವತನಯನುಮನೆನ್ನ ತಮ್ಮನುಮಂ ನ
ಮ್ಮಂಧನರೇಂದ್ರನ ಮೊಗಮುಂ
ಗಾಂಧಾರಿಯ ಮೊಗಮುನಾವ ಮೊಗದೊಳೆ ನೋಳ್ಪೆಂ

ಮನ, ಮನೆ, ಬಿಡು, ಸಕಲಾವನಿ ಶೂನ್ಯವಾಗಿರುವ ಕಾಲಕ್ಕೆ ಅಂಧ ನರೇಂದ್ರನನ್ನೂ ಗಾಂಧಾರಿಯನ್ನೂ ಯಾವ ಮೊಗದಲ್ಲಿ ನೋಡಬೇಕೆಂದು ದುರ್ಯೋಧನನು ಕಳವಳ ಪಡುತ್ತಿರುವಾಗಲೇ ಅನಿರೀಕ್ಷಿತವಾಗಿ ಕವಿಯು ಅವರನ್ನು ರಣರಂಗಕ್ಕೇ ಬರಮಾ ಡುತ್ತಾನೆ :

ಸಕಲ ಚತುರಂಗಬಲವಿಕಳನಾಗಿ, ಸಪ್ತಾಂಗರಾಜ್ಯ ಸಮಾಲಿಂಗಿತನಾಗಿ ಸಂಗ್ರಾಮ ರಂಗದೊಳಿರ್ಪನೆಂಬುದನಾಪ್ತ ಚರರರಿಪೆ ಕೇಳ್ದು ಗಾಂಧಾರಿಯುಂ ಧೃತರಾಷ್ಟ್ರನುಂ ಶೋಕಾತುರೀಚಿತ್ತರಾಗಿ ತಮ್ಮ ಮಗನನಾರಯ್ಯಲುಂ ಮನಃ ಕ್ಷತಮನಾರಿಸಲುಮೆಂದರಸುತ್ತುಂ ಬಂದು

ಪಡೆ ಪನ್ನೊಂದಕ್ಷೋಹಿಣಿ
ಗೊಡೆಯನೆ ಮೂರ್ಧಾಭಿಷಿಕ್ತನೈ ಮೂರುಂ ಜ
ಳ್ಗೊಡೆಯ ನಡುವಿರ್ಪ ನೀನಿ
ರ್ದೆಡೆಯುಃಮನೆಮಗರಿಯದಂತುಟಾದುದೆ ಮಗನೇ

ಎಂದು ಅವರು ಆಕ್ರೋಶ ಮಾಡುವಾಗ ವಾಚಕರ ಹೃದಯಲ್ಲಿ ಅಲಗಿಕ್ಕಿ ತಿರುಗಿಸಿದಂತಾಗುತ್ತದೆ. ಕೌರವರ ನೀಚಕೃತಿಗಳೇ ಇಂತಹ ಪರಿಸ್ಥಿತಿಗೆ ಕಾರಣವೆಂಬುದು ಪ್ರತಿಕ್ಷಣಕ್ಕೂ ನಮ್ಮ ಮನಸ್ಸಿಗೆ ಸ್ಫುಟವಾಗುತ್ತದೆ. ತನ್ನನ್ನು ಹುಡುಕಿಕೊಂಡು ಬಂದ ತಂದೆ ತಾಯಿಗಳನ್ನು ಕಂಡ ದುರ್ಯೋಧನನ ಕಾತರ ಸ್ಥಿತಿಯನ್ನು ನೋಡಿರಿ:

ಎಂದು ಪಳಯಿಸುತ್ತುಂ ಬರ್ಪ ಗುರುಜನದ ಸರವುಂ ಸಂಜಯನರಿದು ಕರಕಮಲಮುಕುಳಿತಾಂಜಲಿಯಾಗಿ-ದೇವಾ, ನಿನ್ನಲ್ಲಿಗೆ ನಿಜ ಜನನೀಜನಕರರಸುತ್ತುಂ ಬಂದರ್ ಎಂಬುದುಂ ಉದ್ಧೃತಗೋತ್ರಾಭಿಮುಖಂ ವಜ್ರಾಘಾತಮಾದಂತೆ ಸಿಗ್ಗಾಗಿ ತಲೆಯಂ ಬಾಗಿ

ಅರಿಭೂಪಾಲರನಿಕ್ಕಿ ಗೆಲ್ದು ಸಗೆಯಿಂ ತೂರ್ಯಸ್ವನಂ ಪೊಣ್ಮೆ ಸೋ
ದರರುಂ ಮಕ್ಕಳುಮಾಪ್ತರುಂ ಬೆರಸು ಬಂದಾನಂದದಿಂ ಕಾಣ್ಬೆನೆಂ
ದಿರಲಿಂತಾಯ್ತು ವಿಧಾತ್ರ! ಮದ್ಗುರುಗಳಂ ದುಃಖಾತ್ಮರಂ ಶೋಕತ
ಪ್ತರರಂ ಮೆಯ್ಯೊಳೆ ಬೀಳ್ವದಶ್ರುಮುಖರಂ ಕಾಣ್ಬಂತುಟಂ ಮಾಡಿದಯ್

ದುರ್ಯೋಧನನು ಮಂಗಲವಾದ್ಯದ ಗಂಭೀರರವದೊಡನೆ "ಸೋದರರುಂ, ಮಕ್ಕಳುಂ, ಆಪ್ತರುಂ ಬೆರಸು ಬಂದು ಆನಂದದಿಂ ತಂದೆ ತಾಯ್ಗಳಂ ಕಾಣ್ಬೆ"ನೆಂದು ಬಗೆದಿದ್ದನು. ಆದರೆ ವಿಧಿಯು "ದುಃಖಾತ್ಮರಂ, ಶೋಕತಪ್ತರರಂ, ಅಶ್ರುಮುಖರಂ" ಕಾಣುವಂತೆ ಮಾಡಿತು. ದುರ್ಯೋಧನನ ಕಳವಳವನ್ನು ಇನ್ನೂ ನೋಡಿರಿ:

ಕಂಡ ನಿಜಾನುಜರೆಲ್ಲಿದ
ರೆಂದೆನ್ನ ಜನನಿ ಬಂದು ಬೆಸಗೊಂಡೊಡವೇ
ನೆಂದು ಮರುಮಾತುಗುಡುವೆಂ
ಕೊಂದರ್ಕೌಂತೇಯರೆಂದು ಬಿನ್ನೈಸುವೆನೋ!

ಶೋಕಂ ಮಿಗೆ ಫಣಿರಾಜ ಪ
ತಾಕಂ ವಿಕಳಿತವಿವೇಕಶೂನ್ಯಂ ಬಾಷ್ಪೋ
ದ್ರೇಕಂ ಹಾ! ದುಶ್ಯಾಸನ!
ಹಾ! ಕರ್ಣಾ! ಎನುತಮಂತೆ ಮೂರ್ಛೆಗೆ ಸಂದಂ

ದುರ್ಯೋಧನನು 'ಮೂರ್ಛೆಗೆ ಸಂದಂ' ಎಂದು ರನ್ನನು ಹೇಳುವಾಗ ಓದುಗರಲ್ಲಿ ಅದೆಂತಹ ಕಳವಳವುಂಟಾಗುತ್ತದೆ! ಕೊನೆಗೆ ಕುರುಕುಲಚಕ್ರವರ್ತಿಯ ಹೃದಯ

ಸ್ಪರ್ಶಿಯಾದ ಅಂತ್ಯವನ್ನು ಕವಿಚಕ್ರವರ್ತಿಯು ರೋಮಾಂಚಕಾರಕ ರೀತಿಯಲ್ಲಿ ಬಣ್ಣಿಸಿದ್ದಾನೆ :

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತರ್ಪಿನಂ ನಿಜಕರಂಗಳನಂಮಡುಗುತ್ತಮಿರ್ದು ಜ
ಕ್ರಾಂಕಮುಗಳ್ವಿನಂ ಕ್ರಮದಿನಂಬರಮುಂ ಬಿಸುಟುರ್ಬಿನಂಥಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್

ದಿನಪತಿಯಾದ ಸೂರ್ಯ, ಜನಪತಿಯಾದ ಕೌರವ ಇವರು ಅಸ್ತಂಗತರಾದುದರ ವರ್ಣನೆಯು ಅದೆಷ್ಟು ಹೃದಯಂಗಮವಾಗಿದೆ! "The Poet stirs, inspires, energises, vivifies and delights" ಎಂಬ ಉಕ್ತಿಯು ಯಥಾರ್ಥವೆಂದು ಹೇಳ ಬಹುದಲ್ಲವೇ?

ನಾನು ಇದುವರೆಗೆ ವಿವೇಚಿಸಿದುದು ಪ್ರಾಚೀನ ಕನ್ನಡ ಕಾವ್ಯಗಳ ರೀತಿಯನ್ನು. ಆದರೆ ಸಾಹಿತ್ಯವೆಂಬ ಶಬ್ದಕ್ಕೆ ವಿವಿಧ ಗ್ರಂಥಸಮೂಹವೆಂಬ ಸ್ಥೂಲವಾದ ಅರ್ಥವಿದೆ. ಕಾವ್ಯವೆಂಬುದು ಸಾಹಿತ್ಯಶಬ್ದದ ವಿಶಿಷ್ಟ ಅರ್ಥವಾಗಿದೆ. ಸಾಹಿತ್ಯೋದ್ಯಾನದ ಪರಿಪಕ್ವ ಫಲವೇ ಕಾವ್ಯ. ಆದರೆ ಕಾವ್ಯವೊಂದೇ ಸಾಹಿತ್ಯವಲ್ಲ. ಉದ್ಯಾನದಲ್ಲಿ ನಾವು ಪರಿಪಕ್ವ ಫಲವೊಂದರಿಂದಲೇ ತುಷ್ಟಿಯನ್ನು ಪಡೆಯುವದಿಲ್ಲ. ಅಂತೆಯೇ ಇಂದು ಕೇವಲ ಕಾವ್ಯಕ್ಕಷ್ಟೇ ಮನ್ನಣೆಯಿಲ್ಲ. ನಾಡಿನ ಸ್ಥಿತಿಗತಿಗಳನ್ನು, ಜನತೆಯ ಆಶೆ ಆಕಾಂಕ್ಷೆಗಳನ್ನು ಅನುಸರಿಸಿ ಸಾಹಿತ್ಯವು ಬೆಳೆಯುತ್ತಿದೆ—ಬೆಳೆಯಬೇಕು. ಕನ್ನಡ ನಾಡಿನ ಉದಾರ ದೊರೆಗಳ ಆಶ್ರಯದಲ್ಲಿದ್ದ ಕವಿಗಳು ಮಹಾಕಾವ್ಯಗಳನ್ನೇ ಬರೆದರು. ಜೀವನದಲ್ಲಿ ಪುಷ್ಟಿ-ತುಷ್ಟಿಗಳೇ ಆಗ ತುಂಬಿದ್ದರಿಂದ ಜನತೆಯು ಅವುಗಳನ್ನು ಅಂಗೀಕರಿಸಿ ಆದರಿಸಿತು.

"ತಿವರೆಲ್ಲಂ ದೇವತಾಮಂದಿರಂ ನಿಮ್ನಸ್ಥಳೀಯ ರಾಜಿಯೆಲ್ಲಂ ದೀರ್ಘವಾಪಿ ಕಾಸಂಕುಲಂ ನೀರೇಜ ಕಾಸಾರ ವಸುಧೆಯೆಲ್ಲಂ ಲಸಚ್ಛಂದನೋದ್ಯಾನಂ"— ಆಗಿದ್ದ ಪ್ರಾಚೀನ ಕರ್ನಾಟಕದಲ್ಲಿ ಕಾವ್ಯವನಿತೆಯು ಮೆರವಣಿಗೆಯ ವಿಜೃಂಭಣೆಯಿಂದ ಪದವನ್ನಿಡುತ್ತ ವಿಹಾರಗೈದಳು. ಜನರಾದರೂ ಆ ಮೆರವಣಿಗೆಯ ವಿಜೃಂಭಣೆಗೆ ಮನಸೋತು ಮೈಮರೆತರು. "ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱದ" "ಮೆಲ್ಲೆಲರಿಂ ಪೂತಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ" ಚೆಲ್ವಾದ ಕನ್ನಡ ನಾಡಿನ ಸೊಬಗನ್ನು, "ಇವು ಪಳ್ಳಿಗಳಿವು ಪಟ್ಟಣಮಿವು ಎಂದಱಿದು" ಪೇಳಲಾರದ ನಾಡಿನ ಸಮೃದ್ಧಿಯನ್ನು ಹೇಗೆ ವರ್ಣಿಸುವುದು?

ಆ ಸಮೃದ್ಧವಾದ ನಾಡಿನಲ್ಲಿ, ಆ ವಿಶ್ರಾಂತ ಜೀವನದಲ್ಲಿ, ಆ ಕೊಡುಗೈದೊರೆ

ಗಳ ಆಶ್ರಯದಲ್ಲಿ ಹುಟ್ಟಿದ ಕನ್ನಡ ಸಾಹಿತ್ಯವು ಇಂದು ವ್ಯವಹಾರ್ಯವೆಂದು ಕಂಡು ಬರಲಿಕ್ಕಿಲ್ಲ. ಆದರೆ ಅಂದು ಮಾತ್ರ ಅದು "ಬಾಳ ಬಟ್ಟೆಯ ಪರಮಾಗಮ" ವಾಗಿ ತನ್ನ ಸಾರ್ಥಕ್ಯವನ್ನು ಪಡೆದುಕೊಂಡಿತು.

ಸಾಹಿತ್ಯವು ಜನಜೀವನದ ಪ್ರತಿಬಿಂಬವಾಗಬೇಕಾದರೆ ಅದು ಇಂದಿನ ಜೀವನದ ಆಶೆ-ಆಕಾಂಕ್ಷೆಗಳನ್ನು ಪೂರೈಸುವ ಸಾಧನವಾಗಬೇಕಾಗಿದೆ. ಆಧುನಿಕ ಯುಗವು ವಿಚಾರಕ್ರಾಂತಿಯ ಯುಗವಾಗಿದೆ. ಕೇವಲ ರಸಿಕಮನೋಹಾರಿಯಾದ ಕಾವ್ಯವು ಇಂದು ನಮ್ಮನ್ನು ತಣಿಸಲಾರದು. ಸಾಹಿತ್ಯವು ನಮ್ಮ ಮೆದುಳಿಗೆ ವಿಚಾರವನ್ನು, ಮನಸ್ಸಿಗೆ ಶಾಂತಿಯನ್ನು, ಹೊಟ್ಟೆಗೆ ಹಿಟ್ಟನ್ನು ಕೊಡುವುದಕ್ಕೆ ಸಹಾಯಕಾರಿಯಾಗಬೇಕಾಗಿದೆ; ಜನಜೀವನವನ್ನು ಸುಸಂಸ್ಕಾರಗೊಳಿಸುವ ಸಾಧನವಾಗಬೇಕಾಗಿದೆ. ಆಧುನಿಕ ಕನ್ನಡ ಸಾಹಿತ್ಯವು ತನ್ನ ಸಾರ್ಥಕತೆಯನ್ನು ಪಡೆದುಕೊಳ್ಳಬೇಕಾದರೆ ಮೇಲಿನ ಮಾತುಗಳನ್ನು ಲಕ್ಷಿಸಲೇಬೇಕಾಗುವುದು.

ಸಾಹಿತ್ಯವು ಸಾಂಸ್ಕೃತಿಕ ಜೀವನದ ಪ್ರತೀಕವಾಗಿದೆಯೆಂದು ಹೇಳಬಹುದು. ಪ್ರಾಚೀನ ಕರ್ನಾಟಕದ ಹೆಗ್ಗುರುತುಗಳಂತೆ ಕನ್ನಡದ ಕವಿಗಳಿದ್ದಾರೆ. ಅವರಲ್ಲಿ ಬಹು ಜನರು ಕುಲರಸಿಕರು, ಜೈನಮಂದಿರ ನಿರ್ಮಾಣಧನರು, ಕಾವ್ಯಕಲಾಪರಿಣತಿ ಖಡ್ಗಕಲಾಪರಿಣತಿಗಳನ್ನು ಸಮನ್ವಯಿಸಿಕೊಂಡವರು, ಒಡ್ಡಿದ ಕೆಯ್ಯಲ್ಲದ ಆದರೆ ಇತ್ತ ಕೆಯ್ಯ ಪೆಂಪಿನವರು; ಇವೆಲ್ಲಕ್ಕಿಂತ ಹೆಚ್ಚಾಗಿ ಕನ್ನಡದ ಪ್ರಾಚೀನ ಕವಿಗಳು ಅನ್ಯರ ಲೇಸನ್ನೇ ಬಯಸಿದವರು. ಅಂತೆಯೇ ಅಂದು ಸೋಜ್ವಲ ಸಾಹಿತ್ಯವು ಹೊರಟು ಜನತೆಯ ಸಂಸ್ಕೃತಿಯ ಮಟ್ಟವನ್ನು ಮೇಲಕ್ಕೇರಿಸಿತು. ಸಾಹಿತ್ಯದಿಂದ ಜನಜೀವನ, ಜನಜೀವನದಿಂದ ಸಾಹಿತ್ಯಗಳು ಸಂಸ್ಕಾರ ಪಡೆಯುವುವು ಎಂಬ ತತ್ತ್ವಕ್ಕೆ ಕನ್ನಡ ಸಾಹಿತ್ಯವು ಉತ್ತಮ ನಿದರ್ಶನವಾಗಿದೆ. ನಮ್ಮ ಕವಿಗಳು ಪುಣ್ಯ ಚರಿತರಾಗಿದ್ದರು. ಅಂತೆಯೇ ನಾಡಿನ ಜನತೆಯನ್ನು ಸುಶೀಲರನ್ನಾಗಿ ಮಾಡುವುದು ಅಂದು ಸಾಧ್ಯವಾಯಿತು. ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಜೀವನಕ್ಕೆ ಸಾಹಿತಿಗಳು ತಮ್ಮ ಉದಾತ್ತ ಜೀವನದಿಂದ, ಆ ಉದಾತ್ತ ಜೀವನದ ಪ್ರತೀಕವಾದ ಸಾಹಿತ್ಯದಿಂದ ಬೆಂಬಲಕೊಡಬೇಕಾಗಿದೆ. ಕರ್ನಾಟಕದಲ್ಲಿ ಸಜೀವ, ಉದಾತ್ತ ಸಾಹಿತ್ಯವು ಹೊರಡಬೇಕಾಗಿದೆ. ಮತ, ಪಂಥ, ಪಂಗಡ, ಪ್ರದೇಶಗಳ ಕೀಳು ಭಾವನೆಗೆ ಅವಕಾಶಕೊಡದ, ಅನ್ಯರ ಲೇಸನ್ನು ಬಯಸುವ ಪುಣ್ಯಚರಿತರಾದ ಸಾಹಿತಿಗಳಿಂದ ಕನ್ನಡ ನಾಡು ಮಗದೊಮ್ಮೆ ಬೆಳಗಬೇಕಾಗಿದೆ. ಅಂತಹ ಸುದಿನಗಳು ಬರುವದಕ್ಕೆ ಸಾಹಿತ್ಯ ಸಮ್ಮೇಲನಗಳು ಅವಕಾಶ ಮಾಡಿಕೊಡಬೇಕಾಗಿದೆ.

ಇದು ವಿಚಾರಕ್ರಾಂತಿಯ ಯುಗವಾದ್ದರಿಂದ ನಮ್ಮ ಸಾಹಿತ್ಯವು ಪ್ರಮೋದಕ

ವಾದ ಪದ್ಯಸಾಹಿತ್ಯಕ್ಕಿಂತ ಪ್ರಚೋದಕವಾದ ಗದ್ಯಸಾಹಿತ್ಯವನ್ನೇ ಹೆಚ್ಚಾಗಿ ಲಕ್ಷಿಸ ಬೇಕಾಗಿದೆ. ವಿಲಕ್ಷಣಗತಿಯಿಂದ ಮುಂದುವರಿಯುತ್ತಿರುವ ಜಗತ್ತಿನ ಜ್ಞಾನ ಭಾಂಡಾರವು ಕನ್ನಡದಲ್ಲಿಯೂ ದೊರೆಯದ ಹೊರತು ಕನ್ನಡಕ್ಕೆ ಮನ್ನಣೆ ದೊರೆ ಯುವಂತಿಲ್ಲ. ಅಂತೆಯೆ ಇಂದು ಜ್ಞಾನಪ್ರದಾಯಕವಾದ ಸಾಹಿತ್ಯದ ನಿರ್ಮಾಣ ಕನ್ನಡಕ್ಕೆ ಅವಶ್ಯವಾಗಿದೆ. ಕನ್ನಡ ಸಾಹಿತ್ಯವು ಜಗತ್ತಿನ ವಿವಿಧ ಜ್ಞಾನವನ್ನು ಸಂಗ್ರಹಿಸಿಕೊಂಡು ಬಹು ವಿಧದಿಂದ ಬೆಳೆಯುತ್ತಿರುವ ಜನತೆಯ ಅಭಿರುಚಿಗಳನ್ನು ತಣಿಸಬೇಕಾಗಿದೆ. ಕಾವ್ಯವಷ್ಟೇ ಸಾಹಿತ್ಯವೆಂಬ ಕಲ್ಪನೆಯನ್ನು ನಾವು ಈಗ ಬಿಡಬೇಕಾಗಿದೆ.

ಆಧುನಿಕ ಕನ್ನಡಸಾಹಿತ್ಯವು ನಿಜವಾಗಿಯೂ ಜನೋಪಕಾರಿಯಾಗಿದೆಯೇ ಎಂಬುದನ್ನು ತಾವು ಪರಿಕಿಸಿರುವಿರಾ? 'ಶ್ರೀನಿವಾಸ'ರ ಸಣ್ಣಕತೆಗಳು, ಬೇಂದ್ರೆ ಯವರ ಕವನಗಳು ಜನಪ್ರಿಯವಾಗದೆ ಇಲ್ಲ. ಆದರೆ ಕೆಲವು ಸಣ್ಣಕತೆ-ಕವನಗ ಳಿಂದಲೇ ಕನ್ನಡಿಗರು ಸಮಾಧಾನ ಹೊಂದಬೇಕೇ? ಕೇವಲ ಕನ್ನಡದ ಅಭ್ಯಾಸ ದಿಂದ ಬಹುಶ್ರುತನಾಗಬಹುದೇ ಎಂಬ ನೇರವಾದ ಪ್ರಶ್ನೆಯನ್ನು ನಮಗೆ ಯಾರಾ ದರೂ ಕೇಳಿದರೆ ನಿರ್ವಿಕಾರ ಮನಸ್ಸಿನಿಂದ ಹೇಳುವದಾದರೆ ನಾವು 'ಇಲ್ಲ' ವೆಂದೇ ಉತ್ತರ ಕೊಡಬೇಕಾಗುವದಷ್ಟೇ? ಕನ್ನಡದ ವಿಷಯವಾಗಿ ನನಗೆ ಪ್ರೇಮವಿದೆ; ಅಭಿಮಾನವಿದೆ. ಆದರೆ ಅಭಿಮಾನ ಪ್ರೇಮಗಳಿಗೆ ಕಟ್ಟುಬಿದ್ದು ಆಧುನಿಕ ಕನ್ನಡ ಸಾಹಿತ್ಯಕ್ಕೆ ಇಲ್ಲದ ಯೋಗ್ಯತೆಯನ್ನು ಆರೋಪಿಸುವುದು ಸರಿಯಾಗಬಹುದೇ? ಜ್ಞಾನದ ಹಸಿವುಳ್ಳ ಕುತೂಹಲಿಯನ್ನು ಕನ್ನಡ ಸಾಹಿತ್ಯವು ಎಷ್ಟರಮಟ್ಟಿಗೆ ತಣಿಸ ಬಲ್ಲದು ಎಂಬುದನ್ನು ನಾವು ವಿಚಾರಿಸಬೇಡವೇ? ವಿಜ್ಞಾನ, ಗಣಿತ, ಅರ್ಥಶಾಸ್ತ್ರ, ವಿಮರ್ಶಾಶಾಸ್ತ್ರ, ರಾಜ್ಯಘಟನೆ, ಸಮಾಜಶಾಸ್ತ್ರ, ಸಮಾಜಸತ್ತಾವಾದ, ಪರ ದೇಶದ ರಾಜಕಾರಣ, ತುಲನಾತ್ಮಕ ಧರ್ಮಗಳ ಅಭ್ಯಾಸ, ಜಾಗತಿಕ ವಿಚಾರಪ್ರವಾ ಹಗಳ ಸಂಕಲನ, ಜಾಗತಿಕ ಜೀವಜ್ಯೋತಿಗಳ ಆತ್ಮಚರಿತ್ರೆ—ಇತ್ಯಾದಿ ವಿಷಯಗ ಳನ್ನು ಅರಿತುಕೊಂಡು ಜ್ಞಾನಸಂಗ್ರಹಮಾಡಿಕೊಳ್ಳಲು ಇಚ್ಛಿಸುವವರಿಗೆ ಸಾಧನ ಗಳನ್ನು ಒದಗಿಸುವ ಕಾರ್ಯವನ್ನು ನಾವು ಮಾಡಬೇಕಾಗಿಲ್ಲವೇ? ಅಂತಹ ಪ್ರಯತ್ನಗಳಿಗೆ ನಮ್ಮ ಸಾಹಿತ್ಯ-ಸಮ್ಮೇಲನಗಳು ಸಹಾಯಕಾರಿಯಾಗಬೇಡವೇ? ಎಂಬ ವಿಚಾರಗಳು ಯಾವಾಗಲೂ ನನ್ನ ಮನಸ್ಸಿನಲ್ಲಿ ಕುದಿಯುತ್ತಿವೆ. ಅವುಗ ಳನ್ನೇ ಇಂದು ತಮ್ಮೆದುರು ಇಡುತ್ತಿದ್ದೇನೆ.

ಮೇಲೆ ನಿರ್ದೇಶಿಸಿದ ವಿಷಯಗಳನ್ನು ಅವಲೋಕಿಸಿ ನಾನು ಸಾಹಿತ್ಯಕ್ಷೇತ್ರ ವನ್ನೇ ಬಿಟ್ಟೆನೆಂದು ಕೆಲವರಿಗೆ ಅನಿಸಬಹುದು. ಆದರೆ ಸಾಹಿತ್ಯಶಾಸ್ತ್ರದಲ್ಲಿ

ಲಲಿತ ಸಾಹಿತ್ಯ ( Pure Literature ), ಪ್ರಯೋಜನಕಾರಿಯಾದ ಸಾಹಿತ್ಯ (Applied Literature) ಎಂದು ಎರಡು ವಿಭಾಗಗಳು ಮಾಡಲ್ಪಟ್ಟಿರುತ್ತವೆ. ನಾನು ಮೇಲೆ ಹೇಳಿದ ವಿಷಯಗಳು ಪ್ರಯೋಜನಕಾರಿಯಾದ ಸಾಹಿತ್ಯ ಎಂಬ ವಿಭಾಗಕ್ಕೆ ಸೇರಿವೆ. ಆಧುನಿಕ ಜನತೆಗೆ ಬೇಕಾದುದೂ ಇದೇ. ಪಂಪ, ಹರಿಹರ, ರುದ್ರಭಟ್ಟರ ಕಾವ್ಯಗಳು ತಮ್ಮ ಕಾಲಕ್ಕೆ ತಮ್ಮ ದೃಷ್ಟಿಯಿಂದ ಸಾರ್ಥಕ್ಯವನ್ನು ಪಡೆದುಕೊಂಡವು. ಇಂದು ಅದೇ ಹಾದಿಯನ್ನು ತುಳಿಯುವ ಅವಶ್ಯಕತೆ ಉಳಿದಿಲ್ಲ. ಈಗ ನಮಗೆ ಇಂದಿನ ಜೀವನಕ್ಕೆ ಅನುಸರಿಸಿ ಪ್ರಯೋಜನಕಾರಿಯಾದ ಸಾಹಿತ್ಯ ಬೇಕಾಗಿದೆ. ಆದರೆ ಜನತೆಗೆ ಬೇಕಾದ ಸಾಹಿತ್ಯವನ್ನು ಕನ್ನಡವು ಇನ್ನೂ ಕೊಟ್ಟಿಲ್ಲವೆಂಬ ಮಾತನ್ನು ವಿಷಾದದಿಂದಲಾದರೂ ಒಪ್ಪಬೇಕಾಗಿದೆ. ಕನ್ನಡ ಪ್ರೇಮಿಗಳು ಕೋಪಿಸಬಾರದು. ನನ್ನ ಹೇಳಿಕೆಯನ್ನು ಪುಷ್ಟೀಕರಿಸುವ ಕೆಲವು ಅಂಕಿಗಳನ್ನು ತಾವು ಅವಲೋಕಿಸಬೇಕು.

ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಪರವಾಗಿ ಪ್ರತಿವರುಷ ಕನ್ನಡ ಗ್ರಂಥ ಪ್ರದರ್ಶನ ನಡೆಯುತ್ತಿರುವುದು ತಮಗೆ ಗೊತ್ತಿರಲಿಕ್ಕೆ ಸಾಕು. ೧೯೩೭ ನೆಯ ವರುಷದ ಗ್ರಂಥಗಳ ವಿಭಜನೆಯನ್ನು ಪರಿಷತ್ತಿನವರು ಕೊಟ್ಟಿದ್ದಾರೆ. ಅದು ಹೀಗಿದೆ: (೧) ಪದ್ಯಕಾವ್ಯ ೪೬, (೨) ಸಣ್ಣ ಕತೆ ೪೨, (೩) ಮತಾಚಾರ ೩೫, (೪) ನಾಟಕ ೨೫, (೫) ಶಾಲಾಪುಸ್ತಕ ೨೪, (೬) ಜೀವನ ಚರಿತ್ರೆ ೧೮, (೭) ಚರಿತ್ರೆ ೧೫, (೮) ಸಾಹಿತ್ಯಪ್ರಬಂಧ ೧೩. ಅಂತು, ೧೯೩೭ ನೆಯ ಇಸವಿಯಲ್ಲಿ ಕೂಡ ಕನ್ನಡದಲ್ಲಿ ನಿರ್ಮಾಣವಾದ ಸಾಹಿತ್ಯದಲ್ಲಿ ಪದ್ಯಕಾವ್ಯಗಳೇ ಹೆಚ್ಚು. 'ಕಾವ್ಯಪರಿಣತಮತಿ' ಗಳ ನಾಡಿನಲ್ಲಿ ಕಾವ್ಯಗಂಗೆಯ ಹೊನಲು ಹರಿಯುವುದು ಸ್ವಾಭಾವಿಕವೆಂದು ಯಾರಾದರೂ ಹೇಳಬಹುದಾದರೂ ಆಧುನಿಕ ಕನ್ನಡ ಸಾಹಿತ್ಯವು ಜನತೆಯ ಆಶೆ ಆಕಾಂಕ್ಷೆಗಳನ್ನು ಪೂರೈಸುವುದು ಅವಶ್ಯವಿರುವದಷ್ಟೇ. ಕನ್ನಡಿಗರು ರಂಜನೆಗೆಂದು ತಮ್ಮ ಕತೆ ಕವನಗಳನ್ನು ಓದಿ ವಿವಿಧ ಜ್ಞಾನಸಂಗ್ರಹಕ್ಕಾಗಿ ಬೇರೆ ಸಾಹಿತ್ಯವನ್ನು ಆಶ್ರಯಿಸುವಂತೆ ಆಗಬಾರದಷ್ಟೇ. ಕನ್ನಡಿಗರಿಗಾಗಿ ಜ್ಞಾನವನ್ನು ಕನ್ನಡಿಸುವುದು ಅವಶ್ಯವಿರುವದರಿಂದ ನಮ್ಮ ಸಾಹಿತ್ಯನಿರ್ಮಾಣವು ಆ ದಿಶೆಯಲ್ಲಿ ನಡೆಯಬೇಕಾಗಿದೆ. ಪ್ರಬೋಧಕವಾದ ಗದ್ಯ ಸಾಹಿತ್ಯವು ಇಂದಿನ ಜನತೆಗೆ ಬೇಕಾಗಿದೆ. ಕನ್ನಡಭಾಷೆಗೆ ಮನ್ನಣೆಯು ದೊರೆಯಬೇಕಾದರೆ ಜನತೆಗೆ ಅವಶ್ಯವಾದುದನ್ನು ನೀಡುವಂತಾಗಬೇಕು.

ನಚ್ಚಿನ ಕನ್ನಡ ಸೋದರ-ಸೋದರಿಯರೇ, ಕನ್ನಡವು ಸುಮಾರು ಸಾವಿರ ವರುಷಗಳ ಸಂಸ್ಕಾರವುಳ್ಳ ಭಾಷೆ. ಒಂದು ಸಾವಿರಕ್ಕೆ ಮೇಲ್ಪಟ್ಟ ಕವಿಗಳ

ಕಾವ್ಯಗಳಿಂದ ಅಲಂಕರಿಸಲ್ಪಟ್ಟ ಭಾಷೆ. ಈಗಲೂ ಕೂಡ, ಒಂದು-ಒಂದೂವರೆ ಕೋಟಿ ಜನರ ಪ್ರತಿನಿತ್ಯ ವ್ಯವಹಾರದ ಭಾಷೆ. ಅದು ನಮ್ಮೆಲ್ಲರ ಮುದ್ದು ಭಾಷೆ. ಇಂತಹ ಭಾಷೆಗೆ ಮನ್ನಣೆ ದೊರೆಯಬೇಕಾಗಿಲ್ಲವೇ? ಹಾಗಿದ್ದರೆ ಅಂತಹ ಮನ್ನಣೆಯನ್ನು ಪಡೆಯುವ ಯೋಗ್ಯತೆಯನ್ನು ಕನ್ನಡಕ್ಕೆ ನಮ್ಮ ಸಾಹಿತಿಗಳು ಕೊಡತಕ್ಕದ್ದು ಅವಶ್ಯವಾಗಿದೆ. ನಾನು ಹಿಂದೊಮ್ಮೆ ಸೂಚಿಸಿದಂತೆ, ವಿಜ್ಞಾನ, ಗಣಿತ, ಅರ್ಥಶಾಸ್ತ್ರ, ವಿಮರ್ಶಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಘಟನೆ, ಸಮಾಜಸತ್ತಾವಾದ, ಪರದೇಶದ ರಾಜಕಾರಣ, ತುಲನಾತ್ಮಕ ಧರ್ಮಗಳ ಅಭ್ಯಾಸ, ಜಾಗತಿಕ ವಿಚಾರ ಪ್ರವಾಹಗಳ ಸಂಕಲನ, ಜಾಗತಿಕ ಜೀವಜ್ಯೋತಿಗಳ ಆತ್ಮಚರಿತ್ರೆ — ಇತ್ಯಾದಿ ವಿಷಯಗಳನ್ನು ಕುರಿತು ಕನ್ನಡದಲ್ಲಿ ಗ್ರಂಥಗಳು ನಿರ್ಮಾಣವಾಗಿ, ಅಭ್ಯಾಸಿಗಳ ಕುತೂಹಲವನ್ನು ತಣಿಸಿ, ಕನ್ನಡಕ್ಕೆ ಮನ್ನಣೆಯನ್ನು ತಂದು ಕನ್ನಡಿಗರ ಹೆಮ್ಮೆಯನ್ನು ಸಾರ್ಥಕಗೊಳಿಸಲೆಂಬ ನನ್ನ ಅಂತಃಕರಣದ ಆಶೆಯನ್ನು ಮತ್ತೊಮ್ಮೆ ಸೂಚಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಕನ್ನಡ ಸಾಹಿತ್ಯಕ್ಕೆ ಜೈನ ಕವಿಗಳ ಕಾಣಿಕೆ

ಜೈನರು ಕನ್ನಡಕ್ಕೆ ಆದಿ ಕವಿಗಳು. ಬೌದ್ಧರು ಕನ್ನಡದಲ್ಲಿ ಸಾಹಿತ್ಯವನ್ನು ಆರಂಭ ಮಾಡಿರಬಹುದೆಂಬ ವಿಮರ್ಶಕರ ಊಹೆಯೊಂದನ್ನು ಬಿಟ್ಟುಗೊಟ್ಟರೆ ಮೇಲಿನ ಹೇಳಿಕೆಯು ನಿರ್ವಿವಾದವಾದುದೆಂದೇ ಒಪ್ಪಬೇಕು. ನಮಗಿಂದು ಉಪಲಬ್ಧವಿರುವ ಆದಿಕಾವ್ಯ ( ಗ್ರಂಥ ) ನೃಪತುಂಗನ ಕಾವ್ಯಾವಲೋಕನ, ನಮ್ಮ ಆದಿಕವಿ ಪಂಪನು, ಇವರಿಬ್ಬರೂ ಜೈನರೇ. ಕನ್ನಡದ ಬಳಕೆವಾತಿನ ಭಾಷೆಯನ್ನು ಗ್ರಂಥಸ್ಥ ಭಾಷೆಯನ್ನು ಮಾಡಿದ ಶ್ರೇಯಸ್ಸಾದರೂ ಜೈನ ಕವಿಗಳಿಗಿದೆ. ಕನ್ನಡ ನಾಡಿನ ರಾಜಕೀಯ ಚರಿತ್ರೆಗೂ ಜೈನರಿಗೂ ನಿಕಟವಾದ ಸಂಬಂಧವಿದೆ. ಸಾಹಿತ್ಯ ಚರಿತ್ರೆಯಲ್ಲಿಯಂತೂ ಜೈನರು ಹೆಚ್ಚಿನ ಸ್ಥಾನ ಪಡೆದಿದ್ದಾರೆ. "ವಾಗ್ದೇವಿಯ ಭಾಂಡಾರದ ಮುದ್ರೆಯನೊಡೆದ" ಹೆಮ್ಮೆಯು ರನ್ನನಿಗಿದೆ. ಓಜಸ್ವಿಯಾದ ಕಾವ್ಯನಿರ್ಮಾಣದಲ್ಲಿ ಭವಭೂತಿ ಕವಿಗೆ ಹೊಯಿಕೈಯಾಗುವ ರನ್ನನಿಂದ ಕನ್ನಡ ಕಾವ್ಯಕ್ಕೆ ಕಳೆಗಟ್ಟಿದೆ. ಜಿನಸಮಯದೀಪಕರಾದ ಜೈನಕವಿಗಳು ಕನ್ನಡ ಕಾವ್ಯಕ್ಕೆ ರತ್ನಪ್ರಾಯರಾಗಿದ್ದಾರೆ. ಕನ್ನಡಕಾವ್ಯ ಪ್ರಪಂಚದಲ್ಲಿ ಕವಿ ಚಕ್ರವರ್ತಿಗಳೆಂದು ಬಿರುದಾಂತ ಪೊನ್ನ-ರನ್ನ-ಜನ್ನರೆಂಬ ಪ್ರಾಸದ ಹೆಸರಿನವರು ಜೈನ ರತ್ನತ್ರಯರು. ಅದ್ಭುತ ಕವಿತಾಸಾಮರ್ಥ್ಯವುಳ್ಳ ಪಂಪನಂತೂ ಜೈನ ಕಾವ್ಯ ಪ್ರಪಂಚಕ್ಕೆ ಮೊದಲಿಗನಾಗಿರುವಂತೆ ಕನ್ನಡ ಕಾವ್ಯ ಪ್ರಪಂಚಕ್ಕೂ ಮೊದಲಿಗನೂ ಅದ್ವಿತೀಯ ಕೀರ್ತಿಶಾಲಿಯೂ ಆಗಿದ್ದಾನೆ. ಪಂಪನು ಕನ್ನಡಕ್ಕೆ ಆದಿಕವಿಯಾದರೆ ಕಂತಿಯು ಆದಿ ಕವಯಿತ್ರಿಯಾಗಿದ್ದಾಳೆ. ಉದ್ದಾಮ ಕವಿ ನಾಗಚಂದ್ರನ ಪ್ರಶಂಸೆಗೆ ಪಾತ್ರಳಾದ ಹಾಗೂ "ಅಭಿನವ ವಾಗ್ದೇವಿ" ಎಂಬ ಬಿರುದನ್ನು ಪಡೆದ ಕಂತಿಯೂ ಜೈನಳಾಗಿದ್ದಂತೆ ತಿಳಿದು ಬರುತ್ತದೆ.

"ವೀತರಾಗನ ಚರಿತಮೊಳಳವಡಿಸಿ ಸಕಲ ರಸಮಂ ಕವಿತಾ ಪರಿಣತಿಯಂ ಮೆರೆಚಿದ" ಜಿನೋಪಾಸಕ ನಾಗಚಂದ್ರನದು ಒಂದು ಹಾದಿಯಾದರೆ "ಶೃಂಗಾರಮಂ ಕಾವ್ಯಬಂಧನದೊಳ್ ತಾಂ ಸೆರೆಗೆಯ್ವ ಮೆಯ್ಮೆ"ಯ ಹಾದಿಯು ನೇಮಿನಾಥನದು. "ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿ"ಯನ್ನೇ ಈಸುವೆನೆಂದು ಆದಿ ಪಂಪನು ಹೊರಟರೆ ಅಭಿನವ ಪಂಪನು ರಾಮಾಯಣದ ಕಥೆಯಲ್ಲಿ "ಜಗಮಂ ಯುಗಮಂ, ಮನ್ವಾದಿಗಳಂ, ಕಾಲಸ್ವರೂಪಮಂ, ಜಿನರಂ, ಚಕ್ರಿಗಳಂ, ಹಲಧರ, ಕೃಷ್ಣಾದಿ"ಗಳನ್ನು ವರ್ಣಿಸಿ ಶ್ರೀರಾಮ ಚರಿತವನ್ನು ಜೈನ ಪುರಾಣವನ್ನಾಗಿ ಮಾರ್ಪಡಿಸಿದ್ದಾನೆ. 'ಗುಣಾರ್ಣವ ಭೂಭುಜನಂ ಕಿರೀಟಿಯೊಳ್ ಪೋಲಿಪ' ಅಟ್ಟಯಿಂದ ಆದಿಪಂಪನು ವಿಕ್ರಮಾರ್ಜುನ ವಿಜಯವನ್ನು ಬರೆದರೆ ಜನ್ನನು ಹಿಂಸಾರಭಸಮತಿಯಾದ ಮಾರಿದತ್ತಂಗೆ ಸೈಪಂ ಪೇಳ್ದು ಧರ್ಮಕ್ಕೆ ತಂದ ಶುಭ ಕಥನವನ್ನು ಬರೆದಿದ್ದಾನೆ. 'ಕಿವಿಯಂ ಜಕ್ಕುಲಿಪ' ಶಬ್ದಗಳಿರಬೇಕೆಂಬ ಚಪಲಕ್ಕೆ ಒಳಗಾಗಿ ಅಗ್ಗಳನು ಸಂಸ್ಕೃತಪದ ಭೂಯಿಷ್ಠವಾದ ಪುರಾಣ ಬರೆದರೆ ಆಂಡಯ್ಯನು 'ಕನ್ನಡದೊಳ್ಪಿನ ನುಡಿ'ಯಲ್ಲಿಯೇ ಪುರುಳು, ಲಕ್ಕಣ, ಮೆಯ್ಸಿರಿಗಳನ್ನು ಸಾಧಿಸಲು ಹೊರಟಿದ್ದಾನೆ. ಮರ್ತ್ಯರ ತನುವು, ಕಳತ್ರಜನವು, ಸುರಧನುವಿನಂತೆ, ನೀರಿನ ಬುದ್ಬುದದಂತೆ ಕಿಸುಪಂಜೆಯ ರಂಜನೆಯಂತೆ, ಮುಗಿಲೊಡ್ಡಣದಾಕೃತಿಯಂತೆ ಕ್ಷಣಿಕವಾಗಿರಲು ಅವುಗಳಿಗೆ ಮನಸೋಲಬಾರದೆಂದು ಹೇಳುವ ಬಂಧುವರ್ಮ ನಂತಹ ಬೋಧಕರ ಜೊತೆಗೆ 'ರಾಗರಸಿಕ'ನಾಗಬೇಕೆಂದು ಹೇಳುವ ರಸಿಕ ರತ್ನಾ ಕರವರ್ಣಿಯಿದ್ದಾನೆ. ಹೀಗೆ ವಿವಿಧ ಧೋರಣೆಗಳಿಂದ, ಸಾಂಪ್ರದಾಯಗಳಿಂದ ಜೈನ ಕವಿಗಳು ಕನ್ನಡ ಕಬ್ಬದಂಗನೆಯ ಬೆಡಗನ್ನು ಹೆಚ್ಚಿಸಿದ್ದಾರೆ.

ಕನ್ನಡ ಭಾಷೆಯು ಸಂಸ್ಕಾರ ಹೊಂದಿ ಆ ಭಾಷೆಯಲ್ಲಿ ಕಾವ್ಯರಚನೆಯಾಗು ವಂತೆ ಅನುಕೂಲ ಮಾಡಿಕೊಟ್ಟವರು ಜೈನರು. ಸಂಸ್ಕೃತ ಭಾಷೆಯ ತೊಡವುಗಳನ್ನು ಕನ್ನಡಕ್ಕೆ ಇಟ್ಟು ಸಿಂಗರಿಸಲು ಯತ್ನಿಸಿದವರು ಅವರೇ. ಆದರೆ ಬರುಬರುತ್ತ ಅಲಂಕಾ ರಗಳ ಭಾರವೇ ಹೆಚ್ಚಾಗತೊಡಗಿದಾಗ ಆ ಸಂಸ್ಕೃತದ ಹೊರೆಯನ್ನು ಇಳಿಸಬೇಕೆಂದು ಪ್ರತಿಭಟಿಸಿದವರೂ ಜೈನರೇ. ಈ ಪ್ರತಿಭಟನೆಯ ಒಂದು ತುದಿಯನ್ನು ಮುಟ್ಟಿ ದವನು ಕಬ್ಬಿಗರ ಕಾವದ ಕರ್ತೃ ಆಂಡಯ್ಯ ಕವಿ. ಕನ್ನಡವು ಸರಳವಾಗಬೇಕೆಂದು ಸುಲಭವಾಗಬೇಕೆಂದು ಭಾಷೆಯ ಕಟ್ಟುಗಳನ್ನು ಕೆಲವರು ಶಿಥಿಲಮಾಡುತ್ತಿರು ವಾಗ ಭಾಷೆಗೆ ಕಟ್ಟುಗಳನ್ನು ಹಾಕಲು ಮುಂದೆ ಬಂದವನು ಶಬ್ದಮಣಿದರ್ಪಣ ಕರ್ತೃವಾದ ಕೇಶಿರಾಜನು. ಹೀಗೆ ಕನ್ನಡ ಭಾಷೆಯ ವಿವಿಧ ಗತಿಗಳಿಗೆ ಜೈನ ಕವಿಗಳು ಕಾರಣರಾಗಿದ್ದಾರೆ. ಕನ್ನಡ ಭಾಷೆಯನ್ನು ಸಂಸ್ಕಾರಗೊಳಿಸಿದ ಇವರು

ಆ ಭಾಷೆಯಲ್ಲಿ ಉತ್ತಮ ಲಕ್ಷಣ ಗ್ರಂಥಗಳನ್ನು ರಚಿಸಿದರು. ನೃಪತುಂಗದೇವನ ಕವಿರಾಜಮಾರ್ಗವು ಹೆಸರಿಗೆ ತಕ್ಕಂತೆ ಇಂದಿಗೂ ಕವಿಗಳ ರಾಜಮಾರ್ಗವಾಗಿ ಉಳಿದಿದೆ. 'ಪರಮಕವಿಪ್ರಧಾನರ ಆ ಕಾವ್ಯಂಗಳು ಪಾಪಮಿದು, ಪುಣ್ಯಮಿದು; ಹಿತರೂಪಮಿದು, ಅಹಿತಪ್ರಕಾರಮಿದು; ಸುಖಮಿದು, ದುಃಖೋಪಾತ್ತಮಿದು, ಎಂದು ಅರಿಪುಗುಂ' ಎಂದು ನೃಪತುಂಗದೇವನು ಸಾರಿದ ರೀತಿಯಲ್ಲಿಯೇ ಕನ್ನಡ ಕಾವ್ಯ ಪ್ರವಾಹವು ಹರಿದು ಬಂದಿದೆ. ಈತನ ನಂತರ ನಾಗವರ್ಮನೆಂಬ ಶ್ರೇಷ್ಠ ಲಾಕ್ಷಣಿಕನು ಆಗಿಹೋದನು.[೧] ನಾಗವರ್ಮನ ಹೆಸರಿನಲ್ಲಿ ಛಂದೋಂಬುಧಿ, ಕಾವ್ಯಾವಲೋಕನ, ಕರ್ನಾಟಕ ಭಾಷಾಭೂಷಣ, ವಸ್ತುಕೋಶ ಎಂಬ ಗ್ರಂಥ ಗಳಿವೆ. ಅಂದರೆ ಛಂದಸ್ಸು, ಅಲಂಕಾರ, ವ್ಯಾಕರಣ, ನಿಘಂಟು, ಹೀಗೆ ವಿವಿಧ ಬಗೆಯ ಉಪಯುಕ್ತ ಸಾಹಿತ್ಯವಿಲ್ಲಿದೆ. ಕನ್ನಡ ವ್ಯಾಕರಣಕ್ಕಂತೂ ಜೈನರೇ ಗುರು ಗಳಿದ್ದಂತೆ. ಕೇಶಿರಾಜನ ಶಬ್ದಮಣಿದರ್ಪಣವು ಇಂದಿಗೂ ಕನ್ನಡ ಭಾಷೆಯ ಅಭ್ಯಾಸಗ್ರಂಥವಾಗಿ, ಸಂದರ್ಭಗ್ರಂಥವಾಗಿ ಉಳಿದಿದೆ. ಭಟ್ಟಾಕಲಂಕದೇವನು ಕನ್ನಡ ವ್ಯಾಕರಣವನ್ನು ಸಂಸ್ಕೃತ ಭಾಷೆಯಲ್ಲಿ ವಿಶದವಾಗಿ ಬರೆದು ಅದನ್ನು ಪ್ರಚುರಗೊಳಿಸಿದನು. ಸಂಸ್ಕೃತ ಅಮರಕೋಶದ ರಚನೆಗೆ ಜೈನ ಕವಿ ಕಾರಣವಾ ದಂತೆ ಕನ್ನಡದಲ್ಲಿ ಅಮರಕೋಶ ವ್ಯಾಖ್ಯಾನಕ್ಕೆ ನಾಚಿರಾಜನೆಂಬ ಜೈನನು ಕಾರಣ ನಾಗಿದ್ದಾನೆ. ವಸ್ತುಕೋಶವಲ್ಲದೆ ಜೈನ ಕವಿಗಳು ಕರ್ನಾಟಕ ಸಂಜೀವಿನಿ, ನಾನಾರ್ಥ ರತ್ನಾಕರ (ಸು. ೧೬೦೦) ಮುಂತಾದ ಶಬ್ದಕೋಶಗಳನ್ನು ಬರೆದಿದ್ದಾರೆ. ಸಾಳ್ವನೆಂಬವನು ರಸರತ್ನಾಕರವೆಂಬ ರಸದ ಮೇಲಿನ ಗ್ರಂಥವನ್ನು ರಚಿಸಿ 'ಶಾರದಾ ವಿಲಾಸ' ವೆಂಬ ಧ್ವನಿಕಾವ್ಯವನ್ನು ಬರೆದು ಜೈನರ ಕನ್ನಡ ಲಕ್ಷಣ ಗ್ರಂಥಗಳ ಕ್ಷೇತ್ರವನ್ನು ವಿಸ್ತರಿಸಿದ್ದಾನೆ. ಈ ರೀತಿ ಜೈನರು ಕನ್ನಡಕ್ಕೆ ಕಾವ್ಯ ಶಾಸ್ತ್ರವನ್ನು ಒದವಿಸಿ ಕೊಟ್ಟಿದ್ದಾರೆ.

ಜೈನ ಕವಿಗಳ ತಮ್ಮ ಪಾರಮಾರ್ಥಿಕ ಗ್ರಂಥಗಳಲ್ಲಿ ಜೀವತತ್ತ್ವ, ಅಜೀವ ತತ್ತ್ವಗಳ ಮೂಲಕ ಉಪಯುಕ್ತ ಜ್ಞಾನವನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ತರ್ಕ ಶಾಸ್ತ್ರ, ತತ್ತ್ವಜ್ಞಾನ, ವಿಜ್ಞಾನ ಇತ್ಯಾದಿ ವಿಷಯಗಳು ಸಮಾವೇಶವಾಗುತ್ತವೆ. ಏಕೇಂದ್ರಿಯ ಇತ್ಯಾದಿ ಜೀವಗಳನ್ನು ಸೂಚಿಸುವುದರ ಮೂಲಕ ಸಸ್ಯಾದಿಗಳಿಗೂ ಜೀವವಿದೆ ಎಂಬ ಇಂದಿನ ನವೀನ ವಿಜ್ಞಾನ ಸಂಶೋಧನೆಯ ಪೂರ್ವಸೂಚನೆ ಕೊಟ್ಟಂತಿದೆ. ಆತ್ಮವಿಕಾಸಮಾರ್ಗ, ಆತ್ಮದ ಅಧೋಗತಿ, ಜನ್ಮಾಂತರಗಳ ಪಾಪ, ಪುಣ್ಯ ಇವುಗಳ ವಿವೇಚನೆಯಲ್ಲಿ ತತ್ತ್ವಜ್ಞಾನವು ಅಡಕವಾಗಿದೆ. ಸ್ಯಾದ್ವಾದ,

೧ ನಾಗವರ್ಮ ಹೆಸರಿನವರು ಇಬ್ಬರೆಂದು ಕವಿಚರಿತೆಕಾರರ ಅಭಿಪ್ರಾಯ.

ಪರಮತವಾದಖಂಡನೆ ಇವುಗಳಿಂದ ಜೈನರ ತರ್ಕಶಾಸ್ತ್ರವು ಬೆಳವಣಿಗೆ ಹೊಂದಿದ್ದು ಕಂಡುಬರುತ್ತಿದೆ. ತೀರ್ಥಂಕರ ಚರಿತೆಗಳಲ್ಲಿ ಈ ವಿಷಯಗಳು ಸಮಯಾನುಸಾರವಾಗಿ ಬರುವದಲ್ಲದೆ ಧರ್ಮಬೋಧೆಗೆಂದೇ ಬರೆಯಲ್ಪಟ್ಟ ಶಾಸ್ತ್ರ ಗ್ರಂಥಗಳೂ, ಸಂಸ್ಕೃತ ಗ್ರಂಥಗಳ ಟೀಕೆಗಳೂ ಇವೆ. ಇದಲ್ಲದೆ ಅಹಿಂಸಾ ತತ್ತ್ವವನ್ನು ಬೋಧಿಸಲೆಂದು ಬರೆದ ಜನ್ನನ 'ಯಶೋಧರ ಚರಿತೆ' ಯಂತಹ ಗ್ರಂಥಗಳೂ ಇವೆ. ಆದರೆ ಜೈನ ತೀರ್ಥಂಕರ ಚರಿತೆಗಳು ಕೇವಲ ಧರ್ಮ ಗ್ರಂಥಗಳಾಗಿರದೆ ಉತ್ತಮ ಕಾವ್ಯಗಳೂ ಆಗಿವೆ. 'ಆದಿಪುರಾಣದೊಳಱಿವುದು ಕಾವ್ಯಧರ್ಮಮಂ, ಧರ್ಮಮುಮಂ' ಎಂದು ಪಂಪನೇ ಹೇಳಿದ್ದಾನೆ. ಆವನ ಸಾಂಪ್ರದಾಯವನ್ನೇ ಮುಂದಿನ ಕವಿಗಳು ಅನುಸರಿಸಿದ್ದಾರೆ.

ಜೈನ ಕವಿಗಳು ಕೇವಲ ಮನೋರಂಜಕ ಕಾವ್ಯಗಳನ್ನು ಮಾತ್ರ ಬರೆಯದೆ ಉಪಯುಕ್ತ ಜ್ಞಾನವನ್ನು ಒದಗಿಸಿ ಕೊಡುವ ಗ್ರಂಥಗಳನ್ನೂ ಕನ್ನಡಕ್ಕೆ ಕೊಟ್ಟಿದ್ದಾರೆ. ೧೪ನೆಯ ಶತಮಾನದ ಮಂಗರಾಜನೆಂಬ ಕವಿಯು 'ಸರ್ವಜನೋಪಕಾರಿ' ಯಾದ ಗ್ರಂಥಗಳನ್ನು ಬರೆಯಬೇಕೆಂದೇ ಅಭಿಪ್ರಾಯಪಟ್ಟಿದ್ದಾನೆ.

> ಮರನಂ ಗಾಳಿಯ ಪೂಳಿಯಂ ರಜನಿಯಂ ನೀರಾಟಮಂ ಬೇಟಮುಂ
> ಸುರೆಯಂ ಸೂಳೆಯರಂ ವಿಟಾಟವಿಕರಂ ಕೊಂಡಾಡಿ ಬೆಂಡಾಗದೀ ।
> ಧರೆಯೊಳ್ ಸರ್ವಜನೋಪಕಾರಮೆನಲೀ ಮಂತ್ರೌಷಧಿವ್ರಾತಮಂ
> ನಿರುತಂ ಭಾವಿಸಿ ಪೇಳ್ದ ಮಾನವನೆ ತಾಂ ದೇವಂ ಧರಾಚಕ್ರದೊಳ್ ॥

ಸರ್ವಜನೋಪಕಾರಿಯಾದ ಮಂತ್ರೌಷಧವ್ರಾತವನ್ನು ಬರೆಯುವವನು ಈ ಭೂಮಿಯಲ್ಲಿ ದೇವನಿದ್ದಂತೆ ಎಂದು ಮಂಗರಾಜನು ಹೇಳುತ್ತಾನೆ. ಕನ್ನಡವು ಎಲ್ಲ ಬಗೆಯ ಜ್ಞಾನ ಭಾಂಡಾರವಾಗುವಂತೆ ಜೈನ ಕವಿಗಳು ಆಗಿನ ಕಾಲಕ್ಕೆ ಪ್ರಯತ್ನ ಪಟ್ಟಿದ್ದಾರೆ. ಮಂಗರಾಜನ ಖಗೇಂದ್ರ ಮಣಿದರ್ಪಣವು ವೈದ್ಯಗ್ರಂಥವಾಗಿದೆ. ಇದರಂತೆ ಕೀರ್ತಿವರ್ಮನ ಗೋವೈದ್ಯ, ಜಗದ್ದಳ ಸೋಮನಾಥನ ಕರ್ನಾಟಕ ಕಲ್ಯಾಣಕಾರಕ ಈ ಗ್ರಂಥಗಳು ವೈದ್ಯ ವಿಷಯವನ್ನು ನಿರೂಪಿಸುತ್ತಿವೆ. ಈ ಗ್ರಂಥಗಳಲ್ಲದೆ ಶ್ರೀಧರದೇವನ ವೈದ್ಯಾಮೃತ, ಸಾಳ್ವನ ವೈದ್ಯಸಾಂಗತ್ಯ ಈ ಗ್ರಂಥಗಳನ್ನೂ ಇಲ್ಲಿ ನಿರೂಪಿಸಬಹುದು. ವೈದ್ಯ ಗ್ರಂಥಗಳನ್ನಲ್ಲದೆ ಜೈನರು ಪಾಕಶಾಸ್ತ್ರ ಜ್ಯೋತಿಷಶಾಸ್ತ್ರ ಇವುಗಳ ಮೇಲೆಯೂ ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ಶ್ರೀಧರಾಚಾರ್ಯನ ಜಾತಕ ತಿಲಕವು ಮೊದಲನೆಯ ಕನ್ನಡ ಜ್ಯೋತಿಷ ಗ್ರಂಥವಾಗಿದೆ. ಇದಲ್ಲದೆ ರಟ್ಟಮತ, ನರಪಿಂಗಲಿ ಎಂಬ ಬೇರೆ ಗ್ರಂಥಗಳೂ ಜೈನ ಕವಿಗಳಿಂದ ಬರೆಯಲ್ಪಟ್ಟಿವೆ.

ವಿವಿಧ ಬಗೆಯ ಸಾಹಿತ್ಯ ನಿರ್ಮಾಣ ಮಾಡಿದ ಜೈನ ಕವಿಗಳು ಕನ್ನಡಕ್ಕೆ ಕೆಲವು ಶ್ರೇಷ್ಠ ಪ್ರತಿಯ ಕಟ್ಟು-ಕಥೆಗಳನ್ನು ಒದವಿಸಿಕೊಟ್ಟಿದ್ದಾರೆ. ನಾಗವರ್ಮನ ಕಾದಂಬರಿಯು ಸಂಸ್ಕೃತ ಗ್ರಂಥದ ಅನುವಾದವಾಗಿದೆ. ಆಂಡಯ್ಯನ ಕಬ್ಬಿಗರ ಕಾವ ನೇಮಿಚಂದ್ರನ ಲೀಲಾವತಿ ಇವು ಕನ್ನಡದ ಉತ್ತಮ ರಮ್ಯ ಕಥೆಗಳಾಗಿವೆ. ಕನಸಿನಲ್ಲಿ ಕಂಡರಿಸಿದ ಪ್ರಣಯಿಗಳ ಪಡೆಯುವ ಪ್ರಯತ್ನವನ್ನೆ ಮುಖ್ಯ ಕಾವ್ಯ ವಸ್ತುವಾಗಿಟ್ಟುಕೊಂಡು ಈ ಕಾವ್ಯಗಳು ರಚಿತವಾಗಿವೆ. ಆದರೆ ವಿಮರ್ಶಕರು ಕಬ್ಬಿಗರ ಕಾವದಲ್ಲಿ ಬೇರೊಂದು ಐತಿಹಾಸಿಕ ಧ್ವನಿಯನ್ನು, ಧಾರ್ಮಿಕ ವಿಡಂಬನೆಯ ಸೂಕ್ಷ್ಮವನ್ನು ಕಾಣುತ್ತಿದ್ದಾರೆ. ಇದಲ್ಲದೆ ಆಂಡಯ್ಯನ ಗ್ರಂಥವು ಅಚ್ಚಗನ್ನಡದ ಪದಗಳಿಂದಲೇ ಕಾವ್ಯರಚನೆ ಮಾಡಬಹುದೆಂಬುದನ್ನು ತೋರಿ ಕನ್ನಡದ ಹೆಮ್ಮೆಯನ್ನು ಹೆಚ್ಚಿಸಿದೆ. ಸೌಂದರ್ಯಾರಾಧಕ ನೇಮಿನಾಥನು ಲೀಲಾವತಿ ಕಾವ್ಯ ಬಂಧನದಲ್ಲಿ ಶೃಂಗಾರವನ್ನು ಸೆರೆಗೆಯ್ದಿದ್ದಾನೆ.

ತೀರ್ಥಂಕರ ಚರಿತ್ರೆಗಳಲ್ಲಿಯ ಪೂರ್ವಾರ್ಧವು ಸಾರ್ವಭೌಮನ ವರ್ಣನೆಯನ್ನು ಉತ್ತರ ಭಾಗವು ತೀರ್ಥಂಕರನಾಗುವವನ ಧಾರ್ಮಿಕ ಜೀವನದ ಚಿತ್ರವನ್ನು ಒಳಗೊಂಡಿರುತ್ತವೆ. ಪೂರ್ವಾರ್ಧದಲ್ಲಿ ಶೃಂಗಾರವೇ ಮುಖ್ಯ ರಸವಾದರೆ ಉತ್ತರಾರ್ಧದಲ್ಲಿ ಶಾಂತರಸವೇ ಕಂಡುಬರುತ್ತವೆ. ಕನ್ನಡ ಕಾವ್ಯಗಳಲ್ಲಿಯ ಈ ಶಾಂತರಸ ನಿರೂಪಣೆಯು ಕಾವ್ಯ ಲಕ್ಷಣಗಳಿಗೆ ಹೊಸ ಕಾಣಿಕೆಯಾಗಿದೆ. ಶಾಂತವೂ ಒಂದು ರಸವೆಂಬುದನ್ನು ನಿಶ್ಚಿತವಾಗಿ ಒಪ್ಪಿ "ನಿನಗೆ ರಸಮೊಂದೆ ಶಾಂತಮೆ, ಜಿನೇಂದ್ರ" ಎಂದು ಜೈನ ಕವಿಗಳು ಹಾಡಿದರು. ಅಂತು ಶಾಂತರಸವು ಕಾವ್ಯಕ್ಕೆ ಜೈನ ಕವಿಗಳ ಕಾಣಿಕೆಯಾಗಿದೆಯೆಂಬ ಮಾತು ಗಮನಾರ್ಹವಾದುದು. 'ಪೊಗಳ್ವೆಂ ಮನೋಜನಂ' ಎಂದು ಹೇಳುವ ನೇಮಿಯು ಒಬ್ಬನಾದರೆ 'ನಿನಗೆ ರಸಮೊಂದೆ ಶಾಂತಮೆ........ ಮಿಕ್ಕ ರಸಮಂ ಕನಸಿನೊಳಂ ನೆನೆಯದಂತು ಮಾಡೆನಗರ್ಹಾ' ಎಂದು ಹಾಡಿದ ಕವಿಗಳೇ ಹೆಚ್ಚು. ರಾಗಗಳೆಲ್ಲವನ್ನೂ ತೊಡೆದುಹಾಕಿದ ವಿರಾಗಿಗಳಾದ ತೀರ್ಥಂಕರರ ಜೀವನವನ್ನು ಚಿತ್ರಿಸುವುದರ ಮೂಲಕ ಜೈನ ಕವಿಗಳು ಶಾಂತರಸವನ್ನು ತಮ್ಮ ಕಾವ್ಯಗಳಲ್ಲಿ ನಿಲಿಸಿದರು.

ಜೈನರು ಕನ್ನಡದಲ್ಲಿ ಚಂಪೂ ಕಾವ್ಯಗಳ ಆದಿಕರ್ತೃಗಳಾಗಿದ್ದಾರೆ. ಚಂಪೂವಿನ ಗಾಂಭೀರ್ಯದಿಂದ ಕನ್ನಡ ಕಬ್ಬದಂಗನೆಗೆ ಗಾಂಭೀರ್ಯವನ್ನು ತರಲು ಅವರು ಯತ್ನಿಸಿದರು. ಪಂಪ-ರನ್ನ-ನಾಗಚಂದ್ರ-ಜನ್ನರ ಹೆಸರುಗಳು ಕನ್ನಡ ಸಾಹಿತ್ಯದಲ್ಲಿ ಅಮರವಾಗಿ ಉಳಿದಿವೆ. ಲಕ್ಷಣ ಗ್ರಂಥಗಳನ್ನು ಬರೆದು, ಲಕ್ಷಣ ಗ್ರಂಥಗಳಿಗೆ ಅನುಸರಿಸಿ ಪ್ರೌಢ ಚಂಪೂ ಕಾವ್ಯಗಳನ್ನು ಬರೆದು ಕನ್ನಡ ನುಡಿದೇವಿಯನ್ನು ಸಿಂಗ

ರಿಸಿದವರು ಜೈನ ಕವಿಗಳೇ. ಆದರೂ ಕಾಲಕ್ರಮದಲ್ಲಿ ಜನತೆಯ ಒಲವನ್ನು ಅನುಸರಿಸಿ ಹೊಸ ಹಾದಿಯನ್ನೂ ಕೆಲ ಜೈನ ಕವಿಗಳು ಹಿಡಿದಿದ್ದಾರೆ. ಸಕಲ ಲಕ್ಷಣಕ್ಕಾಗಿ ಬಿರಸುಮಾಡಿ ಪುಸ್ತಕವನ್ನು ಬದನೆಕಾಯಿ ಮಾಡಬಾರದೆಂಬ ಎಚ್ಚರಕೊಟ್ಟ ರಸಿಕ ರತ್ನಾಕರ ವರ್ಣಿಯ 'ಭರತೇಶ ವೈಭವ' ಗ್ರಂಥವು ವರ್ಣಕ ಗ್ರಂಥಗಳಲ್ಲಿ ಹೆಚ್ಚಿನ ಸ್ಥಾನ ಪಡೆದಿದೆ. ಕಾವ್ಯವನ್ನು ಸಾಂಗತ್ಯದಲ್ಲಿಯೇ ಬರೆಯಲು ಮೊದಲುಮಾಡಿದ ಶ್ರೇಯಸ್ಸಾದರೂ ಕವಿಚರಿತಕಾರರ ಅಭಿಪ್ರಾಯದ ಪ್ರಕಾರ ಜೈನ ಶಿಶುಮಾಯಣನಿಗೇ ಇದೆ. ಕಾವ್ಯ ಪ್ರಪಂಚದಲ್ಲಿ ಹಲವು ಬಗೆಯ ಹಾದಿಗಳಿಂದ ಕನ್ನಡವನ್ನು ಸಿಂಗರಿಸಿದ ಜೈನರು ಕಾವ್ಯ ಸಂಗ್ರಹಗಳನ್ನು ತಯಾರಿಸಿ ಅಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ. ಹದಿಮೂರನೆಯ ಶತಮಾನದ ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವ ಹದಿನಾರನೆಯ ಶತಮಾನದ ಅಭಿನವವಾದಿವಿದ್ಯಾನಂದನ ಕಾವ್ಯ ಸಾರ ಇವುಗಳೆರಡೂ ಹಳಗನ್ನಡದ ಉಪಯುಕ್ತ ಕಾವ್ಯ ಸಂಗ್ರಹಗಳಾಗಿವೆ.

ಸರಸ್ವತಿಗೆ ವಿಳಾಸಮಂ ಪೊಸತು ಮಾಡುವ ಪಂಪನ ವಾಗ್ವಿಳಾಸವು ಕನ್ನಡಿಗರ ಹೆಮ್ಮೆಯ ಸೊತ್ತು. ಅಪೂರ್ವವಾದ ಕಾವ್ಯಶಕ್ತಿಯ ಆದಿಪಂಪನು ಮುಂದಿನ ಕವಿಗಳ ಮೇಲೆ ತನ್ನ ಪ್ರಭಾವವನ್ನು ತೋರಿಸಿದ್ದಾನೆ. ನಾಗಚಂದ್ರನಂತೂ ಇವನ ಪ್ರಭಾವವನ್ನು ಒಪ್ಪುವಂತೆ 'ಅಭಿನವ ಪಂಪ' ಎಂಬ ಹೆಸರಿನಿಂದ ತನ್ನ ಕಾವ್ಯ ರಚನೆ ಮಾಡಿದ್ದಾನೆ. ಕ್ಷಾತ್ರರಸದ ಮೇಲ್ಮೆಯನ್ನು ಮೆರೆದಿರುವ ರನ್ನನು ಪಂಪನ ಶಿಷ್ಯತ್ವವನ್ನು ಪ್ರಕಟವಾಗಿ ಒಪ್ಪಿಲ್ಲವಾದರೂ ಗದಾಯುದ್ಧ ಕಾವ್ಯ ನಿರ್ಮಾಣದಲ್ಲಿ ಈ ಮಾತು ತಾನಾಗಿಯೇ ಸೂಚಿತವಾಗುತ್ತದೆ. ಅಹಿಂಸೆಯ ತತ್ವವನ್ನು ಬೋಧಿಸಲೆಂದು ಹೊರಟ ಜನ್ನನ ಯಶೋಧರಚರಿತೆಯು ಒಂದು ಅಪೂರ್ವ ಕಲಾಕೃತಿಯಾಗಿದೆ.

ಪಂಪ-ರನ್ನರ ಮಹಾಭಾರತ, ನಾಗಚಂದ್ರನ ರಾಮಾಯಣ ಇವುಗಳ ಮೂಲಕ ಕನ್ನಡಕ್ಕೆ ಒಂದು ವಿಶಿಷ್ಟ ಕಾಣಿಕೆಯು ಜೈನ ಕವಿಗಳಿಂದ ಸಲ್ಲಿಸಲ್ಪಟ್ಟಿದೆಯೆಂದು ನನಗೆ ಅನಿಸುತ್ತದೆ. ಸಮಸ್ತ ಭಾರತವನ್ನು ಅಪೂರ್ವವಾಗಿ, ಪಿರಿದಾದ ಕತೆಯನ್ನು ಕತೆಯ ಮೆಯ್ಗಿಡಲೀಯದೆ ಪಂಪನು ಹೇಳಿದ್ದಾನೆ. ರನ್ನನು ತನ್ನ ಚಿಕ್ಕದಾದ ಕಾವ್ಯದಲ್ಲಿ ಭಾರತದ ಕಥೆಯೆಲ್ಲವನ್ನೂ ಸಿಂಹಾವಲೋಕನಕ್ರಮದಿಂದ ಹೇಳಿದ್ದಾನೆ. ನಾಗಚಂದ್ರನು 'ಪಿರಿದೆನಿಸಿರ್ದ ರಾಮಕಥೆಯಂ ಕಿರಿದಾಗಿರೆ, ದೇಸಿಮಾರ್ಗವೆಂಬರಡರೊಳಂ ರಸಂಬಡೆ'ಯುವಂತೆ 'ರಾಮಚಂದ್ರ ಚರಿತ ಪುರಾಣ'ವನ್ನು ಬರೆದಿದ್ದಾನೆ. ಈ ಕವಿಗಳು ಸಂಸ್ಕೃತ ಸಾಹಿತ್ಯದ ಮಹಾಕಾವ್ಯಗಳಿಂದ ಮಹಾಭಾರತ ರಾಮಾಯಣ ಕಥೆಗಳನ್ನು ತಮ್ಮ ತಮ್ಮ ರೀತಿಯಲ್ಲಿ ಮಾರ್ಪಾಡು ಮಾಡುವಾಗ ಆ ಕಾವ್ಯಗಳಿಗೆ

ಕನ್ನಡದ ಮುದ್ರೆಯನ್ನು ಹಾಕಿದ್ದಾರೆಂದು ಹೇಳಬೇಕಾಗುತ್ತಿದೆ. ಪ್ರಾಚೀನ ಕಾವ್ಯಗಳಿಗೆ ಈ ನವೀನ ದೃಷ್ಟಿಯನ್ನು ಕೊಟ್ಟು ಆ ಕಾವ್ಯಗಳನ್ನೇ ಕನ್ನಡಕ್ಕೆ ಹೊಸತು ಮಾಡಿ ಜೈನ ಕವಿಗಳು ಕೊಟ್ಟಿದ್ದಾರೆ. ಛಲದೊೞ್ ದುರ್ಯೋಧನ, ನನ್ನಿಯೊಳಿನತನಯ, ಗಂಡಿನೊಳ್ ಭೀಮಸೇನ, ಬಲದೊಳ್ ಮದ್ರೇಶ, ಅತ್ಯುನ್ನತಿಯೊಳಮರ ಸಿಂಧೂದ್ಭವ, ಚಾಪ ವಿದ್ಯಾಬಲದೊಳ್ ದ್ರೋಣ, ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರ ಹೀಗೆ ಮಹಾಭಾರತ ಕಾಂಡಪಟದೊಳಗಿನ ಮಹಾವ್ಯಕ್ತಿಗಳ ಮೇಲೆ ಪ್ರಕಾಶ ಕೆಡಹಿ ಅವರವರ ಘನತೆಯನ್ನು ತನ್ನ ಕಾವ್ಯದಲ್ಲಿ ಆದಿಪಂಪನು ಪ್ರತಿಬಿಂಬಿಸಿದ್ದಾನೆ. ಸಮಸ್ತ ಭಾರತವನ್ನು ಸಂಗ್ರಹವಾಗಿ ಹೇಳಬೇಕು, ಆದರೆ ಅಪೂರ್ವವಾಗಿಯೂ ಹೇಳಬೇಕೆಂಬ ತನ್ನ ಉದ್ದೇಶವನ್ನು ತನ್ನ ಉಜ್ವಲವಾದ ಕವಿತೆಯ ಮೂಲಕ ಪಂಪನು ಸಾಧಿಸಿದ್ದಾನೆ. ಈ ಪಾತ್ರ-ಪರಿಚಯದಲ್ಲಿ ರನ್ನನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ದುರ್ಯೋಧನನನ್ನು 'ಅತ್ಯುದಾತ್ತ ನಾಯಕ'ನಂತೆ ಚಿತ್ರಿಸಿದ್ದಾನೆ. ದುರ್ಯೋಧನನು ರನ್ನನ ಗದಾಯುದ್ಧದಲ್ಲಿ ಮಹಾನುಭಾವನಾಗಿದ್ದಾನೆ. ವಾಚಕರ ಸಹಾನುಭೂತಿಗೆ ಅರ್ಹನಾದ ಉದಾತ್ತ ಜೀವಿಯಾಗಿದ್ದಾನೆ. ಪೂರ್ವ ಭಾರತದ ಕಥೆಯಲ್ಲಿಯ ಅವನ ದುಷ್ಟ ವರ್ತನೆಗಳು ಏನೇ ಇರಲಿ, ಅವನ್ನೆಲ್ಲ ಮರೆಯಿಸಿ ತನ್ನ ಉನ್ನತ ವ್ಯಕ್ತಿತ್ವದ ಉಜ್ವಲತೆಯಿಂದ ಮೆರೆಯುತ್ತಿದ್ದಾನೆ ದುರ್ಯೋಧನನಿಲ್ಲಿ. ಗದಾಯುದ್ಧದಲ್ಲಿಯ ದುರ್ಯೋಧನನು ದುರಂತನಾಯಕನಾಗಿ ಓದುಗರ ಚಿತ್ತಭಿತ್ತಿಯ ಮೇಲೆ ಸ್ಫುಟವಾಗಿ ಮೂಡಿ ಅವರು ಕಣ್ಣೀರು ಉದುರಿಸುವಂತೆ ಮಾಡುತ್ತಾನೆ. ಭೀಮನ ಭಯದಿಂದ ವೈಶಂಪಾಯನ ಸರಸ್ಸಿನಲ್ಲಿ ಅಡಗುವ ದುರ್ಯೋಧನನು ಇಲ್ಲಿಲ್ಲ. 'ರಣಕ್ಕೆ ಶುಚಿತ್ವ'ವನ್ನು ತಂದ ಕುಮಾರ ಅಭಿಮನ್ಯುವಿನ ಶವದ ಸುತ್ತಲೂ ಪ್ರದಕ್ಷಿಣೆ ಹಾಕಿ ಕೈ ಮುಗಿಯುವ ದೊಡ್ಡ ಮನಸ್ಸು ಗದಾಯುದ್ಧದ ದುರ್ಯೋಧನನಿಗಿದೆ. ಸಾರ್ವಭೌಮನಾಗಿದ್ದ ದುರ್ಯೋಧನನು ರಣರಂಗದಲ್ಲಿ ದೇಸಿಗನಂತೆ ತಿರುಗುವ ದೃಶ್ಯ ನಮ್ಮ ಮನವನ್ನು ಸೂರೆಗೊಳ್ಳುತ್ತದೆ. ಆತನಿಗಾಗಿ ಅನುತಾಪವನ್ನು ಉಂಟುಮಾಡುತ್ತಿದೆ. ಪೂರ್ವ ಭಾರತದ ಕಥೆಯಲ್ಲಿ ದ್ವೇಷದಿಂದ ತುಂಬಿದ್ದಾನೆಂದು ಹೇಳಲಾಗುವ ದುರ್ಯೋಧನನು ಉತ್ತರ ಭಾರತದ ಈ ಕಥೆಯಲ್ಲಿ ತನ್ನ ವೈರಿಗಳಾದ ಪಾಂಡವರ ಮಕ್ಕಳ ಶಿರಗಳನ್ನು ಅಶ್ವತ್ಥಾಮನು ಕತ್ತರಿಸಿಕೊಂಡು ಬಂದಾಗ "ಕೃಷ್ಣೆಯ ಸೂನುಗಳಪ್ಪ ಪಂಚ ಪಾಂಡವರ ಶಿರಂಗಳಂ ನೆರೆ ವಿಚಾರಿಸಿದಕ್ಕಟಕೊಂಡು ಬರ್ಪುದೇ" ಎಂದು ಗೋಳಿಡುತ್ತಾನೆ. ವ್ಯರ್ಥವಾಗಿ ಶಿಶುಹತ್ಯ ನಡೆಯಿತೆಂದು ಕೊರಗುತ್ತಾನೆ. ಸ್ನೇಹ ಮೂರ್ತಿಯಾದ

ದುರ್ಯೋಧನನನು ತನ್ನ ತಮ್ಮ, ಗೆಳೆಯ ಹಾಗೂ ಇತರ ವೀರರು ಇವರುಗಳ ಮರಣಕ್ಕಾಗಿ ಪ್ರಲಾಪ ಮಾಡುತ್ತಿರುವದನ್ನು ಓದುವಾಗ ನಮ್ಮ ಹೃದಯದ ಕಟ್ಟು ಒಡೆದು ಹೋಗುವಂತಾಗುತ್ತದೆ. ಆತನು ಮರಣ ಹೊಂದಿದಾಗ 'ಅಯ್ಯೋ' ಎನಿಸುತ್ತದೆ; ಒಂದು ಉದಾತ್ತ ವಸ್ತುವನ್ನು ಕಳೆದುಕೊಂಡಂತಾಗುತ್ತದೆ. ದುರ್ಯೋಧನನ ಪಾತ್ರದಲ್ಲಿಯ ಈ ದೃಷ್ಟಿಯು ಹೊಸದೇ ಸರಿ. ಇದಲ್ಲದೆ ರನ್ನನು ತನ್ನ ನಾಟಕ ಸಂವಿಧಾನದಿಂದ 'ಗದಾಯುದ್ಧ' ಕಾವ್ಯಕ್ಕೆ ಒಂದು ಕಳೆಯನ್ನು ತಂದುಕೊಟ್ಟಿದ್ದಾನೆ. ಯಾವ ಕಾರಣಕ್ಕಾಗಿಯೇ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕಗಳು ಇಲ್ಲದೆ ಹೋಗಿದ್ದರೂ ಕೆಲವು ಕವಿಗಳು ನಾಟ್ಯಪ್ರತಿಭೆಯನ್ನು ತೋರಿದ್ದಾರೆ. ಅಂತಹರಲ್ಲಿ ರನ್ನನೊಬ್ಬನು.

ಜೈನಕವಿಗಳು ಮಹಾಭಾರತದ ಕಥಾವಸ್ತುವಿನಲ್ಲಿ ಮಾರ್ಪಾಟುಗಳನ್ನು ಮಾಡಿಕೊಂಡಿಲ್ಲವಾದರೂ ರಾಮಾಯಣದಲ್ಲಿ ಮಾಡಿಕೊಂಡಿದ್ದಾರೆ. ಕೆಲವು ವ್ಯತ್ಯಾಸಗಳಿಗೆ ಜೈನಧರ್ಮ ಪ್ರೇರಕಬುದ್ಧಿ ಕಾರಣವಾದರೂ ಇನ್ನೂ ಕೆಲವುಗಳಿಗೆ ಹೊಸ ದೃಷ್ಟಿಯೇ ಕಾರಣವಾಗಿರಬೇಕು. ರಾವಣನಿಗೆ ಹತ್ತು ತಲೆಗಳಿದ್ದವು, 'ವಾನರ' ರೆಂಬವರಿಗೆ ಬಾಲಗಳಿದ್ದವು, ಎಂಬ ಕಲ್ಪನೆಗಳು ತರ್ಕಶುದ್ಧ ಬುದ್ಧಿಗೆ ಒಪ್ಪುವದಿಲ್ಲವಾಗಿ ಜೈನ ಕವಿಗಳು ಈ ಮಾತುಗಳನ್ನು ತಮ್ಮ ಕಾವ್ಯಗಳಲ್ಲಿ ಮಾರ್ಪಾಡು ಮಾಡಿದ್ದಾರೆ. ಮಹಾಭಾರತದ ಕಥೆ ಹೇಳುವಾಗ ದ್ರೌಪದಿಗೆ ಐದು ಜನ ಪತಿಗಳೆಂಬ ಮಾತಿನ ವಿಚಾರವಾಗಿ ಪಂಪನಿಗೂ ಇದೇ ತೊಡಕು ಬಂದಿದೆ. ಜೈನ ರಾಮಾಯಣಗಳಲ್ಲಿ ರಾವಣನಿಗೆ ಒಂದೇ ತಲೆ. 'ದಶಶಿರ' ನೆಂಬ ಬಿರುದು ಮಾತ್ರ ಆತನಿಗೆ ಇತ್ತು. 'ಹನುಮಂತ' ಮುಂತಾದವರು ಕಪಿಗಳಲ್ಲ; ಕಪಿಧ್ವಜರು. ಹೀಗೆ ಹೇಳುವ ನಾಗಚಂದ್ರನು ತನ್ನ 'ರಾಮಚರಿತ ಪುರಾಣ'ದಲ್ಲಿಯ ವ್ಯಕ್ತಿಗಳನ್ನು ಬೇರೊಂದು ದೃಷ್ಟಿಕೋನದಿಂದ ತೋರಿಸಿದ್ದಾನೆ. ಅಂತೆಯೆ ರಾಮಾಯಣದ ಕವಿಗಳ ಭಾರದಲ್ಲಿ ಫಣಿರಾಯನು ತಿಣುಕಿದುದು ನಿಜವಾದರೂ ನಾಗಚಂದ್ರನ ರಾಮಾಯಣಕ್ಕೆ ಕನ್ನಡದಲ್ಲಿ ಸಾಕಷ್ಟು ಅವಕಾಶವಿದೆ. ಇಷ್ಟೇ ಅಲ್ಲ, ರಾಮಾಯಣದಲ್ಲಿ ಒಂದು ಹೊಸ ಸಾಂಪ್ರದಾಯವನ್ನು ಕನ್ನಡಕ್ಕೆ ಕೊಟ್ಟು ನಾಗಚಂದ್ರನು ಕೀರ್ತಿಶಾಲಿಯೂ ಆಗಿದ್ದಾನೆ. ರನ್ನನ ದುರ್ಯೋಧನನು ದುರಂತನಾಯಕನಾಗಿ ವಾಚಕರ ಸಹಾನುಭೂತಿಗೆ ಅರ್ಹನಾಗಿರುವಂತೆ ನಾಗಚಂದ್ರನ ರಾವಣನೂ ಇದ್ದಾನೆ. ದುರಂತನಾಯಕರ ಚಿತ್ರದಲ್ಲಿ ಒಂದು ಸಹಜತೆ, ಒಂದು ಕಲೆಗಾರಿಕೆ ಇರುತ್ತವೆ. ಅವುಗಳನ್ನು ನಾವು ದುರ್ಯೋಧನ ರಾವಣ ಈ ಪಾತ್ರಗಳ ನಿರೂಪಣೆಯಲ್ಲಿ ಕಾಣಬಹುದಾಗಿದೆ. "ಎನ್ನ ಪಾಪಕರ್ಮದ ಕತದಿಂದಮೀ ನಿಮಗಮೀಯರವಾದುದೆ

ಸಿಂಧುನಂದನಾ" ಎಂದು ಆಕ್ರೋಶಗೆಯ್ಯುವ ದುರ್ಯೋಧನ, "ಪ್ರಾಣಪ್ರಿಯರಂ ನೆವಮಿಲ್ಲದೆ ಕರ್ಮವಶಮೆನೆ ನೆವಮೆನೆ" ಅಗಲಿಸಿದನೆಂದು ಪಶ್ಚಾತ್ತಾಪದಿಂದ ಕೊರಗುವ ರಾವಣ ಈ ಪಾತ್ರಗಳು ಎಂದಿಗೂ ನಮ್ಮ ಮನವನ್ನು ಆಕರ್ಷಿಸುತ್ತವೆ. ಈ ಪಾತ್ರನಿರೂಪಣೆಯಲ್ಲಿ ಅನ್ಯ ಕವಿಗಳ ಪ್ರಭಾವದ ಅಂಶವೆಷ್ಟೆಂಬುದನ್ನು ಹುಡುಕುವ ಕಾರ್ಯವನ್ನು ಸಂಶೋಧಕರಿಗೆ ಬಿಟ್ಟುಕೊಡೋಣ. ಆದರೆ ಇಲ್ಲಿ ಕಂಡು ಬರುವ ದೃಷ್ಟಿ ಕನ್ನಡಕ್ಕೆ ಮಾತ್ರ ಹೊಸತು, ಎಂಬ ಮಾತನ್ನು ಒಪ್ಪೋಣ. ಕ್ರೂರ ವಿಧಿಯ ಆಟಕ್ಕೆ ಬಲಿಯಾದ ಈ ಇಬ್ಬರನ್ನೂ ರನ್ನ ನಾಗಚಂದ್ರರು ಮಹಾನುಭಾವರೆಂದೇ ಚಿತ್ರಿಸಿದ್ದಾರೆ. ಸಂಸ್ಕೃತ ಮಹಾಭಾರತ-ರಾಮಾಯಣಗಳ ಪ್ರಚಾರವು ಆಗ ಕನ್ನಡ ನಾಡಿನಲ್ಲಿ ಸಾಕಷ್ಟು ಇದ್ದಿರಬಹುದು. ಕನ್ನಡಿಗರ ಜನಮನದ ಮೇಲೆ ಆ ಮಹಾಕಾವ್ಯಗಳ ಪ್ರಭಾವವಾದರೂ ಆಗ ಇದ್ದಿರಬೇಕು. ಆದರೆ ಆ ಮಹಾಕಾವ್ಯಗಳನ್ನೇ ಆಧಾರವಾಗಿಟ್ಟುಕೊಂಡಿದ್ದರೂ ಅವುಗಳಲ್ಲಿಯೇ ನವೀನ ಸೃಷ್ಟಿಯನ್ನು ತಂದು ಆ ಕಾವ್ಯಗಳ ಉಪಯೋಗವನ್ನು ಬೇರೊಂದು ದೃಷ್ಟಿಯಿಂದ ಸಿದ್ಧಪಡಿಸಿದವರು ಜೈನರು. ಜೈನ ಸಾಂಪ್ರದಾಯದಲ್ಲಿ ಈ ಮಾರ್ಪಾಡುಗಳು ಈ ಮೊದಲೇ ನಡೆದಿದ್ದವಾದ್ದರಿಂದ ಇದರ ಶ್ರೇಯಸ್ಸು ಸಂಪೂರ್ಣವಾಗಿ ಕನ್ನಡ ಕವಿಗಳಿಗೆ ಇಲ್ಲವೆಂದು ಹೇಳುವವರು ಇದ್ದಿರಬಹುದು. ಆದರೆ ಈ ಸಾಂಪ್ರದಾಯ, ದೃಷ್ಟಿ ಕನ್ನಡಕ್ಕಂತೂ ಹೊಸವೇ ಸರಿ. ಈ ದೃಷ್ಟಿಯಿಂದ ನಾವು ಪಂಪ-ರನ್ನ-ನಾಗಚಂದ್ರರ ಪಂಪಭಾರತ, ಗದಾಯುದ್ಧ, ಪಂಪರಾಮಾಯಣ ಇವುಗಳ ಉಪಯುಕ್ತತೆಯನ್ನು ಒಪ್ಪಬೇಕಾಗುತ್ತದೆ. ಆದರೆ ಈ ಕೃತಿಗಳಲ್ಲಿ ನವೀನ ದೃಷ್ಟಿಯೊಂದನ್ನೇ ಅಲ್ಲ ನಾವು ಕಾಣುತ್ತಿರುವುದು, ಅದರ ಜೊತೆಗೆ ನವೀನ ಕಲಾಕೃತಿಯು ಇವುಗಳಲ್ಲಿ ಕಂಡುಬರುತ್ತದೆ. ಪಂಪನ ವಾಗ್ವಿಳಾಸ, ರನ್ನನ ವೀರಶ್ರೀ, ನಾಗಚಂದ್ರನ ವಿಪಂಚಿಯ ದನಿ ಇವುಗಳು ಕನ್ನಡ ಕಾವ್ಯಗಳಿಗೆ ಉತ್ತಮ ಕಾಣಿಕೆಗಳಾಗಿವೆ.

ಜೈನರು ಕನ್ನಡಕ್ಕೆ ಕಾವ್ಯಗಳನ್ನು ಕೊಟ್ಟಿದ್ದಾರೆ: ಕಾವ್ಯ ಲಕ್ಷಣಗಳನ್ನು ಕೊಟ್ಟಿದ್ದಾರೆ; ರಸಿಕ ಮನೋಹಾರಿಗಳಾದ ಕಾವ್ಯಗಳ ಜೊತೆಗೆ ಜೀವನಕ್ಕೆ ಉಪಯುಕ್ತವಾದ ಜ್ಞಾನವನ್ನು ಕಾವ್ಯದ ಮೂಲಕವೇ ಕನ್ನಡದಲ್ಲಿ ಹರಡಲು ಯತ್ನಿಸಿದ್ದಾರೆ. ಅವರ ಕಾವ್ಯರಚನೆಯಲ್ಲಿ, ಧೋರಣೆಯಲ್ಲಿ, ದೃಷ್ಟಿಯಲ್ಲಿ ವೈವಿಧ್ಯವಿದೆ. ಅವರು ಕನ್ನಡ ಕಾವ್ಯಗಳಿಗೆ ಹೊಸ ಕಲ್ಪನೆಗಳನ್ನೂ, ಹೊಸ ದೃಷ್ಟಿಯನ್ನೂ ಕೊಟ್ಟಿದ್ದಾರೆ. ದುರಂತನಾಯಕರನ್ನು ಚಿತ್ರಿಸಿರುವ ಸುಂದರ ಕಲಾಕೃತಿಗಳನ್ನು ರಚಿಸಿದ್ದಾರೆ. ಹೀಗೆ ಇವರು ಕನ್ನಡ ಕಾವ್ಯದೇವಿಯನ್ನು ಬಹು ವಿಧವಾಗಿ ಸಿಂಗರಿಸಲು ಹೆಣಗಾಡಿ ಕೃತಕೃತ್ಯರಾಗಿದ್ದಾರೆ. ಇವರಿಗೆ ಅನುಕೂಲವಾಗುವಂತೆ ಇವರ

ಕಾವ್ಯ ರಚನೆಗೆ ಕನ್ನಡ ಅರಸರ ಪೋಷಣೆಯೂ ಸಾಕಷ್ಟು ದೊರೆಯಿತು. ಅರಸರ ಪೋಷಣೆ ದೊರೆಯದಿದ್ದಾಗಲೂ ಕೂಡ, ಜೈನರು ಕನ್ನಡದ ಪ್ರೇಮದಿಂದ ಮುಂಬಂದು ಸಾಹಿತ್ಯಸೇವೆಗೆಯ್ದಿದ್ದಾರೆ. ಪೋಷಣೆ ಕೊಟ್ಟ ಅರಸರೆಲ್ಲರೂ ಜೈನರಾಗಿರಲಿಲ್ಲ. ಆದರೆ ಅರಸರು ಜೈನರಿರಲಿ, ಇರದೆ ಇರಲಿ, ಅವರು ಕನ್ನಡ ಭಾಷೆಯ ಬೆಳವಣಿಗೆಗೆ ಅನುವು ಮಾಡಿಕೊಟ್ಟಿದ್ದಾರೆ. ಜೈನ ಕವಿಗಳು ಆ ಅವಕಾಶವನ್ನು ಸರಿಯಾಗಿ ಉಪಯೋಗಿಸಿಕೊಂಡು ಕನ್ನಡದ ಬೆಳಸನ್ನು ಹೆಚ್ಚಿಸಿದ್ದಾರೆ. ನಾವು ಅವರನ್ನು ಜೈನ ಕವಿಗಳೆಂದು ಕರೆಯುವುದು ಒಂದು ವಿವರಣೆಯ ಅನುಕೂಲಕ್ಕಾಗಿ ಮಾತ್ರ. ಏಕೆಂದರೆ ಅವರೆಲ್ಲರೂ ಕನ್ನಡ ಕವಿಗಳೇ ಆಗಿದ್ದರು. ಪ್ರಾಚೀನ ಕನ್ನಡ ಸಾಹಿತ್ಯದ ಒಂದು ದೃಷ್ಟಿಯ ವಿಭಜನೆಯು ಮಾತ್ರ ಈ ಪ್ರಬಂಧದಲ್ಲಿದೆ.

# ಮಹಾದೇವಿಯಕ್ಕನ ವಚನಾಮೃತ

ಕನ್ನಡನಾಡಿನ ಹೆಸರನ್ನು ದೇದೀಪ್ಯಮಾನವಾಗಿ ಬೆಳಗಬಲ್ಲ ವ್ಯಕ್ತಿಗಳಲ್ಲಿ ಮಹಾದೇವಿಯಕ್ಕನ ಹೆಸರು ಅಗ್ರಸ್ಥಾನದಲ್ಲಿ ಬರುತ್ತದೆ. ಈ ವೀರ ವಿರಕ್ತೆಯ ಜೀವನಚರಿತೆಯು ಮಹಿಳಾ ಪ್ರಪಂಚಕ್ಕೊಂದು ಆದರ್ಶ, ಭಾರತೀಯರಿಗೆ ಭೂಷಣಪ್ರಾಯ, ಕನ್ನಡಿಗರಿಗೆ ಅಭಿಮಾನಪ್ರದ, ಪುರುಷರನ್ನು ಬೆರಗುಗೊಳಿಸುವಂತಹದು, ಹಿರಿಯರನ್ನು ಮೆಚ್ಚಿಸುವದು, ಕಿರಿಯರನ್ನು ಹುರಿದುಂಬಿಸುವುದು. ಏರುಂಜವ್ವನದಲ್ಲಿ ಅರಸನ ಮೋಹದ ಮಡದಿಯಾಗಿ ಸುಖಸಾಮ್ರಾಜ್ಯದ ರಾಣಿಯಾಗಬಹುದಾಗಿದ್ದ ಅವಕಾಶವನ್ನು ಒದ್ದೊಗೆದು, ವೀರ ವಿರಕ್ತವ್ರತವನ್ನು ಕೈಕೊಳ್ಳುವ ದೃಢಮನಸ್ಸಿನ ನಿಶ್ಚಯವು ಯಾರನ್ನಾದರೂ ಬೆರಗುಗೊಳಿಸದೆ ಇರದು. ಅರಸನ ಮೋಹದ ಮಡದಿಯಾಗುವ ಭಾಗ್ಯವನ್ನು ಅಲ್ಲಗಳೆದ ಅವಳು ವೀರಶೈವ ಅಭಿಮಾನದ ನಿಧಿಯಾಗಿ, ಕನ್ನಡಿಗರ ಮೋಹದ ಕಣಿಯಾಗಿ, ಭಾರತದ ಭೂಷಣವಾಗಿ ಬೆಳಗಿದಳು. ಇಂಥ ಮಹಾನುಭಾವಳ ಕಡೆಗೆ ಕನ್ನಡಿಗರ ಲಕ್ಷವು ಇತ್ತೀಚಿಗೆ ಹೆಚ್ಚಾಗಿ ಆಕರ್ಷಿಸಲ್ಪಟ್ಟಿದ್ದು ಶುಭಚಿನ್ಹವೇ ಎಂದು ಹೇಳಬೇಕು. ಅಕ್ಕನ ಗುಣಗಾನವು ಬರಿ ಹಬ್ಬಹುಣ್ಣಿವೆಯ ಮಾತಾಗದೆ, ಕೇವಲ ಔಪಚಾರಿಕ ಉತ್ಸವದ ಪ್ರಸಂಗವಾಗದೆ, ಉಚ್ಚಜೀವನದ ಕೈದೀವಟಿಗೆಯೂ ಮಹಿಲಾ ಪ್ರಪಂಚದ ಆದರ್ಶಸಾಧನವೂ ಆಗಬೇಕಾದರೆ ಅಕ್ಕನ ಜೀವನ ಚರಿತೆಯ ತಿರುಳನ್ನು ಅವಳ ಬೋಧೆಯ ಬೆಳಗನ್ನು ಅರಿಯಬೇಕಾದುದು ಅತ್ಯವಶ್ಯ. ಅಂತೆಯೇ ಈ ಬರೆಹದಲ್ಲಿ ಮಹಾದೇವಿಯಕ್ಕನ ವಚನಾಮೃತದ ಪರಿಚಯವನ್ನು ಮಾಡಲು ಪ್ರಯತ್ನಿಸಿರುವೆನು. ಅವಳ ಜೀವನ ಮಾರ್ಗವು ಅವಳನ್ನು ವೀರ ವಿರಕ್ತೆಯನ್ನಾಗಿ ಮಾಡಿದೆ. ಅವಳ ವಚನಗಳು ಅವಳನ್ನು ಉಜ್ವಲ ಸಾಹಿತಿಯ ಶ್ರೇಣಿಗೆ ಒಯ್ದಿವೆ. ಅವಳ ಬೋಧನೆಯ ರೀತಿಯು ಅವಳನ್ನು ಶ್ರೇಷ್ಠ ತತ್ತ್ವವೇತ್ತೃಳನ್ನಾಗಿ ಮಾಡಿದೆ. ಹನ್ನೆರಡನೆಯ ಶತಮಾನದ ಕ್ರಾಂತಿಯೆಂಬ ಮಂಥನದಿಂದ ಉದ್ಭವಿಸಿದ ಅನೇಕ ರತ್ನಗಳಲ್ಲಿ ಅಕ್ಕನು ಶಿರೋಮಣಿ. ಅಕ್ಕನವರ ಸಲು

ವಾಗಿ ದೊರೆಯುವ ಹಳೆಯ ಸಾಹಿತ್ಯ ಅಲ್ಪಸ್ವಲ್ಪವಿದೆ. ಅವುಗಳಲ್ಲಿ ಚಾಮರಸನ ಪ್ರಭು ಲಿಂಗಲೀಲೆ, ಹರಿಹರದೇವನ ಮಹಾದೇವಿಯಕ್ಕನ ರಗಳೆ ಇವೆರಡು ಈಗಲೇ ಪ್ರಸಿದ್ಧ ವಾಗಿವೆ. ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣವು ಇನ್ನೂ ಬೆಳಕನ್ನು ಕಂಡಿಲ್ಲ. ರಾಚಯ್ಯನೆಂಬವನ ಮಹಾದೇವಿಯಕ್ಕನ ಸಾಂಗತ್ಯದ ಕೆಲವು ಭಾಗ ಮಾತ್ರ ಪತ್ರಿಕೆಯಲ್ಲಿ ಮುದ್ರಿತವಾಗಿದೆ. ಹೊಸ ಸಾಹಿತ್ಯವು ಹೊರಡಲು ಇದೀಗ ಪ್ರಾರಂಭವಾಗಿದೆ. ನನ್ನೀ ಲೇಖನವು ಅಕ್ಕನವರ ತತ್ತ್ವಬೋಧನೆಯ ಪರಿಚಯ ಮಾಡಿಕೊಡುವ ಅಳಲಿ ಪ್ರಯತ್ನ ಮಾತ್ರ. ಮಹಾದೇವಿಯಕ್ಕನ ವಚನಗಳನ್ನು ಒಂದು ಪದ್ಧತಿಯಲ್ಲಿ ಆರಿಸಿ ವಿಭಾಗಿಸಿ ಅವುಗಳ ಸಾರವನ್ನು ಇಲ್ಲಿ ಕೊಡುತ್ತೇನೆ. ಅಕ್ಕನವರ ವ್ಯಕ್ತಿವೈಶಿಷ್ಟ್ಯವು ಅವಳು ಪ್ರಾಪಂಚಿಕ ಬಂಧನವನ್ನು ಹರಿದೊಗೆದು ದರಲ್ಲಿದೆ. ಅಕ್ಕನು ಸಂಸಾರವು ಹೇಯವೆಂದು ಹೀಗಳಿಸಿದ್ದಾಳೆ. ಅಂತೆಯೆ ಸಂಸಾರ ಹೇಯಸ್ಥಲದಿಂದ ಅವಳ ವಚನಗಳ ಸಾರವನ್ನು ಆರಂಭಿಸುತ್ತೇನೆ.

ಮಾನವನು ಸಂಸಾರದಲ್ಲಿ ಮನಬಂದುದ ಬಯಸಿ ಬೇವುತ್ತಿರುವನು. ತೆರ ಣಿಯ ಹುಳವು ಎಣ್ಣೆಯ ಜಿಗಟಿನಲ್ಲಿದ್ದುಕೊಂಡು ತನ್ನ ನೂಲಿನಿಂದಲೇ ಸುತ್ತಲ್ಪಟ್ಟು ಸಾಯುವಂತೆ ಸಂಸಾರದ ರೀತಿ ಇದೆ. ಇಂತಹ ಮನದ ದುರಾಶೆಯನ್ನು ಬಿಡಿಸಿ ಸನ್ಮಾರ್ಗವನ್ನು ತೋರಿಸುವವನು ಚೆನ್ನಮಲ್ಲಿಕಾರ್ಜುನನು. ( ಈ ಅಂಕಿತವನ್ನು ವ್ಯತ್ಯಾಸಮಾಡಿಕೊಂಡರೆ ಈ ತತ್ತ್ವಗಳು ಎಲ್ಲ ಪಂಥದವರಿಗೂ ಅನ್ವಯಿಸುವವು. ನಮ್ಮ ಶಿವಶರಣರ ತತ್ತ್ವಬೋಧೆಯು ವಿಶ್ವಧರ್ಮದ ತಳಹದಿಯಂತಿದೆ. ) ಸಂಸಾರವು ಬೆನ್ನಬಿಡದೆ ಕಾಡುತ್ತದೆ. ಅದರ ತೊಂದರೆಯಿಂದ ತಪ್ಪಿಸಿಕೊಳ್ಳಲಿಕ್ಕೆ ಏಸೊಂದೂ ಮಾರ್ಗವು ತೋಚುವುದಿಲ್ಲ. ಬೆಂದ ಒಡಲ ಸಂತೈಸಿಕೊಳ್ಳಲು ಮಾನ ವನಿಗೆ ಶಕ್ಯವಿಲ್ಲ. ಆದುದರಿಂದ ಚೆನ್ನಮಲ್ಲಿಕಾರ್ಜುನನ ಮೊರೆ ಹೋಗಲೇಬೇಕು. ಕಾಯುವದಾಗಲಿ ಕೊಲ್ಲುವದಾಗಲಿ ಆತನ ಧರ್ಮ.

ಸಂಸಾರವು ಒಂದು ಶತ್ರುವಿನಂತೆ ಇದೆ. ವಂಶಪರಂಪರಾಗತವಾಗಿ ಹುಡುಕಿ ಕೊಂಡು ಬೆನ್ನುಹತ್ತಿ ಬರುತ್ತದೆ. ಬೇಟೆಗಾರನು ಮೃಗವನ್ನು ಬೆನ್ನಟ್ಟುವಂತೆ ಮಾನವನ ಬೆಂಬತ್ತಿ ಬಾಧೆ ಕೊಡುತ್ತದೆ; ಕೊಲ್ಲುತ್ತದೆ. ಕಾರಣ ದೇವನ ಮೊರೆ ಹೋಗಲೇಬೇಕು.

ಸಂಸಾರವು ಮಾಯದ ಮದ, ಕಾಯದ ಕತ್ತಲೆ, ಜೀವದ ಜಂಜಡ. ಆ ಮದ ವನ್ನು ಮುರಿದು, ಕತ್ತಲೆಯನ್ನು ಕಳೆದು, ಜಂಜಡವ ಬಿಡಿಸಿ ಸುತ್ತಿದ ಪ್ರಪಂಚವನ್ನು ಬಿಡಿಸುವ ಧರ್ಮ ಚೆನ್ನಮಲ್ಲಿಕಾರ್ಜುನನದು.

ಮಾನವನು ಸಂಸಾರವನ್ನು ಮೆಚ್ಚುವುದು ಹಾಸ್ಯಾಸ್ಪದವಾಗಿದೆ. ಹೊನ್ನೆ

ನ್ನದು ಮಣ್ಣೆನ್ನದು ಹೆಣ್ಣೆನ್ನದು ಎಂದು ತಳಮಳಿಸುವ ಸ್ಥಿತಿಯು ಅಗಸನು ಊರ ವರ ಸೀರೆಗೆ ತಡಬಡಗೊಂಡಂತಿದೆ. ಯಾರ ಯಾರವೋ ಸೀರೆಗಳು ತನ್ನವೆಂದು ಹಂಬಲಿಸುವ ಅಗಸನ ಹುಚ್ಚುತನವನ್ನೇ ಸಂಸಾರವು ಸ್ಥಿರವೆಂದು ನೆಚ್ಚಿದ ಮಾನವನು ಅನುಸರಿಸುತ್ತಾನೆ. ಅಂತಹನು ಈ ಭ್ರಮೆಯಿಂದ ದೇವರನ್ನು ಅರಿಯದೇ ಮರೆತು ಕೆಟ್ಟು ಹೋಗುತ್ತಾನೆ. ಪಾಪ ಪುಣ್ಯಗಳನ್ನು ಅರಿಯುವದಕ್ಕೆ ಮೊದಲು ಅನೇಕ ಭವಂಗಳಲಿ ಮಾನವನು ಬರುವನೆಂದು ಅಕ್ಕನು ಹೇಳುತ್ತಾಳೆ. ಒಂದಲ್ಲ ಎರಡಲ್ಲ ಎಂಬತ್ತುನಾಲ್ಕು ಲಕ್ಷ ಯೋನಿಗಳಲ್ಲಿ ತಾನು ಜನಿಸಿದಳೆಂದೂ ಆ ಮೇಲೆ ಮಾತ್ರ ಚೆನ್ನಮಲ್ಲಿಕಾರ್ಜುನನನ್ನು ನಂಬಿ ಶರಣು ಹೊಕ್ಕಳೆಂದೂ ಹೇಳುತ್ತಾಳೆ. ದೇವರನ್ನು ಮೊರೆಹೊಕ್ಕು ಬಂಧನ ಬಿಡಿಸುವಂತೆ ಆತನನ್ನು ಬೇಡುವದೊಂದೇ ಮಾರ್ಗ ಮಾನವನಿಗೆ. ಮಾಯದ ಸಂಸಾರದಲ್ಲಿ ಸಿಲುಕಿದ ಮೇಲೆ ಅದನ್ನು ಭೇದಿಸಲರಿಯನು ಮಾನವನು. ದೇವನೇ ಆ ಮಾಯೆಯ ಮುಸುಕನ್ನು ತೆಗೆಯಬಲ್ಲನು.

ಅಕ್ಕನಿಗೆ ದೇಹದ ಅಭಿಮಾನವು ತಿಲಮಾತ್ರವೂ ಇಲ್ಲ. ಅದನ್ನು ಅವಳು ಒಳ್ಳೇ ಹೇಯವಾದ ರೀತಿಯಲ್ಲಿ ಕಂಡಿದ್ದಾಳೆ; ಅಸಹ್ಯಪಟ್ಟುಕೊಂಡಿದ್ದಾಳೆ. ದೇಹವು ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುಬಿನ ತಡಿಕೆ ಇಂತೀ ಹೊಲಸಿನಿಂದ ಕೂಡಿದ ದೇಹವನ್ನು ಸುಡಲಿ. ಅಭಿಮಾನವಿಡಿದು ಕೆಡಬಾರದು. ಆದುದರಿಂದ ಚೆನ್ನಮಲ್ಲಿಕಾರ್ಜುನನನ್ನು ಅರಿಯುವುದು ಯೋಗ್ಯವಾದ ರೀತಿ.

ಸಂಸಾರದಲ್ಲಿ ಮಾಯೆಯು ಹಲವು ವಿಧವಾಗಿದೆ. ಅದು ಕಾಯಕ್ಕೆ ನೆಳಲಾಗಿ, ಪ್ರಾಣಕ್ಕೆ ಮನವಾಗಿ, ಮನಕ್ಕೆ ನೆನಹಾಗಿ, ನೆನಹಿಗೆ ಅರಿವಾಗಿ ಕಾಡುವುದು. ಜಗದ ಜಂಗುಳಿಗೆ ಬೆಂಗೋಲನ್ನೇ ಎತ್ತಿರುವುದು. ದೇವನೊಡ್ಡಿದ ಈ ಮಾಯೆಯನ್ನು ಯಾರು ತಾನೆ ಗೆಲ್ಲಬಲ್ಲರು? ಮಾಯೆಯು ಪುರುಷನ ಮುಂದೆ ಸ್ತ್ರೀಯೆಂಬ ಅಭಿಮಾನವಾಗಿ ಸ್ತ್ರೀಯ ಮುಂದೆ ಪುರುಷನೆಂಬ ಅಭಿಮಾನವಾಗಿ ಕಾಡುವುದು. ಶರಣರ ಚರಿತ್ರವು ಲೋಕವೆಂಬ ಮಾಯೆಗೆ ಮರುಳಾಗಿ ತೋರುವುದು. ಆದರೆ ಚೆನ್ನಮಲ್ಲಿಕಾರ್ಜುನನು ಒಲಿದರೆ ಮಾಯೆ ಇಲ್ಲ, ಮರಹು ಇಲ್ಲ, ಅಭಿಮಾನವು ಇಲ್ಲ, ಎಲ್ಲವೂ ತೊಲಗುವುವು. ಮಾಯೆಯು ಬಿಟ್ಟೆನೆಂದರೂ ಬಿಡದು. ಬೆಂಬತ್ತಿ ಕಾಡುವುದು, ಯೋಗಿಗೆ ಯೋಗಿಣಿಯಾಗಿ, ಸನ್ಯಾಸಿಗೆ ಸನ್ಯಾಸಿನಿಯಾಗಿ, ಯತಿಗೆ ಪಿನಾಕಿಯಾಗಿ ಕಾಡುವುದು. ಆದರೆ ಚನ್ನಮಲ್ಲಿಕಾರ್ಜುನ ದೇವನ ಬಲವಿರುವದರಿಂದ ಅಕ್ಕನು ಮಾಯೆಗೆ ಅಂಜುವದಿಲ್ಲ. ಮಾಯೆಯು ಅಸಮಾನ್ಯವಾದುದು. ಈ ಮಾಯೆಯು ಹರಿಯ ನುಂಗಿತ್ತು, ಬ್ರಹ್ಮನ ನುಂಗಿತ್ತು, ಇಂದ್ರನ ನುಂಗಿತ್ತು, ಚಂದ್ರನ ನುಂಗಿತ್ತು, ಬಲ್ಲೆನೆಂಬ ಬಂಟರ ನುಂಗಿತ್ತು, ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು.

ಸಂಸಾರವೆಂಬುದು ಸಾಯುವ ಪ್ರಪಂಚದ ಪುತ್ಥಳಿ, ಅದನ್ನು ತೆಗೆದುಕೊಂಡು ಏನು ಮಾಡುವುದು? ಮಾಯೆಯ ಸಂಬಂಧಿಯಾದ ಮರಿಭಾಂಡ ಆತುರದ ಭವನಿವಾಸ. ಅದರಿಂದೇನಾಗಬೇಕಾಗಿದೆ? ಬೆರಳಿನಿಂದ ತಾಳೇ ಹಣ್ಣನ್ನು ಹಿಸುಕಬಹುದಾದರೂ ಅದನ್ನು ತಿನ್ನಬಹುದೆ?

ಸಂಸಾರವು ಹೇಯವಾದುದು, ಕ್ಷಣಿಕವಾದುದು, ದುಃಖಮಯವಾದುದು ಎಂಬುದನ್ನರಿತ ಅಕ್ಕನ ಮನವು ಚೆನ್ನಮಲ್ಲಿಕಾರ್ಜುನನ ಅಡಿಗಳಿಗೆ ಅಭಿಮುಖವಾಯಿತು. ಸಂಸಾರವು ಕ್ಷಣಿಕವೆಂದರಿತ ಮೇಲೆ ನಿತ್ಯವೂ ಸುಖಪ್ರದವೂ ಅಪೇಕ್ಷಣೀಯವೂ ಆದ ವಸ್ತುವನ್ನು ಅರಿಯಬೇಕಾಗುವುದು. ಅಂತಹ ವಸ್ತುವೆಂದರೆ ದೇವರು. ಅಕ್ಕನ ಇಷ್ಟದೇವತೆ ಚೆನ್ನಮಲ್ಲಿಕಾರ್ಜುನನು. ಪರಮಾತ್ಮನ ಸ್ವರೂಪದ ಜ್ಞಾನವು ಮೋಕ್ಷ ಸಾಧನೆಯಲ್ಲಿಯ ಮೆಟ್ಟಲು. ಆದುದರಿಂದ ಇನ್ನು ಪರಮಾತ್ಮನ ಸ್ವರೂಪದ ವಿಷಯವಾಗಿರುವ ವಚನಗಳನ್ನು ಅರಿಯುವಾ.

ಸರ್ವಸಾಧಾರಣವಾಗಿ ವಚನಕಾರರೆಲ್ಲ ದೇವರ ಸ್ವರೂಪವನ್ನು ಒಂದೇ ರೀತಿಯಾಗಿ ವರ್ಣಿಸುತ್ತಾರೆ. ದೇವರ ಅವ್ಯಕ್ತ ಸ್ವರೂಪವನ್ನು ಸುಂದರವಾದ ಉಪಮೆಯಲ್ಲಿ ಬಸವಣ್ಣನವರು "ಶಶಿಯೊಳಗಿನ ರುಚಿಯಂತೆ" "ಕನ್ನೆಯ ಸ್ನೇಹದಂತೆ" ಎಂದು ಹೇಳಿದ್ದಾರೆ. ಅಕ್ಕನು ಹೇಳಿದುದು ಹೀಗೆ: ಚೆನ್ನಮಲ್ಲಿಕಾರ್ಜುನನ ನಿಲವನ್ನು ಅರಿಯುವುದು ಸುಲಭವಲ್ಲ. ಅವನು ಭಾವದ ಮರೆಯ ಬ್ರಹ್ಮನಾಗಿದ್ದಾನೆ. ಆತನ ಸ್ವರೂಪವು ನೆಲದಲ್ಲಿ ಅಡಗಿದ ದ್ರವ್ಯದಂತೆ, ಹಣ್ಣಿನೊಳಗಿನ ರುಚಿಯಂತೆ, ಶಿಲೆಯಲ್ಲಿ ಅಡಗಿರುವ ಸುವರ್ಣದಂತೆ, ಚಿನ್ನದೊಳಗಿನ ಬಣ್ಣದಂತೆ ಇವೆ. ದೇವನ ಸ್ವರೂಪವನ್ನು ಹೆಚ್ಚು ಅರ್ಥವತ್ತಾಗಿ ಹೇಳಬೇಕಾದರೆ ಅಕ್ಕನವರು "ತಿಲದ ಮರೆಯ ತೈಲದಂತೆ" ಎಂದು ಹೇಳುತ್ತಾರೆ. ಎಳ್ಳಿನಲ್ಲಿ ಎಣ್ಣೆ ಇದೆ. ಆದರೆ ಅದು ವ್ಯಕ್ತವಾಗಿಲ್ಲ. ಹೊರಗಣ್ಣಿಗೆ ಕಾಣುವದಿಲ್ಲವೆಂದು ಅದರ ಅಸ್ತಿತ್ವವನ್ನು ಅಲ್ಲಗಳೆಯುವದಾಗುವದಿಲ್ಲ. ಬಹುಶಃ ದೇವರ ಸ್ವರೂಪವನ್ನು ಇದಕ್ಕೂ ಸುಂದರವಾಗಿ ಅರ್ಥವತ್ತಾಗಿ ಮತ್ತೆ ಯಾರೂ ಹೇಳಿದಂತೆ ಕಾಣುವದಿಲ್ಲ. ಅಕ್ಕನವರ ವಿಚಾರಗಳ ಗಾಂಭೀರ್ಯವನ್ನು ವಚನ ಸೌರಭವನ್ನು ನಾವು ಕಾಣುವುದು ಇಂತಹ ಉಪಮೆಯುಗಳಿಂದಲೇ. ಅವರು ಅವುಗಳಿಂದ ಉದಾತ್ತ ಕವಿಗಳ ಮಟ್ಟಕ್ಕೆ ಬರುತ್ತಾರೆ. ಉಜ್ವಲ ಜೀವನ, ಗಂಭೀರ ವಿಚಾರ, ಬೆಡಗಿನ ನುಡಿ, ಸಾಮ್ರಾಜ್ಞಿಯ ಸುಖವನ್ನು ನಿರಾಕರಿಸುವ ವಿರಕ್ತವೃತ್ತಿ ಇವುಗಳ ಮಾದರಿಯನ್ನು ಅಕ್ಕನವರಲ್ಲಿ ಕಾಣಬಹುದು. High thinking, Simple living ಎಂಬ ಮಾತಿಗೆ ಅಕ್ಕನವರಿಗಿಂತ ಉತ್ತಮ ನಿದರ್ಶನ ದೊರೆಯುವುದು ಕಠಿಣವೇ ಸರಿ. ಇರಲಿ.

ಚೆನ್ನಮಲ್ಲಿಕಾರ್ಜುನನು ಹಲವು ಜಗಂಗಳಲ್ಲಿ ಕೂಡಿಕೊಂಡಿದ್ದರೂ ಆತನ ಪರಿಯು ಬೇರೆಯೇ ಇದೆ. ಒಂದೇ ನೀರಿನಿಂದ ಪೋಷಣೆ ಪಡೆದ ಲಿಂಬು, ಮಾವು, ಮಾದಲ, ಕಬ್ಬು, ಬಾಳೆಗಳು ವಿವಿಧ ರುಚಿಯನ್ನು ಪಡೆಯುತ್ತವೆ. ಅಂತೆಯೇ ದೇವನು ಕೂಡ ಬೇರೆ ಬೇರೆ ದ್ರವ್ಯಂಗಳೊಡನೆ ಕೂಡಿದಾಗ ಬೇರೆ ಬೇರೆಯಾಗಿ ಕಂಡರೂ ತನ್ನದೊಂದು ರೀತಿಯನ್ನು ಬೇರೆಯಾಗಿ ಇಟ್ಟುಕೊಂಡಿದ್ದಾನೆ. ಅಕ್ಕನವರ ನುಡಿಯ ಬೆಡಗಿನಲ್ಲಿ ಹೇರಳವಾದ ಅರ್ಥವು ಅಡಕವಾಗಿದೆ. ಈ ನುಡಿಗಳು ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಬೆಲೆಯನ್ನು ತಂದು ಕೊಡುತ್ತವೆ. ವಿಶ್ವದ ವಿಚಾರ ಸರಣಿಗೆ ಕನ್ನಡ ಸಾಹಿತ್ಯವು ಯಾವ ಕಾಣಿಕೆಯನ್ನೂ ಕೊಡಲಾರದು ಎಂಬ ಇ. ಪಿ. ರಾಯಿಸ ಸಾಹೇಬರ ಅಭಿಪ್ರಾಯವನ್ನು ಅಲ್ಲಗಳೆಯಲಿಕ್ಕೆ ಅಕ್ಕನ ನುಡಿಗಳು ಸಾಕು.

ಈ ಸೃಷ್ಟಿಯನ್ನು ದೇವನು ತನ್ನ ವಿನೋದಕ್ಕಾಗಿ ಸೃಷ್ಟಿಸಿದನೆಂದು ಅಕ್ಕನು ಹೇಳುತ್ತಾಳೆ. ಆತನಿಗೆ ಜೀವನವೂ ಅಲ್ಲಿಯ ಮಾಯೆಯೂ ಒಂದು ವಿಲಾಸ-ಪ್ರಪಂಚ. ಆ ವಿಲಾಸ ಸಾಕಾದರೆ ಮಾಯೆಯ ಪರೆಯನ್ನು ತಾನೇ ಹರಿದುಹಾಕುವನು. ತನಗೆ ಬೇಕೆನಿಸುವಷ್ಟು ಕಾಲವೂ ಅದನ್ನು ನಡೆಯಿಸುವನು. ದೇವನ ಆಟದ ಆಳವನ್ನು ನಾವು ಸುಲಭವಾಗಿ ಅರಿಯಲಾರೆವು.

ಅಕ್ಕನವರು ಅದ್ವೈತ ತತ್ತ್ವವನ್ನು ಹೇಳುತ್ತಾರೆ. ಆದರೂ ಕೂಡ ಅವರ ಸಿದ್ಧಾಂತವು ವೀರಶೈವರ ವಿಶಿಷ್ಟವಾದ ತತ್ತ್ವದ ರೀತಿಯನ್ನೇ ಒಳಗೊಂಡಿದೆ.

"ಅದ್ವೈತದಿಂದ ತನ್ನ ತಾನರಿದು ತಾನಾದರೆ ಚೆನ್ನಮಲ್ಲಿಕಾರ್ಜುನ ಲಿಂಗ ತಾನೇ ಬೇರಿಲ್ಲ," ಎಂಬ ಕಿರಿದು ನುಡಿಯು ಅರ್ಥಭಾರದಿಂದ ಬಗ್ಗಿ ಬಳಕುತ್ತಿದೆ. ವಚನಕಾರರ ತತ್ತ್ವವನ್ನು ಸುಲಭವಾಗಿ ಸ್ಪಷ್ಟವಾಗಿ ನಿರೂಪಿಸುತ್ತದೆ. ಅಕ್ಕನವರು ಇನ್ನೂ ಮುತ್ತಿನಂತಹ ಮಾತನ್ನು ಹೇಳಿದ್ದಾರೆ. "ಎಲ್ಲ ಎಲ್ಲವನರಿದು ಫಲವೇನಯ್ಯ? ತನ್ನ ತಾನರಿಯಬೇಕಲ್ಲದೆ, ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೇ"

ಬಣ್ಣವು ಚಿನ್ನದೊಳಗೆ ಇದೆ. ಅದರಿಂದ ಅದು ಬೇರೆಯಲ್ಲ. ಅಂತೆಯೇ ಪರಮಾತ್ಮನ ಸ್ವರೂಪ ಚೆನ್ನಮಲ್ಲಿಕಾರ್ಜುನನು, ಎನ್ನೊಳಗೆ ಇದ್ದರೂ ಮೈದೋರುವದಿಲ್ಲವೆಂದು ಅಕ್ಕನವರು ಅದ್ವೈತವನ್ನು ಹೇಳುತ್ತಾರೆ. ಹಾಲು ತುಪ್ಪವ ನುಂಗಿ ಬೇರೆಯಾಗಬಲ್ಲದೇ? ಸೂರ್ಯಕಾಂತಿಯಲ್ಲಿದ್ದ ಅಗ್ನಿಯನ್ನು ಯಾರು ಭೇದಿಸಬಲ್ಲರು. ಅಪಾರ ಮಹಿಮನಾದ ಚೆನ್ನಮಲ್ಲಿಕಾರ್ಜುನನು ನನ್ನಲ್ಲಿ ಅಡಗಿದ್ದ ರೀತಿಯನ್ನು ಅರಿತು ಕಣ್ದೆರೆದೆನೆಂದು ಅಕ್ಕನು ಹೇಳುತ್ತಾಳೆ. ಅಕ್ಕನು

ಚೆನ್ನಮಲ್ಲಿಕಾರ್ಜುನನ ಒಲುಮೆಯ ಸಂಗದಲ್ಲಿದ್ದು ಸ್ವಂಯಂಲಿಂಗಿಯಾದಳು. ಇದುವೇ ಅವಳ ತತ್ತ್ವದ ತಿರುಳು.

ಇನ್ನು ದೇವರ ಸ್ವರೂಪವಿಷಯವಾಗಿ ಅಕ್ಕನವರ ವಿಚಾರಗಳನ್ನು ನೋಡುವ. ಸರ್ವಸಾಮಾನ್ಯವಾಗಿ ದೇವನನ್ನು ಅಕ್ಕನು ನಿರಾಕಾರವೆಂದೇ ಬಣ್ಣಿಸಿದ್ದಾಳೆ. ಆದರೆ ಇಷ್ಟದೇವತೆ ಚೆನ್ನಮಲ್ಲಿಕಾರ್ಜುನನನ್ನು ಬಣ್ಣಿಸುವಾಗ ಸತಿ ಪತಿ ಭಾವವನ್ನು ತಳೆದು ನಲ್ಮೆಯಿಂದ ದೇವರ ಸಾಕಾರ ರೂಪವನ್ನು ಹೇಳುತ್ತಾಳೆ. ಅದು ಸಹಜವೂ ಆಗಿದೆ. ಅನಾದ್ಯನಂತ ದೇವತ್ವದ ಕಲ್ಪನೆಯು ನಿರಾಕಾರವಾಗಿಯೇ ಉಳಿಯ ಬೇಕು. ಆದರೆ ಇಷ್ಟ ದೇವತೆಯ ಪ್ರಶ್ನೆ ಬಂದಾಗ ಮನಸ್ಸಿನ ಸಮಾಧಾನಕ್ಕಾಗಿ ಶ್ರದ್ಧೆಯನ್ನು ಹೆಚ್ಚಿಸಿ ತಲ್ಲೀನತೆಯನ್ನು ಪಡೆಯುವದಕ್ಕಾಗಿ ಒಂದು ರೂಪು ಬೇಕಾ ಗುತ್ತದೆ. ಈ ಸಮಂಜಸ ಕಲ್ಪನೆಯನ್ನು ನಾವು ಅಕ್ಕನವರ ನುಡಿಗಳಲ್ಲಿ ಕಾಣ ಬಹುದು. "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆನು" ಎಂದು ಅಕ್ಕನು ಹೇಳುತ್ತಾಳೆ. ಅವಳ ದೇವನಿಗೆ ಎಡೆಯಿಲ್ಲ, ಕಡೆಯಿಲ್ಲ, ತೆರಹಿಲ್ಲ, ಕುರುಹೂ ಇಲ್ಲ. ಅವನಿಗೆ ಭಯವಿಲ್ಲ, ಭವವಿಲ್ಲ, ಕುಲಸೀಮೆ ಇಲ್ಲ. ಅವನಿಗೆ ಬ್ರಡಲು ಇಲ್ಲ, ಮಡಿ ಇಲ್ಲ, ಕಡೆ ಇಲ್ಲ, ಎಂದು ಮುಂತಾಗಿ ಬಣ್ಣಿಸುತ್ತಾಳೆ. ಇಂತಹ ಅಕ್ಕನವರ ವಚನಗಳಲ್ಲಿ ಉದಾತ್ತ ಭಾವ, ಉಜ್ವಲ ಭಾಷೆಗಳ ಸಂಗಮವು ಕಂಡು ಬರುತ್ತದೆ. ಅಂತೆಯೇ ಅಕ್ಕನವರ ವಚನಗಳು ಮನೋಹರವಾಗಿ ಕಾಣುತ್ತವೆ. ಶಿವನು ಆದಿ ಅನಾದಿ ಎಂಬೆರಡೂ ಇಲ್ಲದ ನಿರವಯವಾಗಿಹನು. ಅವನು ವೇದಾಂಗ ಳಿಗೆ ಅಭೇದ್ಯನು, ಶಾಸ್ತ್ರಗಳಿಗೆ ಅಸಾಧ್ಯನು, ಪುರಾಣಕ್ಕೆ ಅಗಮ್ಯನು, ಆಗಮಕ್ಕೆ ಅಗೋಚರನು, ತರ್ಕಕ್ಕೆ ಅತರ್ಕನು, ವಾಙ್ಮನಕ್ಕೆ ಅತೀತನು ಇಂತಹನನ್ನು ಕೆಲರು ಸಕಲನೆಂಬರು, ಕೆಲರು ನಿಷ್ಕಲನೆಂಬರು, ಕೆಲರು ಸೂಕ್ಷ್ಮನೆಂಬುದಾಗಿ ಹೇಳುವರು. ಈ ಬಗೆಯ ಭಾವದಿಂದ ಹರಿ,ಬ್ರಹ್ಮ ,ಇಂದ್ರ,ರವಿ,ಕಾಲ,ಕಾಮ,ದಕ್ಷ ಇವರೊಳಗಿನ ಸಮಸ್ತ ದೇವ ದಾನವರೆಲ್ಲರೂ ಕಾಣಲರಿಯದೆ ಅಜ್ಞಾನದಿಂದ ಭವಭಾಗಿಗಳಾದರು.

ಈ ಪರಿಯಲ್ಲಿ ಭವಭಾಗಿಗಳಾಗಿ ಬಯಲಾಗಿ ಹೋಗಬಾರದೆಂದು ನಮ್ಮ ಬಸವಣ್ಣನು ಜಗದ್ಹಿತಾರ್ಥವಾಗಿ ಮರ್ತ್ಯಕ್ಕೆ ಬಂದು ವೀರಶೈವ ಮಾರ್ಗವನ್ನರಿಪು ವುದಕ್ಕೆ ಚರಿಸಿದನು, ಎಂದು ಅಕ್ಕನು ತನ್ನ ವಚನಗಳಲ್ಲಿ ಹೇಳಿದ್ದಾಳೆ. ಈ ಮಾತು ಚರಿತ್ರ ದೃಷ್ಟಿಯಿಂದಲೂ ಮಹತ್ವದ್ದಾಗಿದೆ.

ಅಕ್ಕನ ದೇವನು ಸಾಕಾರನಾಗಿದ್ದಾನೆ. ತಾನು ಅವನ ದಿವ್ಯ ರೂಪವನ್ನು ಕಂಡೆನೆಂದು ಹೇಳುತ್ತಾಳೆ. ಅವನನ್ನು ಸುಂದರವಾಗಿ ಹೀಗೆ ವರ್ಣಿಸುತ್ತಾಳೆ: "ಹೊಳೆವ ಕೆಂಜೆಡೆಗಳ, ಮಣಿಮುಕುಟ, ಒಪ್ಪುವ ಸುಲಿಪಲ್ಲ, ನಗೆಮೊಗದ

ಕಂಗಳ ಕಾಂತಿಯಿಂ ಈರೇಳು ಭುವನಂಗಳಂ ಬೆಳಗುವ ದಿವ್ಯ ಸ್ವರೂಪನು" ಇಂತಹ ನುಡಿಗಳ ಛಾಯೆಯನ್ನು ಕರ್ನಾಟಕ ಕವಿಚೂತವನಚೈತ್ರ ಲಕ್ಷ್ಮೀಶನಂತಹರ ಕಾವ್ಯಗಳಲ್ಲಿಯೂ ಕಾಣಬಹುದು. ಈ ವರ್ಣನೆಯು ಪಂಪ ಭಾರತದಲ್ಲಿಯ ಪಾತ್ರ ವರ್ಣನವನ್ನು ನೆನಪಿಗೆ ತಂದು ಕೊಡುತ್ತದೆ. ಅಕ್ಕನವರ ಭಾಷೆಯ ಬೆಡಗು ಮುಂದಿನ ಷಟ್ಪದಿಕಾರರಿಗೆ ಮಾರ್ಗ ತೋರಿದೆ.

ಅಕ್ಕನು ಮೊದಲು ಸಂಸಾರವನ್ನು ಹೇಯವೆಂದು ಹೀಗಳಿಸಿ ಪರಮಾತ್ಮನ ನಿಜಸ್ವರೂಪವನ್ನು ಅರಿತು,ಆತನ ಸಾನ್ನಿಧ್ಯವನ್ನು ಪಡೆಯುವ ವೀರಶೈವ ಮಾರ್ಗ ವನ್ನು ಬೋಧಿಸುತ್ತಾಳೆ. ಮೊದಲಿನ ಎರಡು ವಿಷಯಗಳನ್ನು ಸಂಗ್ರಹವಾಗಿ ಬರೆದಿದ್ದೇನೆ. ಅಕ್ಕನವರ ವಚನಾಮೃತವು ಕೇವಲ ವೀರಶೈವರಿಗೆ ಸಂಬಂಧ ಪಟ್ಟುದಲ್ಲ. ಎಲ್ಲರಿಗೂ ಅನ್ವಯಿಸಬಹುದಾದ ತ್ರಿಕಾಲಾಬಾಧಿತ ತತ್ತ್ವಗಳನ್ನು ಅಕ್ಕನು ಹೇಳಿರುವವನ್ನು ನಾವಿಲ್ಲಿ ನೋಡಬಹುದು.

ಅಕ್ಕನವರು ತ್ರಿಕಾಲಾಬಾಧಿತವಾದ ಲೋಕೋಕ್ತಿಗಳಲ್ಲಿಯೂ ವಿಶೇಷ ಜಾಣ್ಮೆ ತೋರಿಸಿಪ್ಪಾರೆ. ಕೆಳಗಿನ ಕೆಲವು ಉದಾಹರಣೆಗಳನ್ನು ಅವಲೋಕಿಸಬಹುದು.

" ಊರ ಸೀರೆಗೆ ಅಗಸ ತಡಬಡಗೊಂಡಂತೆ"

" ಬೆರಳು ತಾಳೆಹಣ್ಣು ಹಿಸುಕಿದರೆ ಮೆಲಲುಂಟೇ "

" ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ "

" ಅರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತೆ, ಬರಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು "

" ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ "

" ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ಹಿಂಡ ನೆನೆವಂತೆ, ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ. "

"ಗಿರಿಯಲ್ಲದೆ ಹುಲ್ಲು ಮೊರಡೆಯಲ್ಲಾಡುವದೇ ನವಿಲು, ತಳಿತಲ್ಲದೆ ಸ್ವರಗೈಯುವದೇ ಕೋಕಿಲೆ ."

" ಚಂದನವ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೇ."

" ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು, ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿದರೇನು."

ಇತ್ಯಾದಿ ನುಡಿಗಳಲ್ಲಿಯ ಸೊಬಗು ನಮ್ಮ ಮನವನ್ನು ಮೆಚ್ಚಿಸದೆ ಇರದು. ನಾಣ್ಣುಡಿಗಳ ಸಂಗ್ರಹಕಾರರಿಗೆ ಅಕ್ಕನವರ ವಚನಗಳು ಒಳ್ಳೇ ಉಪಯುಕ್ತವಾಗ ಬಹುದು. ಕೆಲವು ನುಡಿಗಳು ಕಾವ್ಯಮಯವಾಗಿವೆ.

ತನ್ನ ತಾನರಿಯುವುದು, ಎಂಬ ಹಿರಿಯ ಸತ್ಯವನ್ನು ಅಕ್ಕನು ಬೋಧಿಸಿದ್ದಾಳೆ. ಆದರೆ ಜ್ಞಾನವೊಂದೇ ಸಾಲದು. ಮೋಕ್ಷ ಮಾರ್ಗದಲ್ಲಿ ಭಕ್ತಿ, ಕರ್ಮ, ಜ್ಞಾನ ಇವೆಲ್ಲವುಗಳಿಗೆ ಸರಿಯಾದ ಸಾಧನವನ್ನು ಕಲ್ಪಿಸಿಕೊಟ್ಟ ಶ್ರೇಯಸ್ಸು ವೀರಶೈವ ಮತಕ್ಕೆ ಇದೆ. ಅಂತೆಯೇ ವೀರಶೈವ ಮತವು ಹಿಂದಿನ ಎಲ್ಲ ಮತಗಳ ಮೇಲಿನ ಸುಧಾರಣೆ ಇದ್ದು, ಸರ್ವ ಸಮ್ಮತವಾಗಬಹುದಾದ ಧರ್ಮವಾಗಿದೆ. ಈ ಧರ್ಮದಲ್ಲಿ ದ್ವೈತವಿದೆ, ಅದ್ವೈತವಿದೆ, ಸಾಕಾರ ಕಲ್ಪನೆಯುಂಟು, ನಿರಾಕಾರ ಕಲ್ಪನೆಯುಂಟು. ಭಕ್ತಿ, ಕರ್ಮ, ಜ್ಞಾನಗಳೆಲ್ಲಕ್ಕೂ ಸರಿಯಾದ ಸ್ಥಾನವಿದೆ. ಇವುಗಳನ್ನು ಅಕ್ಕನ ನುಡಿಗಳಲ್ಲಿಯೂ ಸ್ವಲ್ಪ ಕಾಣಬಹುದು.

"ಸುಜ್ಞಾನ ಸತ್ಕ್ರಿಯಾ ಸುನೀತಿ ಸುಮಾರ್ಗದಲ್ಲಿ ವರ್ತಿಸುವುದು" ಎಂದು ಅಕ್ಕನು ಹೇಳುತ್ತಾಳೆ. ಪಾರ್ಸಿ ಧರ್ಮದ ತತ್ತ್ವದ ತಿರುಳು ಇದೇ ಆಗಿದೆ. ಜೈನ ಧರ್ಮದ ರತ್ನತ್ರಯಗಳೂ ಇಲ್ಲಿ ಅಡಕವಾಗಿವೆ. ಜ್ಞಾನವಾಯಿತೆಂದು ಮನಬಂದ ಹಾಗೆ ನಡೆಯಬಾರದೆಂದು ಅಕ್ಕನು ಹೇಳುತ್ತಾಳೆ.

ಅಂದಿನ ಇಂದಿನ ಎಲ್ಲ ಮಹಾತ್ಮರೂ ಅಹಿಂಸೆಯನ್ನು ಬೋಧಿಸಿದ್ದಾರೆ. ಧರ್ಮದ ಹೆಸರಿನಿಂದ ನಡೆದ ಹಿಂಸೆಯನ್ನು ಮಹಾತ್ಮಾ ಬಸವೇಶ್ವರರು ಅರ್ಥ ಗಂಭೀರವಾದ ರೀತಿಯಲ್ಲಿ ಕರಳು ಕರಗುವಂತೆ ಹೇಳಿದ್ದಾರೆ. "ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೇ" ಎಂಬುದಾಗಿ ಅವರ ವಚನವಿದೆ. ಅಕ್ಕನವರೂ ಒಳ್ಳೇ ಮಾರ್ಮಿಕವಾಗಿ ಹಿಂಸೆಯನ್ನು ಹಳಿದಿದ್ದಾರೆ.

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳನ್ನು ಕೊಂದು ನಲಿನಲಿದಾಡುವನು. ಆದರೆ ತನ್ನ ಮನೆಯಲ್ಲಿ ಒಂದು ಶಿಶು ಸತ್ತರೆ ಮರುಗುವಂತೆ ಅವಕ್ಕೇಕೆ ಮರುಗನು ? ಜೀವಹಿಂಸೆ ಮಾಡುವವರು ಮಾದಿಗರು ಎಂಬದಾಗಿ ಅವರ ವಚನವಿದೆ.

"ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ" ಎಂದು ಮಹಾತ್ಮಾ ಬಸವೇಶ್ವರರು ಹೇಳಿದ್ದಾರೆ. ಅರ್ಥಾತ್ ಅವರು ಐಹಿಕ ಪಾರಮಾರ್ಥಿಕಗಳನ್ನು ಬಹು ಸುಂದರವಾಗಿ ಒಂದುಗೂಡಿಸಿದರು. ಆದರೆ ಅಕ್ಕನವರ ಅಭಿಪ್ರಾಯ ಬೇರೆಯಾಗಿದೆ. "ಲೌಕಿಕ ಪಾರಮಾರ್ಥಿಕವೆಂಬೆರಡು ನಡಿಸಲು ಬಾರದಯ್ಯಾ, ಬಿಲ್ಲು ಬೆಳವಲಕಾಯ ಒಂದಾಗಿ ಹಿಡಿಯಲು ಬಾರದಯ್ಯಾ" ಎಂದು ಅವರು ಹೇಳಿದ್ದಾರೆ. ಅಂತು ಈ ಮಾತನ್ನು ಹೇಳುವಾಗ ಅಕ್ಕನವರು ಇನ್ನೂ ತನ್ನ ಗುರು, ಧಾರ್ಮಿಕ ತಂದೆ ಬಸವಣ್ಣನವರ ಮಟ್ಟಕ್ಕೆ ಬಂದಿರಲಿಲ್ಲವೆಂದು ಹೇಳಬಹುದಾದರೂ ಅಕ್ಕನವರ ವೀರ ವಿರಕ್ತಿಯು ಒಂದು ಆದರ್ಶ

ವಾಗಿದೆ. ಅದನ್ನೇ ಸೂಚಿಸುವ ಅವರ ಒಂದು ವಚನದಿಂದಲೇ ಈ ಬರೆಹವನ್ನು ಮುಗಿಸುವೆ.

"ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು? ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನನೊಲಿದ ಕಾಯ ಎಂತಾದೊಡೆಮ ಗೇನಯ್ಯ"

ಅಂತು ಅಕ್ಕನ ಜೀವನದಲ್ಲಿ ಉದಾತ್ತ ಗುರಿಯಿದೆ. ಅವರ ನುಡಿಗಳಲ್ಲಿ ಗಂಭೀರ ಅರ್ಥವಿದೆ. ಭಾಷೆಯಲ್ಲಿ ಬೆಡಗಿದೆ. ಅಕ್ಕನವರ ಜೀವನವು ಕನ್ನಡ ಮಹಿಳೆಯರಿಗೆ ಕೈದೀವಟಿಗೆಯಾಗಬೇಕೆಂದು ನಮ್ಮ ಹಾರೈಕೆ.

# ಜನ್ನ ಕವಿಯ ಪರಿಚಯ

ಕನ್ನಡದ ಆದಿಕವಿ ಪಂಪನಿಗೆ ಯಾವ ಚಕ್ರವರ್ತಿಯೂ ಬಿರುದನ್ನು ಕೊಡದಿದ್ದರೂ ಆತನು ಕವಿಚಕ್ರವರ್ತಿಯಾಗಿಯೇ ಉಳಿದಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಕವಿಚಕ್ರವರ್ತಿಗಳೆಂದು ಬಿರುದನ್ನು ಪಡೆದವರು ಮೂವರಿದ್ದಾರೆ. ಅವರಲ್ಲಿ ಜನ್ನನೊಬ್ಬನು. ಜನ್ನನು ಕವಿಚಕ್ರವರ್ತಿಗಳಲ್ಲಿ ಒಬ್ಬನೂ ಜೈನರ ಉದ್ದಾಮ ಕವಿಪಂಚಕದಲ್ಲಿ ಒಬ್ಬನೂ ಆಗಿದ್ದಾನೆ. ಮಧುರಕವಿಯ

> ಗರ್ವದ ಮಾತಲ್ಲ ಶಾಸ್ತ್ರಲೌಕಿಕ ಕಲೆಯೊಳ್
> ಬೇರ್ವರಿದ ನೇಮಿ ಜನ್ನಿಮ
> ರಿರ್ವರೆ ಕರ್ಣಾಟಕ ಕೃತಿಗೆ ಸೀಮಾ ಪುರುಷರ್

ಎಂಬ ಹೊಗಳಿಕೆಯು ವೈಯುಕ್ತಿಕ ಗೌರವ ಸೂಚಕವೆಂದು ಒಮ್ಮೆ ಅನಿಸಬಹುದಾದರೂ, ಇದರಿಂದ ಜೈನ ಕವಿಗಳಲ್ಲಿ ಕವಿಜನ್ನನ ಸ್ಥಾನವು ಉನ್ನತವಾಗಿದೆಯೆಂದು ಒಪ್ಪಬೇಕಾಗುತ್ತದೆ. ಈತನು 'ಜಗನ್ನುತ-ಜನ್ನ' ನೆಂದು ಕರೆಯಲ್ಪಟ್ಟಿದ್ದಾನೆ. 'ಜಗನ್ನುತ' 'ಕವಿಚಕ್ರವರ್ತಿ' 'ಕರ್ಣಾಟಕ ಕೃತಿಗೆ ಸೀಮಾಪುರುಷ' ಇತ್ಯಾದಿ ಬಣ್ಣಿಸಲ್ಪಟ್ಟ ಜನ್ನಕವಿಯ ಬಗೆಗೆ ಕೆಲವು ಮಾತುಗಳನ್ನು ಆರೈಯುವುದು ಈ ಪ್ರಬಂಧದ ಉದ್ದೇಶ. ಇದು ಮಹಾಕವಿಯ ಕೃತಿಗಳ ಸಂಪೂರ್ಣ ವಿಮರ್ಶೆಯಲ್ಲ; ಆದರೆ ಆ ಕವಿಯ 'ಪರಿಚಯ' ಮಾತ್ರ.

"In the thirteenth century we find a group of excellent Jain poets all closely related to one another, patronised by Hoysal Kings." ಎಂಬುದಾಗಿ ಸಿ. ಹಯವದನರಾಯರು ಮೈಸೂರ ಗ್ಯಾಝೇಟಿಯರದಲ್ಲಿ ಬರೆದಿದ್ದಾರೆ. ಹೊಯ್ಸಳ ಅರಸರಿಂದ ಪರಿಪೋಷಿತರಾದ ಉದ್ದಾಮಕವಿಗಳಾದ ಪರಸ್ಪರ ಸಂಬಂಧಿ

ಗಳಾದ ಒಂದು ಜೈನ ಕವಿಸಮುದಾಯವು ಹದಿಮೂರನೆಯ ಶತಮಾನದಲ್ಲಿ ಕಂಡು ಬರುತ್ತದೆ. ಆ ಶ್ರೇಷ್ಠ ಪ್ರತಿಯ ಕವಿಸಮುದಾಯದಲ್ಲಿ ಜನ್ನನೂ ಒಬ್ಬನು; ಇಷ್ಟೇ ಅಲ್ಲ, ಆ ಸಮುದಾಯದಲ್ಲಿ ಹೆಚ್ಚು ಉಜ್ವಲನೂ ಅಹುದೆಂದು ಒಪ್ಪಬೇಕಾಗುತ್ತದೆ. ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಸಂಸ್ಕೃತದ ವಾದಿರಾಜನೆಂಬ ಮಹಾ ಕವಿಯನ್ನೂ ಕೂಡ ಜನ್ನನು ಮೀರಿಸಿರುವನೆಂದು ತೋರಿಸಿದ್ದಾರೆ. ( ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ ೧೫. ಸಂಚಿಕೆ ೪ ) ಕನ್ನಡ ಕವಿಗಳಲ್ಲಿ ಪೂರ್ವ ಕವಿಗಳನ್ನು ಹೊಗಳುವ ಸಂಪ್ರದಾಯವು ಬಳೆದು ಬಂದಿದ್ದರೂ 'ಅದ್ಯತನ' ಕವಿಗಳನ್ನು ಅವರು ಹೊಗಳುತ್ತಿರುವದಿಲ್ಲ. ಹೀಗಿದ್ದರೂ ಕೂಡ ಹೆಸ್ಮೆಯ ಕವಿಯಾದ ಆಂಡಯ್ಯನು ಬಹುಮಟ್ಟಿಗೆ ಸಮಕಾಲೀನನಂತಿರುವ ಜನ್ನನನ್ನು ಸ್ಮರಿಸುತ್ತಾನೆ. ಇಷ್ಟಲ್ಲದೆ ಜನ್ನನು ತನ್ನನ್ನು ತಾನೇ 'ಕವಿಗಳೊಳಗೆ ವೈಯಾಕರಣಂ' ಎಂದೂ ಕವಿಚಕ್ರ ವರ್ತಿಗಳಲ್ಲಿ 'ಸುಕವಿ' ಎಂದೂ ಹೊಗಳಿಕೊಳ್ಳುವುದು ಕೇವಲ ಆತ್ಮಶ್ಲಾಘನೆಯನ್ನು ವುದಕ್ಕಿಂತ ಆತ್ಮವಿಶ್ವಾಸದ ಹೇಳಿಕೆಯೆಂಬುದು ಆತನ ಕಾವ್ಯಗಳ ಅವಲೋಕನದಿಂದ ತಿಳಿದು ಬರಬಲ್ಲದು. ಅಂತು ಜನ್ನನು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಒಂದು ವಿಶಿಷ್ಟ ಹಾಗೂ ಉನ್ನತ ಸ್ಥಾನದಲ್ಲಿದ್ದಾನೆ. ಹನ್ನೆರಡನೆಯ ಶತಮಾನದ ಮಧ್ಯದಲ್ಲಿ ವೀರಶೈವರ ಕ್ರಾಂತಿಯಿಂದ ಕೆಲಮಟ್ಟಿಗೆ ಕಳೆಗುಂದಿದ ಜೈನಕವಿಗಳ ಕೀರ್ತಿಧ್ವಜ ವನ್ನು ಪುನಃ ಹದಿಮೂರನೆಯ ಶತಮಾನದಲ್ಲಿ ವಿಜೃಂಭಣೆಯಿಂದ ಮೆರೆಯಿಸಿದ ಶ್ರೇಯಸ್ಸು ಜನ್ನನಿಗೆ ಇದೆ. ಅಲ್ಲದೆ ಹತ್ತನೆಯ ಶತಮಾನದ ಜೈನಕವಿಗಳ ಪರಂಪರೆ ಯನ್ನು ಬಿಟ್ಟುಕೊಟ್ಟು ಹೊಸದೊಂದು ಮಾರ್ಗವನ್ನು ಅನುಸರಿಸಿರುವದರಿಂದ ಜನ್ನನ ಸ್ಥಾನವು ವಿಶಿಷ್ಟವಾಗಿದೆಯೆಂದು ಒಪ್ಪಲೇಬೇಕು. ಇನ್ನು ಆ ಸ್ಥಾನವು ಉನ್ನತವೂ ಅಹುದೆಂಬುದನ್ನು ಅರಿತುಕೊಳ್ಳಬಹುದಾಗಿದೆ.

ಜನ್ನನು ಹದಿಮೂರನೆಯ ಶತಮಾನದ ಕವಿ. ಆ ಶತಮಾನವು ರಾಜಕೀಯ ದೃಷ್ಟಿಯಿಂದ ಗಲಭೆಯುಳ್ಳದ್ದೂ ಧರ್ಮ, ಸಾಹಿತ್ಯಗಳ ದೃಷ್ಟಿಯಿಂದ ಪ್ರತಿ ಕ್ರಾಂತಿ ಯದೂ ಆಗಿದೆ. ಇದೇ ಶತಮಾನದಲ್ಲಿ ಹೊಯ್ಸಳರು ದಕ್ಷಿಣದಲ್ಲಿ ಸಾಮ್ರಾಜ್ಯ ಸ್ಥಾಪಿಸಲು ಪ್ರಯತ್ನ ನಡೆಯಿಸಿದರು. ರಾಜ್ಯವಿಸ್ತರಣ, ಪಾಂಡ್ಯ ಚೋಳರೊಡನೆ ಯುದ್ಧ, ಅಂತಃಕಲಹ, ಮುಸಲ್ಮಾನರ ಅಭಿಯೋಗ ಇವೆಲ್ಲವುಗಳಿಂದ ಈ ಶತ ಮಾನದ ರಾಜಕೀಯ ಇತಿಹಾಸವು ಗಲಭೆಯುಳ್ಳದ್ದಾಗಿರುವುದು ಸಹಜವೇ ಆಗಿದೆ. ಇನ್ನು ಧರ್ಮ ಸಾಹಿತ್ಯಗಳ ದೃಷ್ಟಿಯಿಂದ ನೋಡುವದಾದರೆ ಈ ಶತಮಾನವನ್ನು ಹನ್ನೆರಡನೆಯ ಶತಮಾನದೊಡನೆ ತುಲನೆಮಾಡಿ ನೋಡಬೇಕಾಗುವುದು. ವೀರ ಶೈವ ಧರ್ಮದ ಪ್ರಾಬಲ್ಯದ ಫಲವಾಗಿ ಹನ್ನೆರಡನೆಯ ಶತಮಾನದಿಂದ ಸಾಹಿತ್ಯದಲ್ಲಿ

ಹೊಸದೊಂದು ಯುಗವೇ ಪ್ರಾರಂಭವಾಯಿತಷ್ಟೇ. ಈ ನವೀನ ಹಾಗು ಜನಪ್ರಿಯ ಸಾಹಿತ್ಯಕ್ರಾಂತಿಯಿಂದ ಜೈನರ ಪುರಾಣಪದ್ಧತಿಯ ಕಾವ್ಯಗಳು ಹಿಮ್ಮೆಟ್ಟಬೇಕಾದುದು ಸಹಜವೇ. ಕನ್ನಡ ಸಾಹಿತ್ಯದ ವಿಭಾಗಗಳನ್ನು ಮಾಡಿದ ಕೆಲವರು ಹನ್ನೆರಡನೆಯ ಶತಮಾನಕ್ಕೆ ಜೈನರ ಯುಗವು ಕೊನೆಗಂಡಿತೆಂದೂ ಹೇಳುವದುಂಟು. ಆ ಹೇಳಿಕೆಯು ಸಂಪೂರ್ಣ ಸತ್ಯವಲ್ಲದಿದ್ದರೂ ಕೆಲವೊಂದು ದೃಷ್ಟಿಯಿಂದ ಅದರಲ್ಲಿ ಅರ್ಥವಿದೆ. ಹತ್ತನೆಯ ಶತಮಾನದ ಜೈನರ ಉದ್ದಾಮ ಕಾವ್ಯ ನಿರ್ಮಾಣವು ಪುನಃ ತಲೆದೋರದಂತಹ ಒಂದು ಆಘಾತ ಆಗ ಉಂಟಾಯಿತೆಂದು ಹೇಳಬಹುದು. ಈ ಬಲವಾದ ಆಘಾತದ ನಂತರ ಹದಿಮೂರನೆಯ ಶತಮಾನದಲ್ಲಿ ಜೈನರ ಒಂದು ಪ್ರತಿಕ್ರಾಂತಿ ಕಂಡುಬರುತ್ತದೆ. ಈ ಪ್ರತಿಕ್ರಾಂತಿ ಕಾಲದ ಶ್ರೇಷ್ಠ ಕವಿಯೇ ಜನ್ನನು.

ಜನ್ನನು ಕವಿಕುಲಕ್ಕೇ ಸೇರಿದವನಾಗಿದ್ದಾನೆ. ಮೇಲೆ ಉದ್ಧರಿಸಿದ ಹಯವದನರಾಯರ ಉಕ್ತಿಯಲ್ಲಿ ಈ ಮಾತಿನ ಪ್ರಸ್ತಾಪವಿದೆ. ಜನ್ನನ ಕವಿಕುಲದ ಸಂಬಂಧವಾಗಿ ಸ್ವರ್ಗೀಯ ಆರ್. ನರಸಿಂಹಾಚಾರ್ಯರ ಹೇಳಿಕೆಯಲ್ಲಿ ಡಾ. ವೆಂಕಟಸುಬ್ಬಯ್ಯನವರು ಕೆಲವು ವ್ಯತ್ಯಾಸಗಳನ್ನು ಸೂಚಿಸುತ್ತಿದ್ದರೂ ಕೂಡ, ಜನ್ನನ ಕವಿಕುಲದ ಸಂಬಂಧವನ್ನು ಅಲ್ಲಗಳೆಯುವಂತಿಲ್ಲ. ಸುಮನೋಬಾಣಕವಿಯು ಜನ್ನನ ತಂದೆ; ಮಲ್ಲಿಕಾರ್ಜುನ ಕವಿಯು ಜನ್ನನ ಸೋದರಿಯ ಗಂಡ; 'ನಡೆದುದೆ ಮಾರ್ಗಂ' ಎಂಬ ಜಂಭದಿಂದ ಹೊರಟ ಸುಪ್ರಸಿದ್ಧ ವೈಯ್ಯಾಕರಣಿ ಕೇಶಿರಾಜನು ಜನ್ನನ ಸೋದರಳಿಯನು; ಕನ್ನಡ ಸಾಹಿತ್ಯದಲ್ಲಿ ಬಹುಶ್ರುತ ಲೇಖಕನಾದ ನಾಗವರ್ಮನು ಈತನಿಗೆ ಉಪಾಧ್ಯಾಯನು. ಇಂತಹ ಕವಿಕುಲಸಂಬಂಧವು ಅದಾರಿಗೆ ಹೆಮ್ಮೆಯನ್ನುಂಟು ಮಾಡಲಿಕ್ಕಿಲ್ಲ! ಡಾ. ವೆಂಕಟಸುಬ್ಬಯ್ಯನವರು ಸೂಚಿಸುವಂತೆ ಸುಮನೋಬಾಣನೇ ಜನ್ನನ ಉಪಾಧ್ಯಾಯನಾಗಿಯೂ, ಶಂಕರನೆಂಬವನು ತಂದೆಯಾಗಿದ್ದನೆಂದು ಇಟ್ಟುಕೊಂಡರೂ ಕೂಡ ಆ ಹೆಮ್ಮೆಗೆ ಕುಂದಕವೇನೂ ಉಂಟಾಗದಷ್ಟೇ.

'ಮನ್ನಿಸಿ ಬಲ್ಲಾಳಂ ಕುಡೆ ಜನ್ನಂ ಕವಿಚಕ್ರವರ್ತಿ ವೆಸರಂ ತಳೆದಂ' ಎಂದು ಕವಿಯೇ ಹೇಳಿಕೊಂಡಿರುವದಲ್ಲದೆ ತನ್ನ ಕಾವ್ಯಗಳ ನಿರ್ಮಾಣದ ಕಾಲವನ್ನೂ ಕೊಟ್ಟಿದ್ದಾನೆ. ಇದರಿಂದ ಈತನ ಯಶೋಧನಚರಿತೆಯು ೧೨೦೯ರಲ್ಲಿಯೂ, ಅನಂತನಾಥ ಪುರಾಣವು ೧೨೩೦ರಲ್ಲಿಯೂ ಬರೆಯಲ್ಪಟ್ಟಿತೆಂದು ಕವಿಚರಿತ್ರಕಾರರು ಬರೆಯುತ್ತಾರೆ. ಜನ್ನನು ಕೆಲವು ಶಿಲಾಶಾಸನಗಳನ್ನೂ ಬರೆದಿದ್ದಾನೆ. ೧೧೯೧ರಲ್ಲಿ ಹುಟ್ಟಿದ ಚೆನ್ನರಾಯಪಟ್ಟಣದ ೧೭೯ನೆಯ ಶಾಸನವನ್ನು ಈತನೇ ಬರೆದಿರುವನೆಂದು ತಿಳಿಯುವದರಿಂದ ಈತನು ಕವಿತ್ವ ರಚನೆಗೆ ಆರಂಭಿಸಿದುದು ೧೧೯೧ರಿಂದಲೇ ಎಂದೂ ಕವಿಚರಿತೆಕಾರರು ಸೂಚಿಸುತ್ತಾರೆ. ಹಾಗೂ ಈತನ ಕಾವ್ಯಗಳಿಂದ

ಈತನು ಹೊಯ್ಸಳ ವೀರಬಲ್ಲಾಳ (೧೧೭೩-೧೨೨೦) ಮತ್ತು ಆತನ ಮಗ ವೀರ ನರಸಿಂಹ (೧೨೨೦-೧೨೩೫) ಇವರ ಆಳಿಕೆಯಲ್ಲಿ ಇದ್ದಿರಬೇಕೆಂದು ತಿಳಿಯಬಹು ದಾಗಿದೆ. ಅಂತು ಕವಿ ಜನ್ನನಿದ್ದುದು ಹದಿಮೂರನೆಯ ಶತಮಾನದ ಆದಿಯಲ್ಲಿಯೇ ಎಂದು ಕಂಡುಬರುತ್ತಿದೆ.

ಸರಸ್ವತಿಗೂ ಲಕ್ಷ್ಮಿಗೂ ಸಾಮಾನ್ಯವಾಗಿ ವಿರೋಧವು ಹೇಳಲ್ಪಡುತ್ತದಷ್ಟೇ. ಆದರೆ ಜನ್ನನು ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗಿದ್ದಾನೆ. "ಜಗದೊ ಳ್ತ್ರಾನಿತ್ತ ಕೆಯ್ಯಲ್ಲದೊಡ್ಡಿದ ಕೆಯ್ಯಲ್ಲದ ಪೆಂಪು" ಆತನದಾಗಿದೆ. ಆತನು ದಾತೃ ವಾಗಿರುವನೇ ಹೊರತು ಯಾಚಕನಲ್ಲ. ಆತನ ಸಂಪತ್ತಿನ ವಿನಿಯೋಗವಾದರೂ ಧರ್ಮಕಾರ್ಯಕ್ಕಾಗಿಯೆ. 'ನಿಜ ವಿಭವೋದಯಂ ಸಫಳಮಾಯ್ತೆನೆ ಮಲ್ಲಿ ಜಿನೇಂದ್ರ ಗೇಹಮಂ ವಿಜಯ ಪುರಕ್ಕಳಂಕರಣಮಾಗಿರೆ' ಅಭಿನವ ಪಂಪನು ಮಾಡಿಸಿದ್ದನು. ಜನ್ನನೂ ಕೂಡ ಅಂತಹ ಕೀರ್ತಿಗೆ ಅರ್ಹನಾಗಿದ್ದಾನೆ.

> ದೋಃಪ ಸಮುದ್ರದೊಳ್ ವಿಜಯಪಾರ್ಶ್ವ ಜಿನೇಶ್ವರ ದಿವ್ಯ ಮಂದಿರ
> ದ್ವಾರದ ಮುಂತೆ ಮಾಡಿಸಿದ ಶಾಂತಿ ಜಿನಾಲಯದೊಳ್ಸಮೇರುಮಂ
> ದಾರಪ ಕೊಂಬಿನರ್ಥಿಯೆನಲುಂಬಿದ ಮೇಣ್ಕವಿಭಾಳಲೋಚನಂ
> ಧಾರಿಣಿಗೀತು ಮಾಡಿದನನಂತ ಪುರಾಣದ ಸುಪ್ರತಿಷ್ಠೆಯಂ

ಹೀಗೆ ಸಂಪತ್ತನ್ನೂ ಕವಿತಾಶಕ್ತಿಯನ್ನೂ ಜಿನಮತೋದ್ಧಾರಕ್ಕಾಗಿಯೆ ವಿನಿಯೋ ಗಿಸಿದ ನಾಗಚಂದ್ರ ಜನ್ನರು ಆಗಿನ ಕಾಲದ ಸಾಂಸ್ಕೃತಿಕ ಜೀವನದ ಪ್ರತೀಕಗ ಳಂತಿದ್ದಾರೆ ಎಂದು ಹೇಳಬಹುದು. ಭಾರತೀಕರ್ಣಪೂರನಾದ ನಾಗಚಂದ್ರನು 'ನಿಚ್ಚಂ ಪೊಸತೆಂಬೀ ಪೆರ್ಮೆಯಂ ಪಾವನಮೆನಿಸಿದ ವಾಕ್ಯೋಪಹಾರಗಳಿಂದ.... ಶ್ರೀ ಮಲ್ಲಿಭಟ್ಟಾರಕ ಪದಯುಗಮಂ' ಅರ್ಚಿಸಿದನು. ಜನ್ನನಾದರೋ ಅನಂತ ನಾಥನ 'ಪದಯುಗಮಂ' ಅರ್ಚಿಸಿದನು. ನಾಗಚಂದ್ರನು,

> ರಾಗ ದ್ವೇಷ ಸಿಬಂಧಮಪ್ಪ ಕೃತಿಯಂ ನಿರ್ಬಂಧದಿಂ ಬಂಧಮಿಂ
> ಬಾಗರ್ಥಂ ಪೊಸತಾಗೆ ಪೇಳ್ದಖಿಲಮುಂ ರಾಗಾವಿಲಂ ಮಾಳ್ಪ ವಿ
> ದ್ಯಾಗರ್ವ ಗ್ರಹಪೀಡಿತರ್ ಸ್ವಪರ ಬಾಧಾಹೇತುವಂ ದುಸ್ತರೋ
> ದ್ಯೋಗ ಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮಂ

ಎಂದು ಹೇಳಿದನು. ರಾಗದ್ವೇಷವುಳ್ಳ ಕೃತಿಯನ್ನು ರಚಿಸುವುದೆಂದರೆ ವಿಷೋ ದ್ಯಾನವನ್ನು ಬಿತ್ತಿ ಬೆಳೆವಂತೆ ಎಂದು ಆತನ ಅಭಿಪ್ರಾಯ. ಜನ್ನನೂ ಕೂಡ ತನ್ನ ಕಾವ್ಯವು 'ಜಾರ ಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ

ಬಱಿಕೆಯ್ವ ಚರ್ಚೆ'ಯಲ್ಲವೆಂದೂ 'ಬಾಳ ಬಟ್ಟೆಯು ಪರಮಾಗಮ'ವೆಂದೂ ಹೇಳು ತ್ತಾನೆ. ಸಂಪತ್ತು, ಕವಿತಾಶಕ್ತಿಗಳ ಸದುಪಯೋಗದಿಂದ ನಾಗಚಂದ್ರ ಜನ್ನರು ಧನ್ಯತೆಯನ್ನು ಪಡೆದಿರುವರಲ್ಲದೆ, ಮಹಾಕವಿಗಳು ಶ್ರೇಷ್ಠವಾದ ಶೀಲವನ್ನೂ ಉಳ್ಳವ ರಾಗಿದ್ದರೆಂಬುದನ್ನು ಸಿದ್ಧಪಡಿಸುತ್ತಾರೆ. ಕನ್ನಡದ ಪ್ರಾಚೀನ ಉದ್ದಾಮ ಕವಿಗಳೆಲ್ಲ ಸುಶೀಲರೇ ಆಗಿದ್ದಾರೆ. ಪುಣ್ಯಚರಿತನಾದ ಜನ್ನನಿಗೆ ಸರಸ್ವತಿಯು ಸಮ್ಮೋಹಿತೆ ಯಾದುದು ಸಹಜವೇ ಆಗಿದೆ. ಈ ಮಾತನ್ನು ಆತನೇ ಹೇಳುತ್ತಾನೆ.

> ಚತುರಂ ನೀಱಿನುದಾರನುಜ್ವಲಯಶಂ ಸೌಭಾಗ್ಯಸಂಪನ್ನನೂ
> ರ್ಜಿತ ಪುಣ್ಯೋದಯನೀಜನಾರ್ದನನ ವಕ್ತ್ರಾಂಭೋಜಮಂ ಸಾರ್ದುಸು
> ಸ್ಥಿತೆಯಾಗಿರ್ದುದಱಿಂದೆ ತಾಂ ಸೊಬಗೆಯಾದಳ್ ಜಾಣೆಯಾದಳ್ ಸರ
> ಸ್ವತಿ ಸಮ್ಮೋಹಿತೆಯಾದಳಗ್ಗಳಮೆಯಾದಳ್ ವಿಶ್ವಭೂಚಕ್ರದೊಳ್

ಅಂತು ಸರಸ್ವತಿಯು 'ಸೊಬಗೆ', 'ಜಾಣೆ' ಯಾದುದಕ್ಕೆ ಕಾರಣವೆಂದರೆ ಅವಳು ಪುಣ್ಯೋದಯನಾದ ಜನ್ನನನ್ನು ಸೇರಿದುದು. ನಮ್ಮ ಕವಿಗಳ ಇಂತಹ ಹೆಮ್ಮೆಯನ್ನು ನೋಡಬೇಕು. ಇಲ್ಲಿರುವುದು ಅತ್ಯುಕ್ತಿಯೆಂದೆನಿಸಿದರೂ ಅದು ಆತ್ಮವಿಶ್ವಾಸದ ಗುರುತಾಗಿದೆಯೆಂಬುದನ್ನು ಮರೆಯತಕ್ಕದ್ದಲ್ಲ. ಜನ್ನನ ಹೆಮ್ಮೆಯನ್ನು ಇನ್ನಿಷ್ಟು ಕೆಳಗಿನ ಪದ್ಯದಲ್ಲಿ ನೋಡಬಹುದು.

> ಇದು ಲೋಕೋತ್ತಮಮಪ್ಪ ವಿದ್ಯೆ ಜಗದೊಳ್ತಾನಿತ್ತ ಕೆಯ್ಯಲ್ಲದೊ
> ಡ್ಡಿದ ಕೆಯ್ಯಲ್ಲದ ಪೆಂಪು ಭೂಭುಜರೊಳದ್ವೈತೀಯಮಾಗಿರ್ಪ ಸ
> ಲ್ಗೆ ದಿಟಕ್ಕನ್ಯರ ಲೇಸನಲ್ಲದೆನಗಿಂತಂತೆಂದು ಮಾತಾಡಲೊ
> ಲ್ಲದ ಸತ್ವಂ ಕವಿಭಾಳಲೋಚನನೊಳುಂಟೆನೋರ್ವರೊಳ್ತೋಱಿಸಾ

ಜನ್ನನದು ಅನ್ಯರ ಲೇಸನಲ್ಲದೆ, ತನಗೆ ಅಂತು ಇಂತೆಂದು ಮಾತನಾಡ ಲೊಲ್ಲದ ಸತ್ವಂ. ನಮ್ಮ ಪ್ರಾಚೀನ ಕವಿಗಳು ಅನ್ಯರ ಲೇಸನ್ನೇ ಬಯಸುತ್ತಿದ್ದ ರೆಂಬ ಮಾತು ಇಂದಿನ ಕವಿಗಳಿಗೆ ಮಾರ್ಗದರ್ಶಕವಾಗಬೇಕಾಗಿದೆ. ಇರಲಿ.

ಜನ್ನನು ಪುಣ್ಯಚರಿತನಿದ್ದಂತೆಯೇ ಮಹಾಕವಿಯೂ ಅಹುದು. ಕವಿತಾ ಸಾಮ್ರಾಜ್ಯದಲ್ಲಿ ಕೀರ್ತಿಯನಾಂತ ಬಲ್ಲಹನೂ ಆಗಿದ್ದಾನೆ.

> ಕೊಡೆಯಂ ಪಟ್ಟವನಾಂತಚಕ್ರಿ, ಕವಿತಾಸಾಮ್ರಾಜ್ಯದೊಳ್ತೇಜದು
> ಗ್ಗಡಮಂ ಕೀರ್ತಿಯನಾಂತ ಬಲ್ಲಹನಿಳಾಪುತ್ರತ್ವದೊಳ್ ಚಾಗಮಂ,
> ನುಡಿಯೋಳ್ಸತ್ಯಮನಾಂತ ರಾಜಮುನಿಪಂ, ಸಮ್ಯಕ್ತ್ವದೊಳ್ತಾಗ್ಗರಮಂ
> ಪಡೆದುಂ ಮಾನವಮೇರು ಜನ್ನಮರಸಂ ಸಾಹಿತ್ಯರತ್ನಾಕರಂ

ಈತನು 'ಕಾವ್ಯಕಲಾಪರಿಣತೆ'ಯನ್ನು ಪಡೆದಿದ್ದನು. ಅದರ ಜೊತೆಗೆ 'ಖಟ್ಗಿ ಕಳಾಪರಿಣತೆ'ಯನ್ನೂ ಹೊಂದಿದ್ದನು. ಲೆಕ್ಕಣಿಕೆ, ಖಡ್ಗ ಇವುಗಳಿಗೆ ಪರಸ್ಪರ ಸಂಬಂಧವಿಲ್ಲವೆಂದು ನಂಬುವ ಈಗಿನ ಕಾಲದಲ್ಲಿ ಕಾವ್ಯಕಲಾಪರಿಣತೆ, ಖಡ್ಗಕಲಾ ಪರಿಣತೆ, ಇವುಗಳನ್ನು ಸಮನ್ವಯಿಸಿದ ಜನ್ನನಂತಹ ಕನ್ನಡ ಕವಿಗಳಿಗೆ ಒಂದು ವಿಶಿಷ್ಟ ರೀತಿಯ ಗೌರವವಿದೆಯೆಂದು ಒಪ್ಪಬೇಕಾಗುತ್ತದೆ. ಅಂತು ಜನ್ನನು ಪುಣ್ಯ ಚರಿತನು, ಸಾಹಿತ್ಯಸಾಮ್ರಾಜ್ಯದಲ್ಲಿ ಉಗ್ಗಡದ ಕೀರ್ತಿಯನಾಂತವನು, ಕಾವ್ಯ-ಖಟ್ಗಿಕಳಾಪರಿಣತನು, ಆತನದು ಒಡ್ಡಿದ ಕೆಯ್ಯಲ್ಲ; ಇತ್ತ ಕೈಯು. ಈ ದೃಷ್ಟಿ ಯಿಂದ ನೋಡಿದಾಗ ಕವಿಗಳ ಸಾಲಿನಲ್ಲಿ ಜನ್ನನಿಗೆ ಶ್ರೇಷ್ಠವಾದ ಸ್ಥಾನವಿದೆಯೆಂದು ಒಪ್ಪಬೇಕಾಗುತ್ತದೆ.

ಜನ್ನನು ಬಹು ಶಾಸ್ತ್ರಪಂಡಿತನೆಂದು ತಿಳಿಯುತ್ತದೆ. ಯಶೋಧರ ಚರಿತೆ ಯಲ್ಲಿ ಆತನೇ ಹೀಗೆ ಹೇಳುತ್ತಾನೆ.

ಆ ನೃಪನ ಸಭೆಯೊಳಖಿಳ ಕ
ಳಾಸಿಪುಣರ ನಟ್ಟನಡುವೆ ಬೆಟ್ಟಿತ್ತಿಗೆಲಲ್
ತಾನೆ ಚತುರ್ವಿಧ ಪಂಡಿತ
ನೇನೆಂಬುದೋ ಸುಕವಿ ಭಾಳಲೋಚನನಳವಂ ॥

ನವ ವೈಯ್ಯಾಕರಣಂ ತ
ರ್ಕವಿನೋದಂ ಭರತಸುತ ಶಾಸ್ತ್ರವಿಳಾಸಂ
ಕವಿರಾಜಶೇಖರಂ.......

...............................

ಬಹುಶ್ರುತತ್ವ, ಜಿನಮತೋದ್ಧಾರ, ಜೀವನದ ವಿವಿಧರಂಗಗಳಲ್ಲಿ ಪ್ರಾವಿಣ್ಯತೆ ಇವು ಗಳು ಜನ್ನಕವಿಯ ವೈಶಿಷ್ಟ್ಯಗಳಾಗಿವೆ. ಅನಂತನಾಥ ಪುರಾಣದಲ್ಲಿ (IV-೮೮, ೮೯, ೯೦) ಮಂಜುಘೋಷೆಯ ಸಂಗೀತದ ವರ್ಣನೆಯಿದೆ. ಅದರಲ್ಲಿ ಬರುವ ಸಂಗೀತದ ಪಾರಿಭಾಷಿಕ ಶಬ್ದಗಳನ್ನು ಅವಲೋಕಿಸಿದರೆ ಕವಿಗೆ ಸಂಗೀತಶಾಸ್ತ್ರದ ಪರಿಚಯವೂ ಇದೆಯೆಂದು ಕಂಡುಬರುತ್ತದೆ.

ನಾಗಚಂದ್ರ ಹಾಗೂ ಜನ್ನ ಇವರ ಜೀವನ ಹಾಗೂ ಕಾವ್ಯೋದ್ದೇಶಗಳಲ್ಲಿ ಸಾಮ್ಯವಿದೆಯಷ್ಟೇ. ಇಬ್ಬರೂ 'ಜೈನಮಂದಿರ ನಿರ್ಮಾಣಧನ'ರು. ಇಬ್ಬರ ಕಾವ್ಯ ಗಳೂ 'ಬಾಳ ಬಟ್ಟೆಯ ಪರಮಾಗಮ'ಗಳಾಗಿವೆ. ಈ ಹೋಲಿಕೆಯಲ್ಲದೆ ಇವರಿಬ್ಬರಲ್ಲಿ ಇನ್ನೊಂದು ಹೋಲಿಕೆಯಿದೆ. ಅದೆಂದರೆ ಉದ್ದಾಮ ಕವಿಗಳಾದ ಇವರಿಬ್ಬರೂ ಶಾಸನ ಕಾರರೂ ಆಗಿದ್ದಾರೆ. ಯಶೋಧರ ಚರಿತೆಯಲ್ಲಿಯ,

ಸಳನೆಂಬ ಯಾದವಂ ಹೊ
ಯ್ಸಳನಾದಂ ಶಶಕಪುರದ ವಾಸಂತಿಕೆಯೊಳ್
ಮುಳಿದು ಪುಲಿಪಾಯೆಯುಂ ಹೊ
ಯ್ಸಳಯೆಂದೊಡೆ ಗುರುಗಳಿತ್ತು ಕುಂಚದ ಸೆಳೆಯಂ

ಎಂಬ ಪದ್ಯದ ಅರ್ಥವನ್ನೇ ಸೂಚಿಸುವ ಚೆನ್ನರಾಯ ಪಟ್ಟಣದ ೧೭೯ನೆಯ ಶಿಲಾ ಶಾಸನವನ್ನು ಜನ್ನನು ಬರೆದಿದ್ದಾನೆ. ಅಲ್ಲದೆ ಈತನು ತರಿಕೆರೆಯ ೪೫ನೆಯ ಶಾಸನ ವನ್ನೂ ಬರೆದಂತೆ ತಿಳಿಯುತ್ತದೆ.

ಕಾವ್ಯರಚನೆ, ಕಾವ್ಯೋದ್ದೇಶಗಳನ್ನು ಕುರಿತು ಜನ್ನನು ಹೇಳಿದ ಮಾತುಗಳು ಮನನೀಯವಾಗಿವೆ. ಕಾವ್ಯರಚನಾಶಕ್ತಿಯು ಒಂದು ಶ್ರೇಷ್ಠ ವರವೆಂದೂ ಅದನ್ನು ಸರಿಯಾಗಿ ವಿನಿಯೋಗಿಸದಿರುವುದು ಪಾಪವೆಂದೂ ಆಗಿನವರು ನಂಬುತ್ತಿದ್ದರು. ಜೈನನಾಗಿ ಹುಟ್ಟಿ ಕವಿತಾಶಕ್ತಿಯನ್ನು ಪಡೆದವನು ಜೈನ ಮತೋದ್ಧಾರಕ್ಕೆ ಆ ಶಕ್ತಿ ಯನ್ನು ಉಪಯೋಗಿಸದಿರುವುದು ಪಾಪವೆಂಬ ನಂಬಿಗೆಯಿಂದಲೇ ಕೆಲವು ಜೈನ ಕವಿಗಳ ಕೃತಿಗಳು ಬರೆಯಲ್ಪಟ್ಟಿವೆ. ಅಂತಹವುಗಳಲ್ಲಿ ಜನ್ನನ ಕೃತಿಗಳೂ ಸೇರು ತ್ತವೆ. ಜನ್ನನು ಅನಂತನಾಥ ಪುರಾಣದಲ್ಲಿ ಹೀಗೆ ಹೇಳುತ್ತಾನೆ:—

ಕವಿತಾಶಕ್ತಿ ಸುರೇಂದ್ರಧೇನುವದು ಪುಣ್ಯಾಯತ್ತಮಾಕಾಮಧೇ
ನುವೆ ಕೈಸಾರ್ದೊಡಮಾ ವಚಸ್ಸುಧೆಯನನ್ಯರ್ಗಿತ್ತು ಕಾಟಿಕ್ಕಿಗೂ ।
ಡುವ ಪೊಲ್ಲುತ್ತಯ್ಯಲನಿಂದ್ರವಂದಿತನನರ್ಹದ್ದೇವನಂ ಭರ್ತೃಮಾ
ಡುವುದಾತಂ ಕಟಿಕಿವಾತನಲ್ತೆ ತಳೆಯೊಳ್ಪಾಲಂ ಭವದ್ವಂದ್ವದಾ ॥

ದೇವಾಧೀಶನನೊರ್ಮೆ ವರ್ಣಿಸೆ ಮನೋವಾಕ್ಕಾಯ ಸಂಶುದ್ಧಿಯಿಂ
ದೇವೇಂದ್ರತ್ವಮೆ ಸಾರ್ವುದೆಂದೊಡೆ ತದೀಯಾಶ್ಚರ್ಯ ಚಾರಿತ್ರದೊಳ್ ।
ಭಾವಂ ನಿಂದು ಪುರಾಣಮುಂ ಸಮೆದನಾರ್ಹಂತ್ಯಕ್ಕೆ ಹಂಗೇಕೆ ಯೋ
ಭಾವಸ್ತ್ರೋಭವಮೆಂಬ ವಾಕ್ಯಮೆ ವಲಂ ಮೂಢಪ್ರಬೋಧಾವಹಂ ॥

ಕವಿತಾಶಕ್ತಿಯು ಕಾಮಧೇನುವಿದ್ದಂತೆ; ಅದು 'ಪುಣ್ಯಾಯತ್ತಂ'. ಅದು ಸಾಧ್ಯ ವಾಗಿರುವಾಗ ಅದನ್ನು ಅನ್ಯರಿಗಾಗಿ ವಿನಿಯೋಗಿಸುವುದು ತಪ್ಪು ಎಂಬುದು ಜನ್ನನ ಅಭಿಪ್ರಾಯ. ಅಂದಮೇಲೆ 'ಗುಣಾರ್ಣವ ಭೂಭುಜನಂ ಕಿರೀಟಿಯೊಳ್' ಪೋಲಿಸಿದ ಪಂಪಭಾರತ, ಸತ್ಯಾಶ್ರಯದೇವನನ್ನು 'ಅನಿಲಜನೊಳ್ಪೋಲಿಸಿ' ಪೇಳ್ದ ಗದಾಯುದ್ಧ ಇವುಗಳ ಕರ್ತೃಗಳಾದ ಪಂಪ ರನ್ನರಿಗಿಂತ ಜನ್ನನು ಬೇರೊಂದು ಮಾರ್ಗವನ್ನು ಅನುಸರಿಸಿದ್ದಾನೆಂದು ಹೇಳಬೇಕಾಗುತ್ತದೆ. ಹತ್ತನೆಯ ಶತ ಮಾನದ ಜೈನ ಕವಿಗಳ ಸಂಪ್ರದಾಯವು ಜನ್ನನ ಹೊತ್ತಿಗೆ ಮಾರ್ಪಟ್ಟಿತ್ತೆಂದು

ಕಂಡುಬರುತ್ತದೆ. ಪಂಪ-ರನ್ನರು ಐಹಿಕ ಪಾರಮಾರ್ಥಿಕ ಕಾವ್ಯಗಳೆರಡನ್ನೂ ಬರೆದರೆ ನಾಗಚಂದ್ರ-ಜನ್ನರು ತಮ್ಮ ಎರಡೂ ಕಾವ್ಯಗಳನ್ನು ಪಾರಮಾರ್ಥಕ್ಕಾಗಿಯೇ ಮೀಸಲಾಗಿಟ್ಟಿದ್ದಾರೆ. ಕಾವ್ಯಫಲದಿಂದ ಧರ್ಮೋಪದೇಶಗೆಯ್ಯುವುದು ನಾಗಚಂದ್ರನ ಉದ್ದೇಶವಾಗಿದೆ. ಜನ್ನನಾದರೂ ತನ್ನ ಕವಿತಾಶಕ್ತಿಯನ್ನು ಅರ್ಹದ್ದೇವನನ್ನು ಹೊಗಳುವದಕ್ಕಾಗಿಯೇ ವಿನಿಯೋಗಿಸಿದ್ದಾನೆ. ನಾಗಚಂದ್ರನ ಕಾವ್ಯೋದ್ದೇಶ 'ದರ್ಶನವಿಶುದ್ಧಿ'. ಜನ್ನನೂ ಕೂಡ 'ದೇವಾಧೀಶನಂ, ಒರ್ಮೆ ವರ್ಣಿಸೆ ಮನೋವಾಕ್ಕಾಯ ಸಂಶುದ್ಧಿಯಿಂ ದೇವೇಂದ್ರತ್ವಮೆ ಸಾರ್ವುದೆ'ಂದು ಹೇಳುತ್ತಾನೆ. ಅಂತೆಯೆ ಅರ್ಹಂತ (ಅನಂತನಾಥ)ನ 'ಆಶ್ಚರ್ಯ ಚಾರಿತ್ರದೊಳ್ ಭಾವಂ ನಿಂದು ಪುರಾಣಮಂ' ಸಮೆದನು. ಮಧುರ ಕವಿಯು 'ನೇಮಿ ಜನ್ನಿಮರೀರ್ವ'ರನ್ನು ಕೂಡಿಯೇ ಹೇಳಿದಾಗ ಜನ್ನನ ಮೇಲಿನ ಉಕ್ತಿಯನ್ನೂ ಕಾಂತಶಬ್ದರುಚಿ ಕಾಂಚನದೊಳ್ ಜೈನಕಥಾಕಾರರತ್ನಮಂ ಕೇವಣಿಪಬೇಕೆಂಬ ನೇಮಿಯ ನುಡಿಯನ್ನೂ ಲಕ್ಷಿಸಿಯೇ ಹೇಳಿದನೋ ಏನೋ ಎನ್ನುವಂತಿದೆ. ಅಂತು ನಾಗಚಂದ್ರ, ನೇಮಿ, ಜನ್ನರ ಕಾವ್ಯೋದ್ದೇಶವು ಸುಸ್ಪಷ್ಟವಾಗಿದೆ. ಮೂವರೂ ಒಬ್ಬೊಬ್ಬ ತೀರ್ಥಂಕರನ ಚರಿತೆಯನ್ನು ಬರೆದಿದ್ದಾರೆ. ಜೊತೆಗೆ ನಾಗಚಂದ್ರನು 'ರಾಮಚಂದ್ರ ಚರಿತ ಪುರಾಣ'ವನ್ನು, ನೇಮಿಯು 'ಲೀಲಾವತಿ'ಯನ್ನು, ಜನ್ನನು 'ಯಶೋಧರ ಚರಿತೆ'ಯನ್ನೂ ಬರೆದಿದ್ದಾರೆ. ರಾಮಚಂದ್ರಚರಿತ ಪುರಾಣವು ಭಾರತೀಯ ಜನಪ್ರಿಯ ಮಹಾಕಾವ್ಯದ ಕಥೆಯನ್ನೊಳಗೊಂಡಿದ್ದರೂ ಜೈನಧರ್ಮ ಪ್ರಚಾರದ ಉದ್ದೇಶದಿಂದ ಕೂಡಿದೆ. ಲೀಲಾವತಿಯು ಒಂದು ಪ್ರಣಯ (ಕಟ್ಟು) ಕಥೆ. ಆದರೆ ಜನ್ನನ ಎರಡನೆಯ ಕೃತಿ (ಯಶೋಧರ ಚರಿತ್ರೆ) ಯು ಜೈನಧರ್ಮದ ಒಂದು ವಿಶಿಷ್ಟ ತತ್ತ್ವ ಪ್ರತಿಪಾದನೆಗಾಗಿ ಮೀಸಲಾಗಿಡಲ್ಪಟ್ಟ ಕಾವ್ಯವಾಗಿದೆ. ಜೈನ ಮತೋದ್ಧಾರಣೆಯ ಕಾರ್ಯವು ಜನ್ನನಿಂದ ಕೊಂಚ ಹೆಚ್ಚಾಗಿಯೇ ನಡೆದಿರಬಹುದೆಂದು ಇದರಿಂದ ಊಹಿಸಬಹುದಾಗಿದೆ. ಅಂತೆಯೇ ಜೈನಧರ್ಮ ಕುಲದೀಪಕರಲ್ಲಿ ಜನ್ನನಿಗೆ ಹೆಚ್ಚಿನ ಸ್ಥಾನ ಕೊಡಬೇಕಾಗುತ್ತದೆ.

ಇನ್ನು ಜನ್ನನ ಕೃತಿಗಳ ಬಗೆಗೆ ಒಂದೆರಡು ಮಾತು. ಜನ್ನನು ಕೆಲವು ಶಾಸನಗಳನ್ನು ಬರೆದಿರುವನೆಂಬುದನ್ನು ಈ ಮೊದಲೆ ಸೂಚಿಸಿದ್ದಾಗಿದೆ. ಅಲ್ಲದೆ ಆತನು 'ಸ್ಮರತಂತ್ರ'ವೆಂಬ ಗ್ರಂಥವನ್ನು ರಚಿಸಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಅದು ಉಪಲಬ್ಧವಿಲ್ಲ. ಅದರಿಂದ ವಿಶೇಷ ಕುಂದಕವೇನೂ ಇಲ್ಲ. ಏಕೆಂದರೆ ಜನ್ನನ ಕೀರ್ತಿಯು ಚಿರಸ್ಥಾಯಿಯಾಗಿರುವುದು, ಆತನ ಉಪಲಬ್ಧವಿರುವ ಎರಡು ಕೃತಿಗಳಿಂದ. ಅವುಗಳೆಂದರೆ (೧) ಅನಂತನಾಥ ಪುರಾಣ. (೨) ಯಶೋಧರ ಚರಿತ್ರೆ.

ಅನಂತನಾಥ ಪುರಾಣವು ಜೈನ ತೀರ್ಥಂಕರರಲ್ಲಿ ಹದಿನಾಲ್ಕನೆಯವನಾದ ಅನಂತನಾಥನ ಚರಿತ್ರೆಯಾಗಿದೆ. ಕವಿಯು ಅದನ್ನು ಚರಿತಪುರಾಣವೆಂದು ಕರೆಯುತ್ತಾನೆ. ಜೈನರ ತೀರ್ಥಂಕರ ಚರಿತ್ರೆಗಳೆಲ್ಲ ಸಾಂಪ್ರದಾಯಿಕವಾದ ರೀತಿಯಲ್ಲಿಯೇ ಬರೆಯಲ್ಪಟ್ಟಿವೆ.ಅವು ತೀರ್ಥಂಕರ ಚರಿತೆಗಳೂ,ಜೈನಧರ್ಮ ಪ್ರತಿಪಾದನೆಯನ್ನೊಳಗೊಂಡ ಪುರಾಣಗಳೂ ಆಗಿವೆ. ಜೈನ ಪುರಾಣಗಳು 'ಲೋಕಾಕಾರ ಕಥನಮುಂ' ಎಂಬ ಅಂಗದಿಂದ ಪ್ರಾರಂಭವಾಗಿ 'ತತ್ಫಳಪ್ರಾಪ್ತಿ ಪ್ರಕಟನಮುಂ' ಎಂಬುದರ ವರೆಗಿನ ಎಂಟು ಅಂಗಗಳನ್ನು ಒಳಗೊಂಡಿರುತ್ತವೆ. ಹಾಗೂ ತೀರ್ಥಂಕರನ ಆತ್ಮವು ವಿಕಾಸವನ್ನು ಪಡೆದುದರ ರೀತಿಯು ಅವುಗಳಲ್ಲಿ ವರ್ಣಿಸಲ್ಪಟ್ಟಿರುತ್ತದೆ. ಜೈನ ಪದ್ಧತಿಯನ್ನು ಅನುಸರಿಸಿ ಲೋಕಾಕಾರದ ವರ್ಣನೆಯು-ಜಂಬೂದ್ವೀಪ, ಭರತ ಕ್ಷೇತ್ರ, ಅದರಲ್ಲಿ ಯಾವುದೊಂದು ದೇಶ,ಅಲ್ಲಿಯ ಸಾರ್ವಭೌಮನ ವರ್ಣನೆ ಇವುಗಳು ಬರುತ್ತವೆ. ಆ ಅರಸನು ಸಾಮ್ರಾಜ್ಯಸುಖದ ತುತ್ತತುದಿಯಲ್ಲಿದ್ದರೂ ಆಕಸ್ಮಿಕ ಘಟನೆಗಳಿಂದ ಸಂಸಾರಸುಖವು ಕ್ಷಣಿಕವೆಂಬುದನ್ನು ಅರಿತು ರಾಜ್ಯತ್ಯಾಗ ಮಾಡಿ ಅರಣ್ಯಕ್ಕೆ ತಪಸ್ಸಿಗೆ ಹೋಗಿ ಅಲ್ಲಿ ಆತ್ಮನ ನಿಜವಾದ, ಕೊನೆಯದಾದ 'ಅರ್ಹಂತ' ಸ್ಥಿತಿಯನ್ನು ಪಡೆಯುತ್ತಾನೆ. ಈ ಸಾಂಪ್ರದಾಯಿಕ ರೀತಿಯಲ್ಲಿಯೇ ಅನಂತನಾಥ ಪುರಾಣವು ರಚಿಸಲ್ಪಟ್ಟಿದೆ. ಕೋಸಲದೇಶದ ಅರಿಷ್ಟಪುರದ ಪದ್ಮರಥನೆಂಬ ಅರಸನು ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥನಾದುದರ ಚರಿತ್ರೆಯೇ ಅನಂತ ನಾಥ ಪುರಾಣದಲ್ಲಿದೆ. ಈ ಕಥೆಯನ್ನು ಜನ್ನನು ಗುಣಭದ್ರಾಚಾರ್ಯನ ಸಂಸ್ಕೃತ ಜೈನ ಉತ್ತರಪುರಾಣ ಹಾಗೂ ಚಾವುಂಡರಾಯನ ಕನ್ನಡ ಚಾವುಂಡರಾಯ ಪುರಾಣ ಇವುಗಳ ಆಧಾರದಿಂದ ಬರೆದಂತೆ ತಿಳಿಯುತ್ತದೆ. ಆದರೆ ಮೂಲದಲ್ಲಿ ಶುಷ್ಕವಾಗಿರುವ ಕಥೆಯನ್ನು 'ರಸವತ್ಕೃತಿ'ಯನ್ನಾಗಿ ಮಾಡಿದ ಶ್ರೇಯಸ್ಸು ಜನ್ನನಿಗಿದೆ. ಪುರಾಣಗಳ ಸಾಂಪ್ರದಾಯಿಕ ರೀತಿಯನ್ನು ಅನುಸರಿಸಿದ್ದರೂ,ಬೇರೆಯವರಿಂದ ಶುಷ್ಕವಾದ ಕಥೆಯನ್ನು ತೆಗೆದುಕೊಂಡಿದ್ದರೂ ಕೂಡ ಕಲ್ಪನೆಯ ಚಾತುರ್ಯದಿಂದ ಆ ಕಥೆಯಲ್ಲಿ ಸುಂದರ ಸನ್ನಿವೇಶಗಳನ್ನು ಕಲ್ಪಿಸಿ ಅದನ್ನು ರಸಿಕ ಮನೋಹಾರಿಯಾದ ಕಾವ್ಯವನ್ನಾಗಿ ಮಾರ್ಪಡಿಸಿದ್ದಾನೆ. ಆದರೆ ಕಾವ್ಯವು 'ಬಾಳಬಟ್ಟೆ ಪರಮಾಗಮು'ವೆಂದು ತಿಳಿದ ಜನ್ನನು ಕೇವಲ ಮನೋರಂಜನೆಯನ್ನಷ್ಟೇ ಸಾಧಿಸದೆ ಜೊತೆಗೆ 'ಜಿನಭಕ್ತಿಪ್ರೇರಕ' ವಾಗುವಂತೆ ಕಾವ್ಯವನ್ನು ರಚಿಸಿದ್ದಾನೆ. 'ಜೈನ ತತ್ವೋಪದೇಶ' 'ರಸಿಕ ಮನರಂಜನೆ' ಇವೆರಡನ್ನು ಜನ್ನನು ಸಾಧಿಸಿದ್ದಾನೆ. ಜನ್ನನ ಕೃತಿಗಳ ವಿಮರ್ಶೆಯು ಈ ಪ್ರಬಂಧದ ಉದ್ದೇಶವಲ್ಲವಾದುದರಿಂದ ಆತನ ಕಾವ್ಯಗಳ ವಿಶದವಾದ ಚರ್ಚೆಗೆ ಇಲ್ಲಿ ಅವಕಾಶವಿಲ್ಲವಾದರೂ ಮೈಸೂರ ವಿಶ್ವವಿದ್ಯಾ

ನಿಲಯದಿಂದ ಪ್ರಕಟವಾದ ಅನಂತನಾಥ ಪುರಾಣದ ವಿದ್ವಾನ್ ಸಂಪಾದಕರ ಅವತ
ರಣಿಕೆಯೊಂದನ್ನು ಇಲ್ಲಿ ಸೂಚಿಸಬಹುದು. " ಜನ್ನನು ನೀರಸವಾದ ಪುರಾಣಕಥೆ
ಯನ್ನೇ ನೂತನ ಸನ್ನಿವೇಶ ಸೃಷ್ಟಿಯಿಂದ ಪುಷ್ಟೀಕರಿಸಿ ಅನೇಕ ರಸಸ್ಥಾನಗಳನ್ನು
ಕಲ್ಪಿಸಿ ಆನಂದಗೊಳಿಸಿದ್ದಾನೆ. ಇಷ್ಟೇ ಅಲ್ಲ. ಇವನ ಶೈಲಿ, ಪದಲಾಲಿತ್ಯ,
ಪ್ರೌಢಬಂಧ, ಶಬ್ದಸೌಷ್ಠವ, ಅರ್ಥಗಾಂಭೀರ್ಯ, ವರ್ಣನಾವೈಖರಿ, ಅಲಂಕಾರ
ವೈಚಿತ್ರ್ಯ ಇವೆಲ್ಲವೂ ಸಹೃದಯರ ಹೃದಯವನ್ನು ಆಕರ್ಷಿಸತಕ್ಕವಾಗಿರುವುವು. "
ಇಷ್ಟಾಗಿಯೂ ಜನ್ನನು " ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆಚಿಯಲ್ಕೆ
ಪೇೞ್ದಪೆಂ ಚರಿತ ಪುರಾಣಮಂ" ಎಂದು ಹೇಳಿ ಕಾವ್ಯವನ್ನು ರಚಿಸಿದ್ದಾನೆ.
ವರ್ಣನೆಗಳಲ್ಲಿ ಜನ್ನನು ಔಚಿತ್ಯಜ್ಞಾನವನ್ನು ತೋರಿಸಿದ್ದಾನೆ. ತಾನಿಡುವ ಪದಗಳು
" ಪೊಳೆವ ಮುತ್ತಿನ ಬೆಳ್ದಿಂಗಳ ಸಿರಿಗೆ ಸರಿವರ್ಪುವು " ಎಂದು ಹೇಳಿದ್ದಾನೆ.

ಯಶೋಧರಚರಿತೆಯು ಕನ್ನಡದಲ್ಲಿ ಒಂದು ಅಪೂರ್ವವಾದ ಕಾವ್ಯ. ಇದನ್ನು
ವರ್ಣಕ ಪ್ರಬಂಧವೆಂದು ಹೇಳುತ್ತಾರೆ. ಈ ಕಾವ್ಯದಲ್ಲಿರುವ ಸಂಗ್ರಾಹಶಕ್ತಿ ಕಥನ
ಶೈಲಿ ಗಣನೀಯವಾಗಿವೆ. ವಿಪುಲವಾಗಿ, ವಿಶಾಲವಾಗಿ ಹೇಳಬಹುದಾದನ್ನೆಲ್ಲ ಕೇವಲ
ಸಂಕ್ಷಿಪ್ತವಾಗಿ ಸೂಚಿಸಿ ಕಥೆಯನ್ನು ಬಳೆಯಿಸಿಕೊಂಡು 'ಅಹಿಂಸೆಯೇ ಶ್ರೇಷ್ಠ
ಧರ್ಮ' ಎಂಬ ಜೈನ ತತ್ತ್ವವನ್ನು ವಿವೇಚಿಸಿದ್ದಾನೆ. ಯಶೋಧರ ಚರಿತ್ರೆಯ
ಕಾವ್ಯವಸ್ತುವನ್ನು

> ಅಭಯಕುಮಾರಂ ಮಾರಿದತ್ತಂಗೆ ಹಿಂಸಾ
> ರಭಸಮತಿಗೆ ಸೈಪಂ ಪೇೞ್ದು ಧರ್ಮಕ್ಕೆ ತಂದೀ
> ಶುಭಕಥನ..................................
> ..........................................

ಎಂಬ ಕವಿಯ ಮಾತಿನಿಂದಲೇ ಸೂಚಿಸಬಹುದು. 'ಭಾರತ ವರ್ಷದಯೋಧ್ಯಾಸು
ವಿಷಯದೊಳ್' ಇದ್ದ ರಾಜಪುರದ ಮಾರಿದತ್ತನೆಂಬ ನೃಪಾಲನು ಆ ಊರಿನ
ಚಂಡ ಮಾರಿದೇವತೆಯ ಜಾತ್ರೆಯ ಕಾಲಕ್ಕೆ ವಾಡಿಕೆಯಂತೆ ದೇವತೆಗೆ ಮನುಷ್ಯರ
ಬಲಿಯನ್ನು ಕೊಡಲಿಚ್ಛಿಸಿದನು. ಆಗ ಧರ್ಮಕರ್ಮಸಂಯೋಗದಿಂದ ಲಲಿತಾ
ಕಾರದ ಅಭಯರುಚಿ, ಅಭಯಮತಿಯರು ದೊರಕಲು ಅವರು ಅರಸನಿಗೆ ಅಹಿಂಸೆಯ
ಮಹತ್ತ್ವವನ್ನು ಬೋಧಿಸುವ ಯಶೋಧರನೆಂಬ ಉಜ್ಜಯನಿಯ ಅರಸನ ಕಥೆ
ಯನ್ನು ಹೇಳಿ ಮಾರಿದತ್ತನ ಮನವೊಲಿಸಿದುದೇ ಯಶೋಧರ ಚರಿತ್ರೆಯ ಕಥಾ
ವಸ್ತು. ಈ ಕಥಾವಸ್ತುವನ್ನು ಜನ್ನನು ಸಂಸ್ಕೃತದ ಮಹಾಕವಿ ವಾದಿರಾಜನ ಕಾವ್ಯ
ದಿಂದ ತೆಗೆದುಕೊಂಡಿರಬೇಕೆಂದು ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು
ಸೂಚಿಸಿ ಹೀಗೆ ಬರೆಯುತ್ತಾರೆ:—

" ಜನ್ನನು ಇದನ್ನೇ ಅನುಸರಿಸಿ ಈ ಕಾವ್ಯಕ್ಕಿಂತಲೂ ಇಮ್ಮಡಿ ಸೊಗಸಾದ ಒಂದು ಕಾವ್ಯರತ್ನವನ್ನು ನಿರ್ಮಿಸಿರುವನು. ಜನ್ನನ ಕವಿತಾಪುಜ್ಞೆಯು ವಾದಿರಾಜನ ಕವಿತಾಪುಜ್ಞೆಗಿಂತ ಎಷ್ಟೋ ಮೇಲಾದುದು........ವಾದಿರಾಜನ ಗ್ರಂಥದಲ್ಲಿ ಜನ್ನನ ಕಾವ್ಯದಲ್ಲಿರುವಷ್ಟು ಸರಳತೆಯಿಲ್ಲ; ಹೃದಯವನ್ನು ಸೇರುವ, ಕರಗಿಸುವ, ಒಲಿಸುವ, ತಿದ್ದುವ ಗುಣವಿಲ್ಲ" ಈ ಕಾವ್ಯದಲ್ಲಿ ಬರುವ ಅಮೃತಮತಿಯ ಪಾತ್ರ, ಅಮೃತಮತಿ ಅಷ್ಟಾವಂಕರ ಪ್ರಣಯ ಇವುಗಳು ಕೆಲವು ವಿಮರ್ಶಕರನ್ನು ಹೆಚ್ಚಾಗಿ ಆಕರ್ಷಿಸಿರುತ್ತವೆ.

' ಚರಿತ ಪುರಾಣ ' ದಲ್ಲಿ ಜೈನ ಪುರಾಣ ಲಕ್ಷಣಕ್ಕನುಸರಿಸಿ ರಾಜನಗರ, ಮತ್ತು ರಾಜರನ್ನು ಬಣ್ಣಿಸಿದ ಜನ್ನ ಕವಿಯೇ ಯಶೋಧರ ಚರಿತೆಯಲ್ಲಿ ಆದಷ್ಟು ಸಂಕ್ಷಿಪ್ತವಾಗಿ ವರ್ಣನೆಗಳನ್ನು ಕೊಟ್ಟಿದ್ದಾನೆಂಬುದು ಗಮನಾರ್ಹವಾದ ಸಂಗತಿಯಾಗಿದೆ. Rigorous exclusion of digression ಎಂಬ ಸಣ್ಣಕತೆಯ ಸೂತ್ರವನ್ನು ಜನ್ನನು ಇಲ್ಲಿ ಅನುಸರಿಸಿದ್ದಾನೆಂದು ಹೇಳಬಹುದು. ತನ್ನ ಮುಖ್ಯ ಉದ್ದೇಶಕ್ಕೆ ಉಪಯುಕ್ತವಾಗುವ ಕುಶಲವಾದ ರೀತಿಯನ್ನು ಅನುಸರಿಸಿ ಸ್ಫುಟವಾದ, ಸುಂದರವಾದ ಕಥೆಯೊಂದನ್ನು ಹೇಳಿದ್ದಾನೆ. ಅದರಲ್ಲಿಯ ಮಾತುಗಳು ವಿಶೇಷ ಮಾರ್ಮಿಕವಾಗಿವೆ. ಅಮೃತಮತಿಯು ವಿಕೃತಾಕಾರನಾದ ಅಷ್ಟಾವಂಕನನ್ನು ಮೋಹಿಸಿದ ಸಂದರ್ಭದಲ್ಲಿ ಕವಿಯು ಹೇಳಿದ,

> ಕರಿದಾದೊಡೆ ಕತ್ತುರಿಯಂ ।
> ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ॥
> ಸ್ಮರಚಾಪಮುನಿಱಿಕೆಯ್ವರೆ ।
> ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ॥

ಎಂಬ ಮಾರ್ಮಿಕ ಉಕ್ತಿಯನ್ನು ಉದಾಹರಿಸದೆ ಇರುವುದು ಸಾಧ್ಯವಿಲ್ಲ. ಜನ್ನನು ' ಹಿತಮಿತವಚನ 'ನು ಎಂಬ ಮಾತಿನ ನಿದರ್ಶನವು ಆತನ ಕಾವ್ಯಗಳನ್ನು ಅವಲೋಕಿಸುವಾಗ ಕಂಡು ಬರದೆ ಇರದು.

ಕವಿಕುಲಕ್ಕೆ ಸೇರಿದ, ಜೈನಧರ್ಮ ಕುಲದೀಪಕನಾದ, ಪುಣ್ಯಚರಿತನಾದ, 'ಉಭಯಕವಿ, ಸುಕವಿ, ಬಹುಶಾಸ್ತ್ರ ಪಂಡಿತ, ಕರ್ಣಾಟಕ ಕೃತಿಗೆ ಸೀಮಾಪುರುಷ' ನಾದ, ಕವಿ ಚಕ್ರವರ್ತಿಯಾದ ಜನ್ನ ' ಮಹಾಕವಿ 'ಯು ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ, ಉನ್ನತವಾದ ಸ್ಥಾನವನ್ನು ಪಡೆದಿದ್ದಾನೆಂದು ಮತ್ತೊಮ್ಮೆ ಹೇಳಿ ಈ ಕವಿಪರಿಚಯವನ್ನು ಮುಗಿಸುತ್ತೇನೆ.

# ಕವಿ ರಾಘವಾಂಕನ ಹೊಸ ಹಾದಿ

ರಸಜೀವ ಭಾವಪ್ರೌಢಲರ್ಥವವಯವ ಶಬ್ದ ।
ವಿಸರವೇ ಸುಡಿಯಲಂಕಾರವೇ ತೊಡಿಗೆಯು ತ ॥
ವೆ ಸುಲಕ್ಷಣವೇ ಲಕ್ಷಣ ವಿಮಳ ಪದನ್ಯಾಸ ನಡೆ ರೀತಿ ಸುಕುಮಾರತೆ ॥
ರಸಿಕತನ ಸುಳಿಸುಖಂ ನಿಳಯವಂತಪ್ಪಯೀ ।
ಪೊಸ ಕಾವ್ಯ ಕನ್ನಿಕೆಯ ಪಡೆದು ಪಂಪಾಂಬಿಕೆಯ ।
ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕನೇಂ ಕೃತಕೃತ್ಯನೋ ॥

'ನಡೆವರೆಡಹದೆ ಕುಳಿತರೆಡಹುವರೆ' ಎಂಬ ಧೀರತನದಿಂದ ಮುಂದುವರಿದು ಹೊಸ ಹಾದಿಯನ್ನು ಹಿಡಿದವನು ಕವಿ ರಾಘವಾಂಕನು. ಕನ್ನಡ ಕವಿಗಳೆಲ್ಲರೂ ಇಂತಹ ಧೀರತನವನ್ನು ತೋರಬಾರದಾಗಿತ್ತೇ ಎಂದು ಒಮ್ಮೊಮ್ಮೆ ಅನಿಸುತ್ತದೆ. ಹಾಗಾಗಿದ್ದರೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಒಂದೇ ಧ್ವನಿ, ಒಂದೇ ರೀತಿ, ಅದೇ ಸಾಂಪ್ರದಾಯ, ಅದೇ ಪಡಿಯಚ್ಚು ಎಂದು ಹೇಳಲಾಗುತ್ತಿರುವ ಆರೋಪಕ್ಕೆ ನಮ್ಮ ಸಾಹಿತ್ಯ ಗುರಿಯಾಗುತ್ತಿರಲಿಲ್ಲ. ಮುಂದೆ ನಡೆದ ರಾಘವಾಂಕನು ಎಡಹಿದನು ಎಂದು ಯಾರಾದಾರೂ ಅಂದು ಅಂದರೋ ಏನೋ? ಆದರೆ ಇಂದು ಮಾತ್ರ ನಾವು, ಆತನು ಮುಂದೆ ನಡೆದು ಹೊಸ ಹಾದಿಯನ್ನು ಹಾಕಿಕೊಟ್ಟನಲ್ಲ, ಎಂದು ಸಂತೋಷಪಡುತ್ತೇವೆ. ಕರ್ನಾಟಕ ಕವಿಚೂತವನಚೈತ್ರ ಲಕ್ಷ್ಮೀಶನ ಷಟ್ಪದಿಯ ಝೇಂಕಾರವು ನಮ್ಮ ಕಿವಿಯನ್ನೂ ಮನಸ್ಸನ್ನೂ ತಣಿಸುತ್ತಿದೆ. ಆದರೆ ಆ ಝೇಂಕಾರಕ್ಕೆ ಹಾದಿ ಹಾಕಿಕೊಟ್ಟವನು ಕವಿ ರಾಘವಾಂಕನೆಂದು ನೆನೆದಾಗ ಅಭಿಮಾನದಿಂದ ಮೈಯುಬ್ಬಿ ಆತನಿಗಾಗಿ ಗೌರವವು ತಲೆದೋರುತ್ತದೆ. ಷಟ್ಪದಿಯು ಕನ್ನಡದ ಸಂಜೀವಿನಿಯೆಂದಾದರೆ ಪರ್ವತದಲ್ಲಿ ಎಲ್ಲಿಯೋ ಅಡಗಿದ ಆ ಸಂಜೀವಿನಿಯನ್ನು ಹೊರದೆಗೆದ

ಯಕ್ಷನು ರಾಘವಾಂಕನೆಂದಾಗುತ್ತದೆ. ಆತನ ಕಾವ್ಯನಾಯಕನಾದ ಹರಿಶ್ಚಂದ್ರನಿಗೆ ಘನಸತ್ಯವೇ ಜೀವವಾಗಿದ್ದರೆ, ರಾಘವಾಂಕನ ಕಾವ್ಯಗಳಿಗೆ ರಸವೇ ಜೀವವಾಗಿದೆ. ಹರನೆಂಬುದೇ ಸತ್ಯ, ಸತ್ಯವೆಂಬುದು ಹರನೆಂದು ಶ್ರುತಿಯು ಸಾರುತ್ತಿದ್ದರೆ, ಹರಿಶ್ಚಂದ್ರನು ಆ ವಾಕ್ಯದ ನಿರುತವ ಮಾಡಿ ಮೂಜಗಕೆ ತೋರಿದನು; ರಾಘವಾಂಕನು ಅದನ್ನು ತನ್ನ ಕಾವ್ಯದಿ ನಿರುತವಮಾಡಿ ಕನ್ನಡಿಗರಿಗೆ ತೋರಿದನು. ಇಂತಹ ಕಾವ್ಯನಾಯಕನೂ ಧನ್ಯನು; ಕವಿಯೂ ಧನ್ಯನು; ರಾಘವಾಂಕನ ರಸಯಾತ್ರೆಯಾದ ಹರಿಶ್ಚಂದ್ರ ಕಾವ್ಯವನ್ನು ಓದುವ ಕನ್ನಡಿಗರೂ ಧನ್ಯರೇ ಸರಿ.

ಕವಿ ರಾಘವಾಂಕನು ಮುಂದೆ ನಡೆದು ಹೊಸ ಹಾದಿಯನ್ನು ಹಾಕಲು ತಕ್ಕ ಯೋಗ್ಯತೆಯನ್ನು ಗಳಿಸಿಕೊಂಡಿದ್ದನು. ಸೋದರಮಾವನೂ, ಗುರುವೂ ಆದ 'ಸತ್ಕವೀಶ್ವರ' ಹರಿಹರದೇವನ ಸ್ಫೂರ್ತಿಯೂ ಮಾರ್ಗದರ್ಶಿತ್ವವೂ ಈತನಿಗೆ ನೆರವಾದುವು. ಹೊಸ ಮಾರ್ಗದಲ್ಲಿ ನಡೆಯುವ ಕೆಚ್ಚೆದೆಯನ್ನಂತೂ ಇವನು ಆತನಿಂದಲೇ ಕಂಡುಕೊಂಡಿರಬೇಕು. ಜೊತೆಗೆ ಈತನಲ್ಲಿ ಅಂತಹ ಸಾಮರ್ಥ್ಯವೂ ಇತ್ತು. ಸ್ವಾಭಾವಿಕವಾದ ಕಾವ್ಯ ಪ್ರತಿಭೆಯೊಡನೆ ಉತ್ತಮ ಶಿಕ್ಷಣಸಂಸ್ಕಾರವೂ ಈತನಿಗೇ ದೊರೆತಿತ್ತು. ಸಿದ್ಧನಂಜೇಶನ ರಾಘವಾಂಕ ಚರಿತೆಯಲ್ಲಿ ರಾಘವಾಂಕನ ಹೆಗ್ಗಳಿಕೆ ಹೀಗೆ ಉಕ್ತವಾಗಿದೆ:—

> ಸಕ್ಕದದ ಕನ್ನಡದ ಭಾಷಾ ಲಸತ್ಕವಿ ।
> ತ್ವಕ್ಕೆ ತಾನಧಿಪತಿಯಲಂಕೃತಿಗಳಿಗೆ ನಾಟ ।
> ಕಕ್ಕೆ ವ್ಯಾಕರಣಕ್ಕೆ ಭಾಣಕ್ಕೆ ಪ್ರಹಸನಕೆ ನವರಸಗಳಿಗೆ ತನ್ನೊಳು ॥
> ಧಿಕ್ಕರಿಪ ಕವಿಯಿಲ್ಲದಿರೆ ನೋಡಿ ಮರ್ತ್ಯಲೋ ।
> ಕಕ್ಕಿವನೆ ಕವಿಶರಭಭೇರುಂಡನೆಂದು ಪೆಸ ।
> ರಿಕ್ಕಿ ಕರೆದರು ಕವಿನಿಕರವಾ ಹರೀಶ್ವರನ ಕೃಪೆಯೊದವನುಸುರಲಳವೆ ॥

ಸಕ್ಕದದ, ಕನ್ನಡದ ಭಾಷಾ ಲಸತ್ಕವಿತ್ವಕ್ಕೆ ರಾಘವಾಂಕನು ತಾನಧಿಪತಿಯೆಂಬುದನ್ನು ಆತನ ಕಾವ್ಯಗಳು ಸಾರಿ ಹೇಳುತ್ತವೆ. ನಾಟಕಕೆ, ಭಾಣಕೆ, ಪ್ರಹಸನಗಳಿಗೂ ಆತನು ಅಧಿಪತಿಯೆಂಬುದನ್ನು ನಾವು ಹರಿಶ್ಚಂದ್ರ ಕಾವ್ಯದಿಂದ ಗ್ರಹಿಸಬಹುದಾಗಿದೆ. ರನ್ನನ ಗದಾಯುದ್ಧವನ್ನು ನಾಟ್ಯರೂಪಕ್ಕೆ ತಿರುಗಿಸಿದಂತೆ ಹರಿಶ್ಚಂದ್ರ ಕಾವ್ಯವನ್ನೂ ರಾಘವಾಂಕನ ಶಬ್ದಗಳಲ್ಲಿಯೇ ನಾಟಕವನ್ನಾಗಿ ಮಾರ್ಪಡಿಸಬಹುದಾಗಿದೆ; ಇರಲಿ.

ಕವಿ ರಾಘವಾಂಕನು ಕನ್ನಡನಾಡಿನ ಬಗೆಗೆ ಉತ್ಕಟಾಭಿಮಾನವನ್ನೂ ತೋರಿದ್ದಾನೆ. ಆತನು ತನ್ನ ಕಾವ್ಯಗಳಲ್ಲಿ ತೋರಿದ ನುಡಿ ನಾಡುಗಳ ಪ್ರೇಮವು ಇಂದು

ನಮ್ಮ ಅಭಿಮಾನವನ್ನು ಜಾಗ್ರತಗೊಳಿಸುವುದಲ್ಲದೆ ನಮಗೆ ಆದರ್ಶವೂ ಆಗಬಹು ದಾಗಿದೆ. 'ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬ ನಮ್ಮ ಆದಿಕವಿಯ ಉತ್ಕಟ ದೇಶಾಭಿಮಾನವನ್ನು ಕೇಳಿದ್ದೆವು. ಈಗ ಕವಿ ರಾಘ ವಾಂಕನ ರೀತಿಯನ್ನು ನೋಡಬೇಕು. ಅಯೋಧ್ಯಾಪುರದರಸನಾದ ಹರಿಶ್ಚಂದ್ರನನ್ನು ಕವಿಯು ಬೇಟೆಯ ನಿಮಿತ್ತದಿಂದ ಕನ್ನಡನಾಡಿಗೇ ತರುತ್ತಾನೆ. ಹಾಗೂ ಒಂದು ಸಂದರ್ಭದಲ್ಲಿ ಆತನು ಉಪಮೆಗಳನ್ನು ಕೊಡುವಾಗ 'ಒಡಲನಾವರಿಸಿದ ಅಂಗೋ ಪಾಂಗ ಸಂಕುಳದ ನಡುವೆ ನಯನದ್ವಯಂಗಳು, ಸಲೆ ನವಗ್ರಹದ ನಡುವೆ ಚಂದ್ರಾ ದಿತ್ಯರ್, ಉರ್ವಿಯಂ ಪರ್ವಿ ಪಸರಿಸಿದ ನಾನಾನದಿಗಳ ನಡುವೆ ಸುರಚಿರ ಗಂಗೆತುಂಗ ಭದ್ರೆಗಳೊಪ್ಪವಡೆದು ಮಹಿಮೆಯೊಳೆಸೆವ ತೆರದಿ' ಎಂದು ಹೇಳಿದ್ದಾನೆ. ಇಲ್ಲಿ ಬರುವ ಉಪಮಾಲಂಕಾರದ ಕೌಶಲ್ಯವಂತಿರಲಿ,ಇಲ್ಲಿ ಸೂಚಿತವಾಗುವ ರಾಘವಾಂಕನ ತುಂಗ ಭದ್ರೆಯ ಅಭಿಮಾನವನ್ನು ಗಮನಿಸಬೇಕು. ಉರ್ವಿಯಂ ಪಸರಿಸಿದ ನಾನಾನದಿಗಳ ನಡುವೆ ಗಂಗೆ ತುಂಗಭದ್ರೆಗಳು ಮಾತ್ರ ಶ್ರೇಷ್ಠವಂತೆ. ಉತ್ತರದವರೂ ಅವರನ್ನು ಅನುಸರಿಸಿ ದಕ್ಷಿಣದವರೂ ಗಂಗೆಯು ಮಾತ್ರ ಪರಮಪಾವನಳೆಂದು ಹೇಳುತ್ತಿರು ವುದು ವಾಡಿಕೆಯಾಗಿದೆಯಷ್ಟೆ. ಆದರೆ ಕವಿ ರಾಘವಾಂಕನು ಗಂಗೆಯಷ್ಟೇ ನಮ್ಮ ನಾಡಿನ ತುಂಗಭದ್ರೆಯೂ ಪಾವನಳೆಂದು ಧೈರ್ಯದಿಂದ ಹೇಳುತ್ತಾನೆ. ಇಷ್ಟೇ ಅಲ್ಲ, ಪವಿತ್ರಳಾದ ತುಂಗಭದ್ರೆಯನ್ನು ಕವಿಯು ತನ್ನ ರಸಾಲವಾದ ವಾಣಿಯಲ್ಲಿ ಹೀಗೆ ಬಣ್ಣಿಸುತ್ತಾನೆ.

ಬಿಡದೊಮ್ಮೆ ಕಂಡ ಜೀವರ ಭವವ್ರಜದ ಬೆಂ ।
ಬಡಿಗೆ ಪಾತಕ ಕೋಟಿಯಾ ಕತ್ತಿ ದುಷ್ಕರ್ಮ ।
ದೆಡೆಗೊರಳ ಕತ್ತರಿ ಸಮಸ್ತರೋಗಂಗಳೆದೆಗೊಡ್ಡಿದಲಗಜ್ಞಾನದ ॥
ನಡುವಲೆಯ ಗರಗಸಂ ಮುಲೆವ ಮಾಯೆಯ ಬಸುಱ ।
ನೊಡೆಹೊಯ್ವ ಶೂಲವಿನ್ನುಳಿದ ದುರಿತವನುರುಹಿ ।
ಸುಡುವ ಕಿಚ್ಚೆಂದೆನಿಪ ತುಂಗಭದ್ರಾನದಿಯನವನೀಶ ನೋಡೆಂದನು ॥

ತುಂಗಭದ್ರೆಯ ಉದಕದ ಶೀತಲತೆಯು ಸುಪ್ರಸಿದ್ಧವಷ್ಟೇ. ಆದರೆ ಪಾವನಳಾದ ತುಂಗಭದ್ರೆಯು 'ದುರಿತವನುರುಹಿ ಸುಡುವ ಕಿಚ್ಚೆಂ'ದು ಕವಿಯು ಹೇಳುತ್ತಾನೆ. ಕನ್ನಡ ನಾಡಿನಲ್ಲಿ ಹರಿದ ನದಿಯ ವಿಷಯವಾಗಿ ತೋರುವ ಪ್ರೇಮಾಭಿಮಾನ ಗಳನ್ನೇ ಕವಿಯು ಕರ್ನಾಟಕದ ಪಂಪಾಕ್ಷೇತ್ರದ ವಿಚಾರದಲ್ಲಿಯೂ ತೋರಿಸು ತ್ತಾನೆ. ದಕ್ಷಿಣದ ತುಂಗಭದ್ರೆಯು ಉತ್ತರ ಭಾರತದ ಗಂಗೆಯಷ್ಟು ಪವಿತ್ರಳಾ ದರೆ ದಕ್ಷಿಣದಲ್ಲಿಯ ಪಂಪಾಕ್ಷೇತ್ರವು ಉತ್ತರದ ಕಾಶೀ ಕ್ಷೇತ್ರದಷ್ಟೇ ಪವಿತ್ರವೆಂದು ಕವಿಯು ಬಣ್ಣಿಸಿದ್ದಾನೆ. ಅದನ್ನು ಹರಿಶ್ಚಂದ್ರ ಕಾವ್ಯದಲ್ಲಿ ಹೀಗೆ ಹೊಗಳುತ್ತಾನೆ:–

ಪ್ರಳಯಕ್ಕೆ ಹೊರಗು ಕಲಿಕಾಲ ಹೊಗದಂತಕನ ।
ಸುಳಿವದಱಿಕೋಳಿಲ್ಲ ಕಾಮನ ಡಾವರಂ ಕೊಳ್ಳ ।
ದುಳಿದ ಮಾಯೆಯ ಮಾತು ಬೇಡ ಪಾಪಂಗಳಾಟಂ ನಾಟವನ್ಯಾಯದ ॥
ಕಳಿಗೆ ತೆಕ್ಕವು ಮಾರಿಮೃತ್ಯುಗಿತ್ಯುಗಳ ಬಲೆ ।
ಗೊಳಗಾಗದಧಿಕ ಪುಣ್ಯದ ಬೀಡು ಮಂಗಳದ ।
ನಿಳಯ ಮುಕ್ತಿಯ ಮೂಲವೆನಿಸುವವು ಕಾಶಿಪಂಪೆಗಳು ಮುನಿ
ಕೇಳೆಂದನು ॥

ಉತ್ತರದ ಗಂಗಾನದಿ, ಕಾಶೀಕ್ಷೇತ್ರಗಳಷ್ಟೇ ಪವಿತ್ರವಾದ ನದೀ ಕ್ಷೇತ್ರಗಳು ಕರ್ನಾಟಕದಲ್ಲಿಯೂ ಇವೆಯೆಂದು ಹೇಳಿದ ರಾಘವಾಂಕನ ದೆಸೆಯಿಂದಲಾದರೂ ನಮ್ಮವರಲ್ಲಿ ಒಮ್ಮೊಮ್ಮೆ ಕಂಡುಬರುವ ಉತ್ತರದ ಮೋಹ ಕಡಮೆಯಾಗುವುದೆಂದು ನಾವು ಆಶಿಸೋಣ. ಕವಿಯು ಪಂಪಾಕ್ಷೇತ್ರವನ್ನು, ಕ್ಷೇತ್ರದೊಡೆಯ ಪಂಪಾಪತಿಯನ್ನು ಹೀಗೆ ಬಣ್ಣಿಸಿದ್ದಾನೆ:

ನೆರೆದ ವೇದಂಗಳುಗ್ಗಡವುಪನಿಷತ್ತುಗಳ ।
ಗರಗಟಗೆಯಣಿಮಾದಿಗಳ ಬೊಬ್ಬೆ ಧರ್ಮದ ।
ಬ್ಬರ ಘನಜ್ಞಾನ ಪ್ರಭಾದೀಪ್ತಿಗಳು ಹರಿಬ್ರಹ್ಮಾದಿ ಸುರರ ಕಾಹು ॥
ಪುರುಷಾರ್ಥ ನಾಲ್ಕರೊಳು ಸಲುಗೆ ಪುಣ್ಯದ ಪುಂಡೆ ।
ಸಿರಿಸರಸ್ವತಿಯರೆಡೆಯಾಟವೆಸೆದಿರೆ ಜಗ ।
ದ್ಗುರು ವಿರೂಪಾಕ್ಷನಿಲ್ಲಿಯೆ ಸುಖದೊಳಿಪ್ಪ ಪಂಪಾಕ್ಷೇತ್ರವಿದೆಯೆಂದನು ॥

ಅಯೋಧ್ಯಾಪುರದ ಅರಸನಾದ ಹರಿಶ್ಚಂದ್ರನನ್ನು ಕನ್ನಡ ನಾಡಿಗೆ ತಂದು, ಮುಂದೆ ಸ್ವಲ್ಪ ದಿನಗಳಲ್ಲಿಯೇ ವಿದ್ಯಾರಣ್ಯ ಮುನಿವರರ ಕಾರ್ಯರಂಗಸ್ಥಳವಾಗಲಿರುವ, ಕನ್ನಡ ಸಾಮ್ರಾಜ್ಯದ ವಿಜಯಧ್ವಜವನ್ನು ಕಟ್ಟಬೇಕಾಗಿರುವ ಹಂಪೆಯನ್ನು ಕವಿ ರಾಘವಾಂಕನು ಈ ರೀತಿ ಬಣ್ಣಿಸುತ್ತಿರುವುದು ಅರ್ಥಪೂರ್ಣವಾಗಿದೆ. ರವಿ ಕಾಣದುದನು ಕವಿಕಾಣುವನು, ಎಂದು ರಾಘವಾಂಕನು ಒಂದು ಸಂದರ್ಭದಲ್ಲಿ[೧] ಹೇಳಿದ್ದು ಬರಲಿರುವ ಕನ್ನಡ ಸಾಮ್ರಾಜ್ಯವನ್ನು ಕುರಿತೋ ಏನೋ ಎಂದೆನಿಸುವಂತಿದೆ. ಸೋಮನಾಥ ಚರಿತ್ರೆಯಲ್ಲಿ ಕವಿಯು ತಿರುಳ್ಗನ್ನಡ ನಾಡಾದ ಪುಲಿಗೆರೆಯನ್ನು ಕುರಿತು ಅಭಿಮಾನದಿಂದ ಹಾಡಿದ್ದಾನೆ. 'ನಗರೇಷು ಕಾಂಚೀ' ಎಂಬ ಸುಭಾಷಿತವಿದ್ದರೂ ಕೂಡ ಅದನ್ನು ಬದಲು ಮಾಡಿ ಕವಿಯು 'ನಗರೇಷು ಪುಲಿಗೆರೆ' ಎಂದು ಹೇಳಿದಂತಿದೆ.

---

(೧) ಆದಿಶೆಟ್ಟಿ ಪುರಾಣದ ೨ನೆಯ ಸಂಧಿಯ ೧೫ನೆಯ ಪದ್ಯ (ಶಿವಾನುಭಾವ ಗ್ರಂಥ ಮಾಲಾ ನಂ. ೨೪)

ತೆಂಕನಾಡಿನೊಳಧಿಕ ಪಟ್ಟಣಂಗಳ ಪಲವ ।
ನಾಂ ಕಂಡೆನೆಲ್ಲಿಯಿಲ್ಲಿದು ಧರಾಂಗನೆಯ ಮುಖ ।
ಪಂಕೇಜಪಂತತಿ ಮನೋಹರಾಕಾರಮಿಂತಿದಕೆ ಸಮನಿನ್ನಾವುದು ॥
ಮುಂ ಕುಬೇರನ ರಾಜಧಾನಿಯುಳಕಾಪುರ ।
ಕ್ಕಂ ಕೆಲರು ನಗರೇಷು ಕಾಂಚಿಯೆನಿಪಂತದ ।
ಕ್ಕಂ ಕರಂ ಚೆಲುವೆಂದು ಹುಲಿಗೆರೆಯನಾದಯ್ಯ ನಿಂದು ನೋಡುತಿದ್ದನು ॥

ಪುರದೊಳಮರಾವತಿಯ ಸೊಬಗನಳಕಾಪುರದ ।
ಸಿರಿಯ ಮಧುರಾಪುರದ ಮಂಗಳವ ಶೋಣಿತಾ ।
ಪುರದ ದರ್ಪವನು ಲಂಕಾಪುರದ ಚುಶವ ಸಂಯಮನೀಪುರದ ರೌದ್ರವಾ॥
ಉರುಗೇಂಪ್ರಪುರದ ರಚನೆಯನೋಪಧಿಪ್ರಸ್ಥ ।
ಪುರದ ಬಳೆವಂ ಬಳಿದು ಹಿಳಿದು ಕರುವಂ ಕಟ್ಟಿ ।
ಸರಸಿಜದಕಂದನೀಪುರವ ನೆರೆದು ಮಾಡಿದನೆನಿಸಿತಂದಾ ದುರ್ಗವು॥

–ಹೀಗಿದೆ ರಾಘವಾಂಕನ ಕನ್ನಡ ನಾಡಿನ ಅಭಿಮಾನ. ಕನ್ನಡದ ಬಾವುಟವನ್ನು ಎತ್ತುತ್ತಿರುವ ಈ ಕಾಲದಲ್ಲಿ ರಾಘವಾಂಕನು ಈ ಅಭಿಮಾನವು ನಮಗೆ ನೆರವಾಗುವುದೆಂದು ನನ್ನ ನಂಬಿಗೆ. ಅಂತೆಯೆ ಈ ವಿಚಾರವನ್ನು ಕೊಂಚ ವಿಸ್ತರಿಸಿದೆ. ಇನ್ನು ಕವಿಯು ಕಾವ್ಯ ಪ್ರಪಂಚದಲ್ಲಿ ಹಾಕಿದ ಹೊಸ ಹಾದಿಯನ್ನು ಕೊಂಚ ಅವಲೋಕಿಸೋಣ. ಆ ಹೊಸ ಹಾದಿ ನಾಲ್ಕು ವಿಧವಾಗಿದೆಯೆಂದು ನನಗೆ ತೋರುತ್ತದೆ. ಅದು ಹೀಗೆ:

(೧) ಕಾವ್ಯೋದ್ದೇಶ-ಕಾವ್ಯವಸ್ತು
(೨) ಭಾಷೆ
(೩) ಛಂದಸ್ಸು
(೪) ನೀತಿ-ಧರ್ಮ

ಇವುಗಳನ್ನು ಒಂದೊಂದಾಗಿ ಸ್ವಲ್ಪ ವಿವರಿಸುವುದೇ ನನ್ನ ಉದ್ದೇಶ.

ಇದು ವರೆಗಿನ ಕಾವ್ಯಗಳಲ್ಲಿ ರಾಜರಾಣಿಯರಿಗೆ ಹೆಚ್ಚಿನ ಸ್ಥಾನವಿತ್ತು. ಹರಿಹರ ಹಾಗೂ ಆತನ ನಂತರದ ಕಾವ್ಯಗಳಲ್ಲಿ ದೇವ ಹಾಗೂ ಭಕ್ತರಿಗೆ ಹೆಚ್ಚಿನ ಸ್ಥಾನ ದೊರೆತಿದೆ. ಸಾಹಿತ್ಯ ಮಾರ್ಗದಲ್ಲಿಯ ಕಟ್ಟುಗಳನ್ನು ಮುರಿಯಲೆಂದು ಕಾವ್ಯ ಕನ್ನಿಕೆಯನ್ನು ಹೊಸ ರೀತಿಯಲ್ಲಿ ಪೋಷಿಸಲು ಹೋಗಿ ರಾಘವಾಂಕನು ಐದು ಹಲ್ಲುಗಳನ್ನು ಕಳೆದುಕೊಂಡನೆಂಬ ಕತೆಗೊಂದು ಉದ್ದೇಶವಿರಬೇಕು. ಆದರೆ ಯಾವ ಕಾವ್ಯಕ್ಕಾಗಿ ಹಲ್ಲು ಕಳೆದುಕೊಂಡನೆಂದು ಪ್ರತೀತಿಯಿದೆಯೋ ಅದೇ

ಕಾವ್ಯದಲ್ಲಿ ರಾಘವಾಂಕನು 'ಪೊಸಕಾವ್ಯ ಕನ್ನಿಕೆಯಂ ಪಡೆದು ಪಂಪಾಂಬಿಕೆಯ ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕನೇಂ ಕೃತಕೃತ್ಯನೋ' ಎಂದು ಹೇಳಿಕೊಂಡಿದ್ದಾನೆ. ಕಾವ್ಯ ಕನ್ನಿಕೆಯನ್ನು ಪಡೆದು ಮನುಜರಿಗಾಗಲಿ, ಅರಸರಿಗಾಗಲಿ ಅರ್ಪಿಸದೆ ಪಂಪಾಂಬಿಕೆಯರಸ ವಿರೂಪಾಕ್ಷಂಗೆ ಕೊಡುವಲ್ಲಿ ರಾಘವಾಂಕನು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಹಾದಿಯೊಂದನ್ನು ಹಾಕಿದನೆಂದೇ ಹೇಳಬೇಕು. ಇದಕ್ಕೆ ಹರಿಹರನ ಮಾರ್ಗದರ್ಶಿತ್ವವು ಕಾರಣವಾಗಿದೆ. ಮತ್ತು 'ಹಂಪೆಯರಸನ ಪೊಗಳ್ವ ನಾಲಗೆಯೊಳಗನ್ಯ ದೈವವ .... ಕೀರ್ತಿಸಿದೆನಾದೊಡೆ ಮನಸಿಜಾರಿಯ ಭಕ್ತನಲ್ಲ ತಾನೆನಿಪ' ಈತನ ಬಿರುದಿಗೆ 'ಮನುಜರ ಮೇಲೆ, ಸಾವವರ ಮೇಲೆ ಕನಿಷ್ಠರ ಮೇಲೆ' ಕಾವ್ಯ ರಚಿಸಬಾರದೆಂಬ ಹರಿಹರನ ಮಾರ್ಗದರ್ಶಿತ್ವವೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಇನ್ನು ಕಾವ್ಯೋದ್ದೇಶವನ್ನು ಕುರಿತು ರಾಘವಾಂಕನು ಕನ್ನಡಕ್ಕೊಂದು ಸೂತ್ರವನ್ನೇ ಕಾಣಿಕೆಯಾಗಿ ಕೊಟ್ಟಿದ್ದಾನೆ. ಆ ಸೂತ್ರವೆಂದರೆ 'ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರ' ಎಂಬುದು. ಕೀಟ್ಸ ಕವಿಯು ಆಂಗ್ಲ ಸಾಹಿತ್ಯಕ್ಕೆ Truth is beauty, Beauty is truth ಎಂಬ ಸೂತ್ರವನ್ನು ಕಾಣಿಕೆಯಾಗಿತ್ತು ಅಮರನಾದಂತೆ, ಕನ್ನಡ ಕಾವ್ಯ ಪ್ರಪಂಚಕ್ಕೆ ರಾಘವಾಂಕನು ಅಮರನಾಗಿದ್ದಾನೆ. ಈ ಸತ್ಯಸೂತ್ರಕ್ಕೆ ಕಲಶವಿಕ್ಕುವಂತೆ ಕವಿಯು ಹರಿಶ್ಚಂದ್ರನ ರಾಣಿ ತಾರಾಮತಿಯಿಂದ 'ಮಂತ್ರಿಗೆ, ಮಗಂಗೆ, ಎನಗೆ, ರಾಜ್ಯಕ್ಕೆ, ಚತುರಂಗಸೇನೆಗೆ, ಸಕಲ ಭಾಂಡಾರಕೆ, ನಗರಕ್ಕೆ, ಸರ್ವ ಪರಿವಾರಕ್ಕೆ, ತೇಜದೇಳ್ಗೆಗೆ, ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ, ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡಿದೆ' ನೆಂದು ಹೇಳಿಸಿದ್ದಾನೆ. ಹರಿಶ್ಚಂದ್ರನಿಗೆ ಆತನ ರಾಣಿ ಹೇಳುವ ಈ ಕೆಚ್ಚಿನ ನುಡಿಗಳಲ್ಲಿ ರಾಘವಾಂಕನ ಕಾವ್ಯೋದ್ದೇಶದ ಕೆಚ್ಚು ಅಡಕವಾಗಿದೆ.

ಇನ್ನು ಭಾಷೆಯ ದೃಷ್ಟಿಯಿಂದ ರಾಘವಾಂಕನು ಹಾಕಿದ ಹೊಸ ಹಾದಿಯನ್ನು ಕೊಂಚ ನಿರೀಕ್ಷಿಸೋಣ. ಕನ್ನಡ ಸಾಹಿತ್ಯದ ಆರಂಭಕಾಲದಲ್ಲಿ ಸಂಸ್ಕೃತದ ಚಂಪೂಗಳ ಪ್ರಭಾವ, ಬಾಣಭಟ್ಟನ ಗದ್ಯಕಾವ್ಯದ ಪ್ರಭಾವ ಹೆಚ್ಚಾಗಿದ್ದವು. ಅಲ್ಲದೆ ಗ್ರಾಮ್ಯವಾಗಿದ್ದ ಕನ್ನಡ ಭಾಷೆಯನ್ನು ಜೈನರು ಗ್ರಂಥಸ್ಥವನ್ನಾಗಿ ಮಾಡಿಕೊಳ್ಳುವಾಗ ಸಂಸ್ಕೃತದ ಮೆರುಗು ಕೊಡಬೇಕೆಂದು ಸಂಸ್ಕೃತ ಭಾಷೆಯ ಶಬ್ದಗಳನ್ನು ಬೆರೆಯಿಸಿ ಕನ್ನಡ ಕಾವ್ಯಗಳನ್ನು ಬರೆಯಹತ್ತಿದರು. ಕನ್ನಡ ಕಾವ್ಯವನಿತೆಗೆ ರತ್ನದಾಭರಣಗಳನ್ನು ತೊಡಿಸಬೇಕೆಂಬ ಹಂಬಲದಲ್ಲಿ ನಮ್ಮ ಕವಿಗಳು ಕನ್ನಡ ನುಡಿಗೆ ಸಂಸ್ಕೃತದ ಹೊನ್ನ ಶೃಂಖಲೆಗಳನ್ನಿಟ್ಟರು. ಕಾಲಕ್ರಮದಲ್ಲಿ ಈ ಸಂಸ್ಕೃತದ

ಭಾರ ಹೆಚ್ಚಾಯಿತೆಂದು ತೋರಿದಾಗ ಇದನ್ನು ಪ್ರತಿಭಟಿಸುವ ಕವಿಗಳು ಹುಟ್ಟಿದರು. ಹನ್ನೆರಡನೆಯ ಶತಮಾನದ ನಯಸೇನನು ಇಂತಹರಲ್ಲಿ ಮುಖ್ಯನು. ಸಕ್ಕದಮಂ ಬೆರೆಯಿಸದೆ ಕನ್ನಡದಲ್ಲಿಯೇ ಕಾವ್ಯ ಬರೆಯುವೆನೆಂದು ಧೀರ ಪ್ರತಿಜ್ಞೆಮಾಡಿ ಹೊರಟ ಆಂಡಯ್ಯನು ಈ ಮಾರ್ಗದ ಸೀಮಾ ಪುರುಷನು. ಕನ್ನಡದ ಒಳ್ಪಿನ ನುಡಿಯಲ್ಲಿಯೇ, ಅಚ್ಚಗನ್ನಡದಲ್ಲಿಯೇ ಕಾವ್ಯ ಬರೆಯಬೇಕೆಂಬ ಆತನ ಪ್ರತಿಜ್ಞೆಗೆ ಆ ಮಾರ್ಗದಲ್ಲಿ ಕೆಲವು ದೃಷ್ಟಿಯಿಂದ ಪ್ರಯೋಗಗಳನ್ನು ಮಾಡಿ ನೋಡಿ ಪೂರ್ವ ಸೂಚನೆಯನ್ನು ಕೊಟ್ಟವನು ಕವಿ ರಾಘವಾಂಕನೆಂದು ನನಗೆ ತೋರುತ್ತದೆ. ಏಕೆಂದರೆ ಕವಿಶರಭಭೇರುಂಡನಾದ ರಾಘವಾಂಕನು ಹಂಪೆಯ ವಿದ್ಯಾಲಯದಲ್ಲಿ 'ಸಕ್ಕದದ ಕನ್ನಡದ ಭಾಷಾ ಲಸತ್ಕವಿತ್ವ'ವನ್ನು ಕಲಿತನು. ಉಭಯಭಾಷಾವಿಶಾರದನಾದ ಈತನು 'ಸಗರ್ವ ಗೀರ್ವಾಣ ಭಾಷೆಯ ಘೋಷಣೆ'ಗೆ ತನ್ನ ಕಾವ್ಯಗಳಲ್ಲಿ ಎಡೆಗೊಟ್ಟಿದ್ದರೂ ಕೂಡ ಕೆಲವು ಸಂದರ್ಭಗಳಲ್ಲಿ ತಿಳಿಗನ್ನಡ ಶಬ್ದಗಳ ಸೊಗಸನ್ನು ಸೂರೆ ಮಾಡಿದ್ದಾನೆ. ಹರಿಶ್ಚಂದ್ರನನ್ನು 'ಸತ್ಯಸಂಧ' ಎಂದು ಬಾಯಿತುಂಬ ಹೇಳಿ ಸಗರ್ವ ಗೀರ್ವಾಣ ಭಾಷೆಯ ಘೋಷಣೆಯನ್ನು ಹೆಚ್ಚಿಸಬಹುದಾಗಿದ್ದರೂ ಈತನು 'ನನ್ನಿಕಾರ' ಎಂಬ ತಿಳಿಗನ್ನಡದ ಸವಿನುಡಿಯ ವಿಶೇಷಣವನ್ನು ಉಪಯೋಗಿಸಿದ್ದಾನೆ. ಅದರಂತೆ, 'ಹುಸಿಯ ಹೊಲೆ ಹೊಟಿಕಾರ' ಎಂಬ ಶಬ್ದಪ್ರಯೋಗ ಮಾಡಿದ್ದಾನೆ. 'ಕಂಬನಿ ವೊನಲು' 'ತೇಂಕುದಾಣ' ಮುಂತಾದ ಶಬ್ದಗಳಲ್ಲಿಯ ಅಚ್ಚಗನ್ನಡದ ಸವಿಯನ್ನು ಸವಿದು ನೋಡಬೇಕು. ಇದಲ್ಲದೆ 'ಸುಟ್ಟು ಬೊಟ್ಟಿಡುವೆ' 'ಕೋಡಕೊಜಿಯದೆ ಬಿಡೆ', 'ನಿಟ್ಟೆಲುವ ಮುರಿವೆ' ಎಂಬ ಪ್ರಯೋಗಗಳಲ್ಲಿಯ ಅಚ್ಚಗನ್ನಡತನವನ್ನೂ ಅವಲೋಕಿಸಬೇಕು. ಮತ್ತು ಕೆಲವು ಪದ್ಯಗಳಲ್ಲಿ ಉಪಯೋಗಿಸಲ್ಪಟ್ಟ ತಿಳಿಗನ್ನಡ ಶಬ್ದಸಮೂಹವು ಲಕ್ಷ್ಯಾರ್ಹವಾಗಿದೆ. ಉದಾಹರಣೆಗೆಂದು:

ಬಿತ್ತಿಲ್ಲ, ಬೆಳೆಯಿಲ್ಲ, ನೀರಿಲ್ಲ, ಹದುಳವಿರಲಿಲ್ಲ.
ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವು.
ಬಾಯಿ ಬೆಂದು ಬಿರಿದು, ಅರಳುತ್ತ, ಸಾಯುತ್ತ, ನೋಯುತ್ತ, ನಿಂದು, ನಡೆದು, ಅಳಕುತ್ತ, ಬಳಕುತ್ತ, ಕಡು ಹಸಿದು, ಕಸುಗಾಯನಗಿದ ಗಿಳಿಗಳ ಬಳಗದಂತೆ.

ಇತ್ಯಾದಿ ಮಾತುಗಳನ್ನು ನೋಡಬೇಕು. ರಾಘವಾಂಕನು ನಾಣ್ಣುಡಿಗಳನ್ನು ವಿಪುಲವಾಗಿ ಉಪಯೋಗಿಸಿದ್ದಾನೆ:

ಮೆಣಸು ಹುಳಿತಡೆ ಜೋಳದಿಂ ಕುಂದೇ.
ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ.
ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು.
ಹೇಱಿಸೊಪ್ಪಿಸಿದಂಗೆಲ್ಲಿಯದು ಸುಂಕ.
ಹೆತ್ತ ತಾಯಂ ಮಾರಿ ತೊತ್ತ ಕೊಂಬರೇ.
ಮೂಗನಿತ್ತು ಕನ್ನಡಿಯ ನೋಡುವರೇ.

ಈ ನಾಣ್ಣುಡಿಗಳಲ್ಲಿ ಅಚ್ಚಗನ್ನಡತನವನ್ನು ನಾವು ಕಾಣುತ್ತೇವೆ. ಕನ್ನಡ ಜನಪದದಲ್ಲಿ ವಾಡಿಕೆಯಾಗಿರುವ ಮಾತುಗಾರಿಕೆಯನ್ನು ಬಳಸಲು ರಾಘವಾಂಕನಿಗೆ ಹೆಚ್ಚಾದ ಪ್ರೀತಿಯೆಂದು ಕಂಡುಬರುತ್ತದೆ. ಆಂಡಯ್ಯ ಕವಿಯು ಹೆಸರುಗಳನ್ನು ಹೇಳುವಾಗಲೂ ಸಂಸ್ಕೃತ ಶಬ್ದಗಳನ್ನು ಉಪಯೋಗಿಸದೆ ಅಚ್ಚಗನ್ನಡ ಶಬ್ದಗಳನ್ನು ಬಳಸಿದ್ದಾನೆ. ಇಂದ್ರುನನ್ನು ಇಂದ್ರುನೆಂದು ಕರೆಯದೆ ಆಂಡಯ್ಯನು 'ಪಲಗಣ್ಣ'ನೆಂದು ಕರೆದಿದ್ದಾನೆ. ಆದರೆ ರಾಘವಾಂಕನು ಅವನಿಗಿಂತ ಮೊದಲೇ ಹರಿಶ್ಚಂದ್ರ ಕಾವ್ಯದಲ್ಲಿ ಇಂದ್ರುನಿಗೆ 'ಹಲವುಕಣ್ಣಾದವಂ' ಎಂಬ ಹೆಸರನ್ನು ಕೊಟ್ಟಿದ್ದಾನೆ. ಇದಲ್ಲದೆ ರಾಘವಾಂಕನು ಅಮರೇಂದ್ರುನೆಂಬ ಹೆಸರನ್ನು ಉಪಯೋಗಿಸದೆ ಕೊಂಚ ಲಂಬಾಯಮಾನವೆಂದು ತೋರಬಹುದಾದರೂ ಅಚ್ಚಗನ್ನಡದ್ದಾದ 'ಸಾವನೀಡಾಡಿದವರೊಡೆಯ' ಎಂಬ ಪ್ರಯೋಗವನ್ನು ಕೊಟ್ಟಿದ್ದಾನೆ. ಇನ್ನೊಂದು ಸಂದರ್ಭದಲ್ಲಿ 'ಗರಳಗೊರಳ' 'ಅರಳಸರಳ' ಎಂಬ ಅಚ್ಚಗನ್ನಡ ಹೆಸರುಗಳಿಂದ ಶಿವ, ಕಾಮರನ್ನು ಕರೆದಿದ್ದಾನೆ. ಈ ಮಾತುಗಳನ್ನು ಲಕ್ಷಕ್ಕೆ ತಂದುಕೊಂಡಾಗ ರಾಘವಾಂಕನು ಆಂಡಯ್ಯನಿಗೆ ಸ್ಫೂರ್ತಿ ಕೊಟ್ಟಿರಬೇಕೆಂದು ತಿಳಿಯುವಂತಿದೆ. ಇದಲ್ಲದೆ ಪಂಡಿತರಿಗಾಗಿ, ವೈಯಾಕರಣಿಗಳಿಗಾಗಿ ಮಾತ್ರು ಇದ್ದ ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರ ಸಲುವಾಗಿ ಬರೆಯಲು ಹೊರಟ ವೀರಶೈವ ಕವಿಗಳಲ್ಲಿ (ವಚನಕಾರರನ್ನುಳಿದು) ಎರಡನೆಯವನಾದ ರಾಘವಾಂಕನು ಕೆಲವು ಹೊಸ ಪ್ರುಯೋಗಗಳನ್ನು ಕೊಟ್ಟಿದ್ದಾನೆ. ವ್ಯಂಜನಾಂತ ಶಬ್ದಗಳು ಸ್ವರಾಂತಗಳಾಗಿವೆ. ಕಲು, ಹಲು, ಕಣ್ಣಲಿ ಮುಂತಾದ ಸರಳಾಕ್ಷರ ಪ್ರುಯೋಗಗಳನ್ನು ಪ್ರುಯೋಗಿಸಿ ರಾಘವಾಂಕನು ಹೊಸಗನ್ನಡಕ್ಕೆ ಹಾದಿಮಾಡಿಕೊಟ್ಟಿರುವದಲ್ಲದೆ ಭಾಷಾವಿಷಯದಲ್ಲಿ ಸ್ವಾತಂತ್ರ್ಯ ವಹಿಸಿ ಹೊಸ ಹಾದಿಯನ್ನು ಹಾಕಿಕೊಟ್ಟಿದ್ದಾನೆ. ಮತ್ತು ಕಪ್ಪಕಪ್ಪನೆ, ತಣ್ಣತಣ್ಣನೆ, ಮೆಲ್ಲಮೆಲ್ಲನೆ, ನೊಪ್ಪನೊಪ್ಪನೆ, ಬೆಚ್ಚಬೆಚ್ಚನೆ, ಮಿಡುಮಿಡನೆ – ಇತ್ಯಾದಿ ಕ್ರಿಯಾವಿಶೇಷಣಗಳ ಉಪಯೋಗದಿಂದ ಹಾಗು ಸತ್ಯ-ಗಿತ್ಯ, ದೂತರು-ಗೀತರು, ಬೋಧೆ-ಗೀಧೆ, ಎಂಬ ದ್ವಿರುಕ್ತಿ ಪ್ರುಯೋಗಗಳ ಮೂಲಕ ಕನ್ನಡ ಭಾಷೆಯ ಶಕ್ತಿಯನ್ನು ಸೂಚಿಸಿದ್ದಾನೆ.

ಜಱಿದಪಾ, ಆಳಾದಪಾ ಇತ್ಯಾದಿ ಜನಸಾಮಾನ್ಯರ ಸಂಭಾಷಣೆಯ ಪ್ರಯೋಗ ಗಳನ್ನು ರಾಘವಾಂಕನು ತನ್ನ ಕಾವ್ಯದಲ್ಲಿ ಸ್ವಚ್ಛಂದವಾಗಿ ಉಪಯೋಗಿಸಿದ್ದಾನೆ. ಇದೇ ಶತಮಾನದಲ್ಲಿ[೧] ಮುಂದೆ ಬಂದ ಕೇಶಿರಾಜನು ಸ್ವರಾಂತ ಶಬ್ದಗಳನ್ನು ಹಳೆ ಗನ್ನಡ ವ್ಯಾಕರಣಕ್ಕೆ ಸಲ್ಲದ ಇನ್ನಿತರ ಪ್ರಯೋಗಗಳನ್ನು ಉಪಯೋಗಿಸುವವ ರನ್ನು 'ಗ್ರಾಮ್ಯ'ರೆಂದು ಕರೆದಿದ್ದಾನೆ. ಬಹುಶಃ ವೈಯಾಕರಣಿ ಕೇಶಿರಾಜನ ದೃಷ್ಟಿ ಯಲ್ಲಿ ರಾಘವಾಂಕನು 'ಗ್ರಾಮ್ಯ'ನೂ ಆಗಬಹುದು. ಆದರೆ ಇಂದಿನ ಕನ್ನಡ ಭಾಷಾ ಸಾಹಿತ್ಯ ಪ್ರೇಮಿಗಳಿಗೆ ರಾಘವಾಂಕನು ಪ್ರೇಮದ ಪುತ್ಥಳಿಯಾಗಿ ಉಳಿದಿದ್ದಾನೆ. ರಾಘವಾಂಕನು ಉಪಯೋಗಿಸಿದ ಅಚ್ಚಗನ್ನಡದ ಅನೇಕ ನಾಣ್ಣುಡಿಗಳು, ಸುಭಾಷಿ ತಗಳು ಆತನ ಹಿಡಿನುಡಿ, ಪಡಿನುಡಿಗಳು ಆತನ ಉಪಮೆಗಳಲ್ಲಿ ಕಂಡುಬರುವ ಕನ್ನಡ ಜನಜೀವನದ ಶಬ್ದಪ್ರಯೋಗಗಳು— ಇವೆಲ್ಲವುಗಳಿಂದ ನಾವು ರಾಘ ವಾಂಕನಲ್ಲಿ ಕನ್ನಡ ಕಾವ್ಯದ ಹೊಸ ಹಾದಿಯನ್ನು ಗುರುತಿಸುತ್ತೇವೆ.

ಭಾಷೆಯ ವಿಷಯದಲ್ಲಿ ರಾಘವಾಂಕನು ಮುಂದೆ ನಡೆದಂತೆ ಛಂದಸ್ಸಿನ ವಿಷಯದಲ್ಲಿಯೂ ಆತನು ಮುಂದೆ ನಡೆದಿದ್ದಾನೆ. ಱಳಕುಳ ವಿಚಾರವನ್ನು ತೆಗೆದು ಹಾಕಿ ರಗಳೆಯಲ್ಲಿ ಕಾವ್ಯ ಬರೆದು ಮಾವನು ಎರಡು ಹೆಜ್ಜೆ ಮುಂದೆ ನಡೆದರೆ ಆವನ ಅಳಿಯನು ಇನ್ನೂ ನಾಲ್ಕು ಹೆಜ್ಜೆ ಮುಂದುವರಿದಿದ್ದಾನೆ. ರಗಳೆಯಲ್ಲಿ ಆವೇಶವಿದೆ. ಕಥಾನಕದ ಅನುಕೂಲತೆಯಂತೆ ಅವಿರಳವಾಗಿ ಸುರಿಯುವ ವರ್ಷಾಧಾರೆಯಂತಹ ಶಬ್ದಪ್ರವಾಹವಿದೆ. ಆದರೆ ಅದರಲ್ಲಿ ಷಟ್ಪದಿಯ ಝೇಂಕಾರ ಇಂಚರಗಳಿಲ್ಲ. ಕನ್ನಡ ಕಾವ್ಯಗಳಿಗೆ ಈ ಝೇಂಕಾರ ಇಂಚರಗಳು ಬರಲು ಕಾರಣನಾದವನು ಹೊಸ ಹಾದಿಯ ರಾಘವಾಂಕ ಕವಿಯು. ಆವನು ಹಾಕಿದ ಹಾದಿಯನ್ನೇ ಮುಂದೆ ಬಂದ ಅನೇಕ ಕವಿಗಳು ತುಳಿದದ್ದರಿಂದ ಕನ್ನಡವು 'ಸುಲಿದ ಬಾಳೆಯ ಹಣ್ಣಿನಂದದಿ' ಸುಲಭವಾಯಿತು. ರಂಗನ ಮುರಲಿಯ ಸರದಂತೆ ಕರ್ಣಮಧುರವಾಯಿತು. ಷಟ್ಪ ದಿಯು ಕನ್ನಡ ಕಾವ್ಯದ ಜೀವಾಳವಾಯಿತು. ಕನ್ನಡ ಕಾವ್ಯ ಪ್ರಚಾರವು ಸಾಮಾನ್ಯ ಜನತೆಯಲ್ಲಿ ಹಬ್ಬಲು ಅನುವು ದೊರೆತುದರಿಂದ ಕನ್ನಡವು ಉಳಿಯಲು, ಬೆಳೆಯಲು ಅನುಕೂಲವಾಯಿತು. ನಾಗವರ್ಮನು ತನ್ನ ಲಕ್ಷಣ ಕಾವ್ಯದಲ್ಲಿ ಒಂದು ಷಟ್ಪದಿಯ ವ್ಯಾಖ್ಯೆಯ ಸೂಚನೆಯನ್ನಿತ್ತಿರಬಹುದು. ಚಂದ್ರರಾಜನ ಮದನ ತಿಲಕದಲ್ಲಿಯ ವೃತ್ತಗಳ ಕಸರತ್ತಿನಲ್ಲಿ ಷಟ್ಪದಿಯು ಅಡಕವಾಗಿರಬಹುದು. ಪೋಲಾಳ್ವದಂಡನಾಥನು ಹರಿಚಾರಿತ್ರವನ್ನು ಷಟ್ಪದಿಯ ಛಂದಸ್ಸಿನಲ್ಲಿ ಬರೆದನೆಂಬ ಊಹೆ ಒಂದು ವೇಳೆ ನಿಜವೂ ಆಗಿರಬಹುದು. ಆದರೆ ನಾನು ಈ ಮೊದಲೇ

೧. ರಾಘವಾಂಕನು ೧೩ನೆಯ ಶತಮಾನದ ಆದಿ ಭಾಗದಲ್ಲಿದ್ದನೆಂದು ನನ್ನ ಅಭಿಪ್ರಾಯ.

ಸೂಚಿಸಿದಂತೆ ಈ ಮೇಲಿನ ಕವಿಗಳ ಕೃತಿಗಳೆಂಬ ಪರ್ವತದ ಹುಲ್ಲಿನಲ್ಲಿಯೇ ಅಡಗಿ ಕುಳಿತ ಕನ್ನಡದ ಜೀವಾಳವಾದ ಷಟ್ಪದಿಯನ್ನು-ವಾರ್ಧಿಕ ಷಟ್ಪದಿಯನ್ನು-ಹುಡುಕಿ ತೆಗೆದ ಯಕ್ಷನೆಂದರೆ ಕವಿರಾಘವಾಂಕನೇ ಎಂಬ ಮಾತು ನಿರ್ವಿವಾದವಾಗಿದೆ. ತನ್ನ ಗುರುವೂ ಮಾವನೂ ಆದ ಹರಿಹರದೇವನು ಪ್ರೀತಿಯಿಂದ ಉಪಯೋಗಿಸಿದ ರಗಳೆಯನ್ನೇ ಸ್ವಲ್ಪ ಮುಂದುವರಿಸಿ ರಾಘವಾಂಕನು ವಾರ್ಧಿಕ ಷಟ್ಪದಿಯನ್ನು ಕನ್ನಡಕ್ಕೆ ಕೊಟ್ಟನೆಂಬ ಮಾತು ಅಷ್ಟೇ ಸ್ಪಷ್ಟವಾಗಿದೆ. ರಾಘವಾಂಕನ,

> ಸುರನರೋರಗ ನಮಿತ ಚರಣ ಜಯ ಜಯ ದಯಾ ।
> ಭರಣ ಜಯ ಜಯ ಕೃಪಾವರಣ ಜಯ ಜಯ ಶಾಂತಿ ।
> ಕಿರಣ ಜಯ ಜಯ ವಿಗತ ಮರಣ ಜಯ ಜಯ ದುರಿತ
> ಹರಣ ಜಯ ಜಯತು ಜಯತು ॥
>
> ಗುರುವೆ ಕುಲಗುರುವೆ ಘನಗುರುವೆ ಪರಗುರುವೆ ಮ ।
> ದ್ಗುರುವೆ ಸದ್ಗುರುವೆ ಶರಣಾಗು ಶರಣಾಗೆಂದು ।
> ಧರಣಿಪತಿ ಹರಹಿದನು ನಿಜತನುವನಾ ಮುನಿಯ
> ಚರಣ ಸರಸಿಜದೆಡೆಯೊಳು ॥

ಇಂತಹ ಪದ್ಯಗಳಲ್ಲಿ ರಗಳೆಯು ಷಟ್ಪದಿಗೆ ತಿರುಗುತ್ತಿರುವುದನ್ನು ನಾವು ಕಾಣುತ್ತೇವೆ. ರಗಳೆಯ ಉಪಯೋಗವನ್ನು ಕೂಡ ಸರಿಯಾಗಿ ಅರಿತು ಕೊಂಡಿದ್ದ ರಾಘವಾಂಕನು ತನ್ನ ಕಾವ್ಯವು 'ಕಣ್ಣೀರಿನ ಕಾಲುವೆ' ಯಾಗ ಬೇಕಾಗಿರುವ ಸಂದರ್ಭದಲ್ಲಿ (ಚಂದ್ರಮತಿಯ ವಿಲಾಪದ ಕಾಲಕ್ಕೆ) ರಗಳೆಯನ್ನೇ ಉಪಯೋಗಿಸಿಕೊಂಡಿದ್ದಾನೆ. ರಾಘವಾಂಕನ ಶಬ್ದಪ್ರಯೋಗದಲ್ಲಿಯೂ ರಗಳೆ ಗಳಲ್ಲಿಯ ಶಬ್ದಪ್ರಯೋಗದ ಪ್ರಭಾವವು ಎದ್ದು ಕಾಣುತ್ತಿದೆ. ತನ್ನ ಸ್ಫೂರ್ತಿ ಮಾರ್ಗದರ್ಶಿತ್ವಗಳನ್ನು ಇನ್ನೂ ಮುಂದುವರಿಸಿ ಹೊಸ ಹಾದಿಯನ್ನು ಹಿಡಿದ ರಾಘವಾಂಕನಂತಹ ಶಿಷ್ಯನನ್ನು ಪಡೆದ ಹರಿಹರನೂ ಧನ್ಯನೇ ಸರಿ. ಆದಿಪಂಪ-ರನ್ನ, ಹರಿಹರ-ರಾಘವಾಂಕರಂತಹ ಗುರುಶಿಷ್ಯರ ಜೋಡಿಯು ಕನ್ನಡಕ್ಕೆ ಕಳೆ ಗೊಟ್ಟಿದೆ. ರಾಘವಾಂಕನಂತೂ ಸ್ಪಷ್ಟವಾದ ಶಬ್ದಗಳಲ್ಲಿ ಹರಿಹರನಿಗೆ ಗುರುಕಾಣಿಕೆ ಯನ್ನು ಸಲ್ಲಿಸಿದ್ದಾನೆ. ಈ ಷಟ್ಪದಿಯ ಬೆಳವಣಿಗೆಯು ಕನ್ನಡದಲ್ಲಿ ಹಾಡುಗಬ್ಬಗಳ ಪ್ರಸಾರಕ್ಕೆ ಕಾರಣವಾಯಿತು. ಮಠ ಮಠಗಳಲ್ಲಿಯ ಪುರಾಣ ಪ್ರವಚನೆಗೆ ಹಾದಿ ಮಾಡಿಕೊಟ್ಟಿತು. ಷಟ್ಪದಿಯ ಪುರಾಣಗಳಿಗೆ ರಾಘವಾಂಕನೇ ಮೊದಲಿಗನಾಗಿ ಪರಿಣಮಿಸಿ ಕನ್ನಡ ಕಾವ್ಯ ಪ್ರಪಂಚದಲ್ಲಿ ಅಜರಾಮರವಾದ ಕೀರ್ತಿಯನ್ನು ಗಳಿಸಿ ಕೊಂಡಿದ್ದಾನೆ.

ಕವಿ ರಾಘವಾಂಕನ ಇನ್ನೊಂದು ಹೊಸ ಹಾದಿಯು ಆತನ ನೀತಿ ನಿರೂಪಣ ದಲ್ಲಿದೆಯೆಂದು ನನಗೆ ಅನಿಸುತ್ತದೆ. ಹನ್ನೆರಡನೆಯ ಶತಮಾನದ ಶಿವಶರಣರು ಬೋಧಿಸಿದ, ಸಾಧಿಸಿದ ಧರ್ಮವನ್ನು, ನೀತಿಯನ್ನು ಪುರಾಣಕ್ಕೆ ಕಾವ್ಯಕ್ಕೆ ತಿರುಗಿಸಿದ ಮೊದಲಿಗನು ರಾಘವಾಂಕನೇ ಸರಿ. (ಹರಿಹರನ ರಗಳೆಗಳದೊಂದು ಹಾದಿ ಬೇರೆ.) 'ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರನೊಂದೇ ಎಂಬೆ' ಎಂಬ ವಚನಗಳಲ್ಲಿಯ ಉಚ್ಚ ತತ್ತ್ವವನ್ನು, 'ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ' ಎಂಬ ನೀತಿ ತತ್ತ್ವವನ್ನು ರಾಘವಾಂಕನು ತನ್ನ ಅಮರ ಕೃತಿಯಾದ ಹರಿಶ್ಚಂದ್ರ ಕಾವ್ಯದಲ್ಲಿ ಕಾವ್ಯದ ಮುದ್ರೆಯನ್ನೊತ್ತಿ ಎತ್ತಿ ನಿಲ್ಲಿಸಿದ್ದಾನೆ. ಹರಿಶ್ಚಂದ್ರ ಕಾವ್ಯದಲ್ಲಿ 'ಅತಿ ಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನುನ್ನತ ಯತಿವರನು, ಹುಸಿದು ಮಾಡುವ ಯಜ್ಞಶತವೆಯ್ದೆ ಪಂಚ ಪಾತಕ, ಸತ್ಯವೆರಸಿದ ನ್ಯಾಯವದು ಲಿಂಗಾರ್ಚನೆ'— ಎಂದು ಉದ್ಘೋಷಿಸಿ ಸುಂದರ ಕಥೆಯ ಮೂಲಕವಾಗಿ ಆ ತತ್ತ್ವವನ್ನು ಚಿತ್ರಿಸಿ ತತ್ತ್ವದಿಂದ ಕಾವ್ಯಕ್ಕೆ, ಕಾವ್ಯದಿಂದ ತತ್ತ್ವಕ್ಕೆ ಮೆರಗು ಕೊಟ್ಟಿದ್ದಾನೆ. ಶಿವಶರಣರ ನೀತಿ ತತ್ತ್ವಗಳಲ್ಲಿ ಈ ಅಮೋಘ ನೀತಿಯಿಲ್ಲವೆಂದಲ್ಲ. ಆದರೆ ಆ ವಚನಗಳ ತತ್ತ್ವಗಳನ್ನೇ ಕಾವ್ಯದ ಚೌಕಟ್ಟಿನಲ್ಲಿ ನಿರೂಪಿಸಿದುದು ರಾಘವಾಂಕನ ವೈಶಿಷ್ಟ್ಯ. ಘನಸತ್ಯವೇ ಜೀವವೆಂದಿದ್ದ ಹರಿಶ್ಚಂದ್ರನು ಮಾಡಿದ ಹೊಲೆಯನ ಸೇವೆಯು ಗುರುಸೇವೆಯೆಂದೂ ಹೊಲೆವೇಷವೇ ಪಾವನ ಪುಣ್ಯವೇಷವೆಂದೂ ಸುಡುಗಾಡ ರಕ್ಷಿಸುವಯಿರವು ತಾ ಯಜ್ಞರಕ್ಷೆಯ ಇರವೆಂದೂ ಕಾವ್ಯಚ್ಛಲದಿಂದ ರಾಘವಾಂಕನು ಬೋಧಿಸಿ ಗುರು ಸೇವೆ, ಧಾರ್ಮಿಕ ವೇಷ, ವೈದಿಕ ಕ್ರಿಯೆ ಇವುಗಳಿಗೆ ಹೊಸ ಅರ್ಥವನ್ನು ಕೊಟ್ಟಿದ್ದಾನೆ. ಹರಿಶ್ಚಂದ್ರನ ಸತ್ಯವೆರಸಿದ ನ್ಯಾಯವನ್ನು ಲಿಂಗಾರ್ಚನೆಯೆಂದು ಕರೆದು ಡಾಂಭಿಕ ಆಚಾರಗಳಿಗೆ ಅರೆದಾಳ ಹಚ್ಚಿ ಧನ್ಯನಾಗಿದ್ದಾನೆ. ಹರನೇ ಸತ್ಯ ಸತ್ಯವೇ ಹರನೆಂಬ ಶ್ರುತಿವಾಕ್ಯವನ್ನು ತನ್ನ ಕೃತಿವಾಕ್ಯವನ್ನಾಗಿ ಮಾರ್ಪಡಿಸಿಕೊಂಡ ಕವಿ ರಾಘವಾಂಕನ ಹಾದಿಯು ಕನ್ನಡಕ್ಕೆ ಹೊಸದೇ ಸರಿ.

ಸೋಮನಾಥ ಚರಿತ್ರೆಯೆಂಬ ಕಾವ್ಯದಲ್ಲಿ ಸೂಚಿತವಾಗಿರುವ ಧರ್ಮನಿರೂಪಣೆಯು ಮನನೀಯವಾಗಿದೆ. ಆದಯ್ಯನ ತಾಯಿಯಾದ ಪುಣ್ಯವತಿಯು ಮಕ್ಕಳಿಲ್ಲವೆಂಬ ಹಂಬಲದಿಂದ ಕೊರಗಿ ಕೊನೆಗೆ 'ಹಿರಿಯರ ಒಡನೆಗೊಡೆಯನಪ್ಪ ಮಗನನ್ನು' ಶಿವನಲ್ಲಿ ಬೇಡಿ ಪಡೆಯಬೇಕೆಂದು ಸ್ತ್ರೀಯರ ಸಹಜಸ್ವಭಾವಕ್ಕನುಸರಿಸಿ ತನ್ನ ಪತಿಯಾದ ದೇವದತ್ತನಿಗೆ ಸೂಚಿಸಿದಾಗ ಆತನು ಕೊಡುವ ಉತ್ತರವು ನಮ್ಮ ಸಾಹಿತ್ಯದಲ್ಲಿಯೇ ಅಪೂರ್ವವಾಗಿದೆ. ಪತಿಯ ಬಿನ್ನಹದಂತೆ ಋಷಿಗಳನ್ನು ಬೇಡಲು

ದೇವರನ್ನು ಕಾಡಲು ಹೊರಟವರ ಕಥೆಗಳನ್ನು ನಮ್ಮ ಭಾರತೀಯ ಸಾಹಿತ್ಯದಲ್ಲಿ ವಿಪುಲವಾಗಿ ಓದುತ್ತೇವೆ; ಕೇಳುತ್ತೇವೆ. ಆದರೆ ರಾಘವಾಂಕನ ಪುರಾಣದಲ್ಲಿಯ ಪತಿಯು ಪತ್ನಿಗೆ 'ಎಲೆ ಮರುಳೆ, ಸುತಂಗಾಡಿ ಪೂಜಿಸಿದ ಪುಣ್ಯಮಂ ಕೆಡಿಸುವೆನೆ ಸುತನಂ ಬೇಡಿ ನಾಂ ಹಿಂದೆ ಮಾಡಿದ ಶಿವಾರ್ಚನೆ ಫಲವನಳಿವೆನೆ' ಎಂದು ಕೇಳುತ್ತಾನೆ. ಧರ್ಮಾಚರಣೆಯೊಂದು ವ್ಯಾಪಾರವೆಂದು ಸಾಮಾನ್ಯವಾಗಿ ನಂಬಲಿರುವ ರೂಢಿಯನ್ನು ರಾಘವಾಂಕನು ಇಲ್ಲಿ ಕುಶಲರೀತಿಯಲ್ಲಿ ಖಂಡಿಸಿದ್ದಾನೆ. ಹಾಗೂ 'ಭಕ್ತಿಗಂ ಕೂಲಿ ಬೇಡುವವ ಭಕ್ತನೇ' ಎಂಬ ದಿವ್ಯೋಪದೇಶವನ್ನು ಸಾರಿದ್ದಾನೆ. 'ನಿಷ್ಕಾಮ ಭಕ್ತಿ' ಎಂಬ ಸಗರ್ವ ಗೀರ್ವಾಣ ಭಾಷೆಯ ಶಬ್ದದಲ್ಲಿಯ ತತ್ತ್ವವನ್ನು ರಾಘವಾಂಕನು ಕನ್ನಡಿಯಷ್ಟು ಸ್ಪಷ್ಟವಾಗಿರುವ ರೀತಿಯಲ್ಲಿ ಕನ್ನಡಿಸಿ ಹೇಳಿದ್ದಾನೆ. ಇದಲ್ಲದೆ ಮುಂದೆ ಈ ಪುರಾಣದಲ್ಲಿ ಆದಯ್ಯನು ಪುಲಿಗೆರೆಯಲ್ಲಿ ಸೋಮನಾಥನನ್ನು ಪ್ರತಿಷ್ಠೆ ಮಾಡಿಯೇ ತೀರುವೆನೆಂಬ ಪಂಥವನ್ನು ತೊಟ್ಟು ಉಪವಾಸ ಮಾಡುತ್ತಾನೆ. ಹಾಗೂ ಆತನು ಆ ಕಾರ್ಯದಲ್ಲಿ ತೊಡಗಿದಾಗ ಶಿವನು ಮುನಿವೇಷದಲ್ಲಿ ಬಂದು 'ಬರೆಸತ್ತ ಕಾಣ್ಬ ಸ್ವರ್ಗಕ್ಕಿರ್ದು ಕಾಣುತಿಹ ನರಕವೇ ಲೇಸು' ಎಂಬ ಚಾರ್ವಾಕ ನೀತಿಯನ್ನು ಹೇಳುತ್ತಿದ್ದರೆ, ಆದಯ್ಯನು 'ಒಡಲಂ ಉತ್ತಮಸಮಯಕ್ಕೆ ಇಕ್ಕುವುದು ಗೆಲವು' ಎಂಬ ವೀರ ನೀತಿಯನ್ನು ಹೇಳಿ ಮುನಿಯನ್ನು ಸುಮ್ಮನಾಗಿಸುತ್ತಾನೆ. ಹರಿಶ್ಚಂದ್ರ ಕಾವ್ಯದಲ್ಲಿಯ ಅಸ್ಪೃಶ್ಯತೆಯ ನಿಜವಾದ ಕಲ್ಪನೆ, ಸತ್ಯದ ಘನತೆ, ಸೋಮನಾಥ ಪುರಾಣದಲ್ಲಿಯ ಉತ್ತಮ ಸಮಯಕ್ಕೆ ಒಡಲನ್ನು ಇಕ್ಕುವ 'ಸತ್ಯಾಗ್ರಹ'ದ ಕಲ್ಪನೆ— ಈ ವಿಚಾರಗಳು ಈಗಿನ ನಮಗೆ ಮನೋರಂಜಕವಾಗಿ ತೋರುವವು. ಅದೆಷ್ಟೋ ಶತಮಾನಗಳ ಹಿಂದೆಯೇ ಕನ್ನಡಿಗರಲ್ಲಿ ಪ್ರಗತಿಪರ ವಿಚಾರದ ಪ್ರವಾಹವು ಹರಿದಿರುವುದನ್ನು ಕೇಳಿ ನಮ್ಮವರಿಗೆ ಹೆಚ್ಚಾದ ಹೆಮ್ಮೆಯೆನಿಸಬಹುದು. ಕಾವ್ಯಚ್ಛಲದಿಂದ ಧರ್ಮತತ್ತ್ವವನ್ನು ಬೋಧಿಸಿದ, ಧರ್ಮವೀರರ ಜೀವನಗಳನ್ನು ವಿವರಿಸಿದ ಕಾವ್ಯಗಳು ನಮ್ಮಲ್ಲಿ ಈ ಮೊದಲೇ ಇದ್ದವು. ನೀತಿಬೋಧೆಗಾಗಿ ತತ್ತ್ವನಿರೂಪಣಕ್ಕಾಗಿ ಹುಟ್ಟಿದ ವಚನಗಳೂ ಇದ್ದವು. ಆದರೆ ರಾಘವಾಂಕನ ಕೃತಿಗಳಲ್ಲಿ ಕಾವ್ಯಚ್ಛಲದಿಂದ ಅಮೋಘ ನೀತಿಯು ರೂಪುಗೊಂಡಿದೆಯೆಂದು ಹೇಳಬೇಕಾಗುತ್ತದೆ. ಅತಿಹುಸಿವವ ಹೊಲೆಯ, ಒಡಲಂ ಉತ್ತಮ ಸಮಯಕ್ಕೆ ಇಕ್ಕುವುದು ಗೆಲವು— ಎಂಬ ನೀತಿತತ್ತ್ವಗಳು ಯಾವುದೇ ವಿಶ್ವಧರ್ಮದ ತಿರುಳಿನಂತಿವೆ. ಇದರಲ್ಲಿಯ ಎರಡನೆಯ ನೀತಿತತ್ತ್ವವು— ವೀರಶೈವರ ಕಾವ್ಯಗಳನ್ನು ಬರೆಯಲಿಲ್ಲವೆಂಬ ಕಾರಣದಿಂದ ಹಲ್ಲುಗಳನ್ನು ಕಳೆದುಕೊಂಡ ನಂತರ ಬರೆಯಲ್ಪಟ್ಟಿತೆಂದು ಹೇಳಲಾಗುವ— ಸೋಮನಾಥ ಚರಿತೆಯಲ್ಲಿದೆ. ಈ ನೀತಿಯು ಒಂದು

ವಿಶಿಷ್ಟ ಧರ್ಮಕ್ಕೆ ಮಾತ್ರ ಅನ್ವಯಿಸಡೆ ವಿಶ್ವಧರ್ಮಕ್ಕೆ ಅನ್ವಯಿಸುವಂತಿದೆ. ಅಲ್ಲದೆ ಆದಯ್ಯನ ಛಲದ ಗೆಲವು-ಪ್ರಯತ್ನಗಳು ಸತ್ಯಾಗ್ರಹದ ಕಲ್ಪನೆಯನ್ನು ಸೂಚಿಸುವಂತಿವೆ. ಆದರೆ ಅಂದು ಯಾವ ಮಾತಿಗಾಗಿ ಛಲವು ತೋರಿಸಲ್ಪಟ್ಟಿತೋ ಅದು ಇಂದು ಸತ್ಯವೆಂದು ಬಾಳಲಾರದೆಂಬ ಮಾತು ನಿಜವಾದರೂ ಕೂಡ ಅಂದು ಸತ್ಯವೆಂದು ತಿಳಿದ ಮಾತಿಗಾಗಿ ತೋರಿದ ಛಲವು ಲಕ್ಷ್ಯಾರ್ಹವಾಗಿದೆ. ಅಂತು ರಾಘವಾಂಕನು ಕಾವ್ಯದಿಂದ ತತ್ತ್ವಕ್ಕೆ ಮೆರುಗು ಕೊಟ್ಟಿದ್ದಾನೆ.

ನಮ್ಮ ಸಾಹಿತ್ಯದಲ್ಲಿ ಶ್ರೇಷ್ಠ ಪ್ರತಿಯ ಕಾವ್ಯಗಳನ್ನು ಬರೆದವರು ವಿಶಿಷ್ಟ ಧರ್ಮದೃಷ್ಟಿಯುಳ್ಳವರಾಗಿದ್ದರು. ವಿಶ್ವನೀತಿಯ ದೃಷ್ಟಿಯನ್ನಿಟ್ಟುಕೊಂಡ ಸರ್ವಜ್ಞನಂತಹರಿಗೆ ಕಾವ್ಯದೃಷ್ಟಿ ಹೆಚ್ಚಾಗಿರಲಿಲ್ಲ. ಆದರೆ ರಾಘವಾಂಕನಲ್ಲಿ ಮಾತ್ರ ವಿಶಿಷ್ಟ ಧರ್ಮದೃಷ್ಟಿಯು ಕಡಮೆಯಾಗಿ ವಿಶ್ವನೀತಿಯ ದೃಷ್ಟಿ, ಸಾಹಿತ್ಯ ದೃಷ್ಟಿಗಳು ಹೆಚ್ಚಾಗಿದ್ದವು. ಕನ್ನಡ ಕಾವ್ಯ ಪ್ರಪಂಚದಲ್ಲಿ ರಾಘವಾಂಕನ ಈ ದೃಷ್ಟಿ ಹೊಸದೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಕಮನೀಯವಾದ ಕಾವ್ಯದ ಮೂಲಕ 'ಹರನೇ ಸತ್ಯ, ಸತ್ಯವೇ ಹರ' ಎಂಬ ಪ್ರತಿವಾಕ್ಯವನ್ನು ಸಾರ್ಥಕಗೊಳಿಸಿದ್ದಾನೆ. ಈತನ ಕೃತಿಗಳಲ್ಲಿ ಮೊದಲನೆಯದೆಂದು ಹೇಳಲಾಗುವ ಗ್ರಂಥವನ್ನು ಕವಿಯು 'ಹರಿಶ್ಚಂದ್ರ ಕಾವ್ಯ' ವೆಂದು ಕರೆದಿರುವನಲ್ಲದೆ ಪುರಾಣವೆಂದಾಗಲಿ, ಚರಿತವೆಂದಾಗಲಿ ಕರೆದಿಲ್ಲ. ಈ ಕವಿಯು 'ನನ್ನಿಕಾರ'ನಾದ ಹರಿಶ್ಚಂದ್ರನ ಸತ್ಯಸಂಧತೆಯನ್ನು 'ಕಾವ್ಯಮುಖದಿಂ' ಪೇಳಲು ಹೊರಟಿದ್ದಾನೆ. ಹಾಗೂ ಅದರಿಂದ ಜನ ಬದುಕಬೇಕೆಂಬುದು ಈತನ ಅಪೇಕ್ಷೆ. ಈತನ ಉದಾತ್ತ ಕಾವ್ಯೋದ್ದೇಶವು ಕೆಳಗಿನ ಪದ್ಯದಲ್ಲಿ ಅಡಕವಾಗಿದೆ:

ಅನೃತವಱಿಯದ ಹೊಲೆಯನಂ ನೆನೆಯೆ ಪುಣ್ಯವೆಂ ।
ದೆನೆ ಸೂರ್ಯಕುಲಜ ಕಲಿ ದಾನಿ ಸತ್ಯಂ ವಸಿ ।
ಷ್ಠನ ಶಿಷ್ಯನಧಿಕಶ್ಶೈವಂ ಕಾಶಿಯೊಳ್ ಮೆರೆದ ವೇದ ಪ್ರಮಾಣಪುರುಷ ॥
ಘನ ನೃಪ ಹರಿಶ್ಚಂದ್ರನೆಂದಡಾತನ ಪೊಗಳ್ದು ।
ಜನ ಬದುಕಬೇಕೆಂದು ಕಾವ್ಯ ಮುಖದಿಂ ಪೇಳ್ದ ।
ನನಪೇಕ್ಷೆಯಿಂದ ಕವಿರಾಘವಾಂಕಂ ಮಹಾಲಿಂಗ ಭಕ್ತರ ಭಕ್ತನು ॥

ಹರಿಶ್ಚಂದ್ರ ಕಾವ್ಯವು ರಸಯಾತ್ರೆಯಾಗಿರುವುದರ ಜೊತೆಗೆ 'ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದದಂತೆ ನಡೆವ' ನೀತಿಯನ್ನು ಸ್ಫುಟವಾಗಿ ನಿರೂಪಿಸುತ್ತಿದೆ. 'ಎನ್ನ ಸದ್ವಾಕ್ಯದಿಂ ವಿಮಲ ಹುಲಿಗೆರೆಯ ಸೋಮೇಶನಂ ಬಣ್ಣಿಸುವೆಂ'

ಎಂದು ಹೊರಟ ಈತನು ಸೋಮನಾಥ ಚರಿತ್ರೆಯಲ್ಲಿ 'ವ್ಯಾಕರಣ ಪರಿಣತಂ, ಅಲಂಕಾರ ಪರಿಚಿತಂ, ಅನೇಕ ರಸ ನಿಪುಣಂ, ಅಭಿದಾನ ಪ್ರವೀಣಂ, ಎಲ್ಲ ಕಳಾ ಕುಶಲನೆನಿಪಾತಂ ಕವೀಶಂ' ಎಂಬುದಾಗಿ ಕವೀಶನ ವ್ಯಾಖ್ಯೆಯನ್ನು ಹೇಳಿದ್ದಾನೆ. ಅಲ್ಲದೆ ಅದೇ ಗ್ರಂಥದಲ್ಲಿ ಕಲಾಪ್ರೌಢಿಯುಳ್ಳವನು ದೇವನಿಗೆ ಸಮಾನನೆಂದೂ ಸೂಚಿಸಿದ್ದಾನೆ. 'ನುಡಿ ಲಕ್ಷಣಾರ್ಥ ರಸ ಭಾವಜ್ಞರೆನಿಪ್ಪ' ಉದ್ದಾಮ ಕವಿಗಳ ಕಾವ್ಯಗಳಿರುವಾಗಲೂ ತಾನು 'ತಂನ ಬಡಮತಿಯೊಳೀಶನಂ ಬಣ್ಣಿಸುವೆ' ನೆಂದು ವಿನಯವನ್ನು ತೋರುತ್ತಿದ್ದರೂ 'ಬಡವರ ಮನೆಯ ಸೊಡರು ಕಂದುವುದೇ, ಗುಡ್ಡಿ ಪಶು ಬಿಡದೆ ಕರೆದಾ ಹಾಲು ಕಹಿಯಹುದೇ' ಎಂದು ಕೇಳುತ್ತಾನೆ. ಅಲ್ಲದೆ 'ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ತಲೆದೂಗಿಸುವೆ' ನೆಂಬ ಆತ್ಮವಿಶ್ವಾಸವೂ ಈ ಕವಿಗೆ ಇದೆ.

ಕನ್ನಡವು ಹೊಸಹಾದಿಯನ್ನು ಹಿಡಿಯುತ್ತಿರುವ ಕಾಲವಿದು. ಕನ್ನಡ ನುಡಿ ನಾಡುಗಳ ಪ್ರೇಮವು ಬೆಳೆದು ಕನ್ನಡ ಬಾವುಟವನ್ನು ಎತ್ತುತ್ತಿರುವ ಕಾಲವಿದು. ಇಂತಹ ಕಾಲದಲ್ಲಿ ರಾಘವಾಂಕನ ಅಚ್ಚಗನ್ನಡ ಪ್ರೇಮ, ಕನ್ನಡನಾಡಿನ ಅಭಿಮಾನ, ಆತನು ಕಾವ್ಯಪ್ರಪಂಚದಲ್ಲಿ ಹಾಕಿಕೊಟ್ಟ ಹೊಸಹಾದಿ, ಕಾವ್ಯದ ಚೌಕಟ್ಟಿನಲ್ಲಿ ನಿರೂಪಿಸಿದ ಉದಾತ್ತ ನೀತಿ ಇವುಗಳು ನಮಗೆ ಸ್ಫೂರ್ತಿಯನ್ನು ಕೊಡಬಹುದೆಂದು ನಾನು ಆಶಿಸುತ್ತೇನೆ.

# ವೀರಶೈವ ಸಾಹಿತ್ಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ಸಾಹಿತ್ಯ ಪ್ರವಾಹಕ್ಕೆ ಒಂದು ಘನತೆಯಿದೆ. ವೀರಶೈವ ಸಾಹಿತ್ಯವು ವಿಸ್ತಾರ, ವಿಪುಲತೆ, ವೈವಿಧ್ಯ, ವೈಶಿಷ್ಟ್ಯ ಗಳಿಂದ ಕೂಡಿರುವುದಲ್ಲದೆ ತನ್ನ ನಿರ್ದಿಷ್ಟವಾದ ಕಾರ್ಯೋದ್ದೇಶವನ್ನು ಸಾಧಿಸಿ ಸಾಹಿತ್ಯಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದಿರುತ್ತದೆ.

ಹನ್ನೆರಡನೆಯ ಶತಮಾನದ ಮಧ್ಯದಲ್ಲಾದ ವೀರಶೈವ ಧಾರ್ಮಿಕ ವಿಪ್ಲವ ದಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೂ ಒಂದು ಕ್ರಾಂತಿಯುಂಟಾಯಿತು. ದಾಸಿ ಮಾರ್ಯನೆಂಬ ಮತ ಪ್ರಚಾರಕನು ಕೆಲಮಟ್ಟಿಗೆ ಬಸವನಿಗಿಂತ ಹಿಂದಿನವನೆಂದೂ ಕೆಲವರು ನಂಬುತ್ತಾರೆ. ಆತನು ವಚನಕಾರನೂ ಆಗಿದ್ದಾನೆ. ವೀರಶೈವ ಸಾಹಿತ್ಯ ಚರಿತ್ರೆಯನ್ನು ಕರ್ನಾಟಕ ರಾಜಕೀಯ ಚರಿತ್ರೆಯನ್ನು ಅನುಸರಿಸಿ ಹೀಗೆ ವಿಭಾಗಿಸಬಹುದು.

(೧) ಬಿಜ್ಜಳನ ಕಾಲ—ವಚನಕಾರರು

(೨) ಹೊಯ್ಸಳರ ಕಾಲ—ಹರಿಹರ-ರಾಘವಾಂಕರ ಕ್ರಾಂತಿ

(೩) ವಿಜಯನಗರದ ಕಾಲ— (ಅ) ಲಕ್ಕಣ್ಣ ದಂಡೇಶ, ವಚನಗಳ ವ್ಯವಸ್ಥಿತ ಸಂಗ್ರಹ, ತತ್ವ ಸಂಗ್ರಹ, ವೀರಶೈವ ಪುನರುಜ್ಜೀವನ. (ಬ) ತೋಂಟದ ಸಿದ್ಧಲಿಂಗಯತಿಗಳಿಂದ ಮಠ-ಶಾಲೆಗಳ ಸ್ಥಾಪನೆ, ಜ್ಞಾನ ಪ್ರಸಾರ, ಸಂಘಟನೆ.

(೪) ವಿಜಯನಗರದ ನಂತರ ಕಾಲ— (ಅ) ಕೆಳದಿಯ ಅರಸರ ಕಾಲ-ವೀರಶೈವ ತತ್ವಗಳನ್ನು ಸಂಸ್ಕೃತಕ್ಕೆ ಇಳಿಸಿದ ಕಾಲ, ನವಜಾಗ್ರುತಿ (ಬ) ಬೇರೆ ಬೇರೆ ವ್ಯಕ್ತಿಗಳ ಸಾಹಿತ್ಯಸೇವೆ.

ಶತಮಾನಗಳ ದೃಷ್ಟಿಯಿಂದ ನೋಡಬಹುದಾದರೆ ವೀರಶೈವ ಸಾಹಿತ್ಯ ಪ್ರವಾಹವು ಹನ್ನೆರಡನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದ ವರೆಗೂ ಹರಿದು ಬಂದಿದೆ. ಇಪ್ಪತ್ತನೆಯ ಶತಮಾನದ ಸಾಹಿತ್ಯ ಚರಿತ್ರೆಯ ನಿರೂಪಣೆಯನ್ನು ನಾನಿಲ್ಲಿ ಮಾಡಿಲ್ಲ. ಅಂದರೆ ಸಾಮಾನ್ಯವಾಗಿ ಬಸವಣ್ಣನವರಿಂದ ಬಸವಪ್ಪಶಾಸ್ತ್ರಿಗಳವರೆಗಿನ ಸಾಹಿತ್ಯಪ್ರವಾಹದ ದಿಗ್ದರ್ಶನವು ಈ ಲೇಖನದ ಗುರಿ.

ಹನ್ನೆರಡರಿಂದ ಹತ್ತೊಂಬತ್ತನೆಯ ಶತಮಾನದ ವರೆಗೆ ಬಸವಣ್ಣನವರಿಂದ ಬಸವಪ್ಪಶಾಸ್ತ್ರಿಗಳವರೆಗೆ ಬೆಳೆದು ಬಂದ ವೀರಶೈವ ಸಾಹಿತ್ಯವು ಗಾತ್ರದಲ್ಲಿಯೂ, ಯೋಗ್ಯತೆಯಲ್ಲಿಯೂ ಹಿರಿದಾಗಿದೆ. ಕೇವಲ ಗಾತ್ರವನ್ನೇ ನೋಡಬೇಕಾದರೆ ಕವಿಚರಿತೆಕಾರರ ಅಂಕಿಗಳು ಉಪಯುಕ್ತವಾಗಿವೆ. ಅವರು ರಚಿಸಿದ ಮೂರು ಭಾಗಗಳಲ್ಲಿ ಬರುವ ಒಟ್ಟು ಕವಿಸಂಖ್ಯೆ ಸು. ೧೧೪೪ ಆಗಿದೆ. ಆದರಲ್ಲಿ ವೀರಶೈವ ಕವಿಗಳ ಸಂಖ್ಯೆ ೪೫೩ ಎಂದು ಕವಿಚರಿತೆಕಾರರು ಬರೆಯುತ್ತಾರೆ. (ಇವರಲ್ಲಿ ಆಧುನಿಕರು ಸು. ೨೭ ಎಂದು ತಿಳಿಯುತ್ತದೆ.) ಒಟ್ಟು ೧೧೪೪ರ ಸಂಖ್ಯೆಯಲ್ಲಿ ೪೫೩ರಷ್ಟು ಇರುವ ವೀರಶೈವರ ಸಂಖ್ಯೆಯು ಉಳಿದ ಯಾವ ಮತೀಯರ ಸಂಖ್ಯೆಗಿಂತಲೂ ಹೆಚ್ಚಾಗಿದೆ. ಇವರಲ್ಲಿ ಕವಿಚರಿತೆಕಾರರು ೧೪೪ರಷ್ಟು ವಚನಕಾರರನ್ನು ಸೇರಿಸಿದ್ದಾರೆ. ವಚನಕಾರರ ಸಂಖ್ಯೆ ಇನ್ನೂ ಅದೆಷ್ಟೋ ಹೆಚ್ಚಾಗಿರಬಹುದೆಂದು ನಂಬಲಿಕ್ಕೆ ಅಡ್ಡಿ ಇಲ್ಲ. ಅಂತು ವಿಶಾಲವಾಗಿರುವ ಕನ್ನಡ ಕವಿಸಂಖ್ಯೆಯಲ್ಲಿ ವೀರಶೈವ ಕವಿಗಳ ಸಂಖ್ಯೆಯೂ ಕೂಡ ವಿಶಾಲವೇ ಆಗಿದೆಯೆಂಬುದು, ಉಳಿದ ಯಾವ ಮತೀಯ ಕವಿಗಳಿಗಿಂತಲೂ ಹೆಚ್ಚೇ ಆಗಿದೆಯೆಂಬುದು ಇದರಿಂದ ನಿರ್ಧಾರವಾಗುತ್ತದೆ. ಗಾತ್ರದಿಂದಲೇ ಮಾತ್ರ ಯೋಗ್ಯತೆಯನ್ನು ಅಳೆಯಲಾಗುವುದಿಲ್ಲವಷ್ಟೆ ? ಆದ್ದರಿಂದ ಗಾತ್ರವು ದೊಡ್ಡದಾಗಿರುವಂತೆ ವೀರಶೈವ ಸಾಹಿತ್ಯದ ಯೋಗ್ಯತೆಯೂ ಹಿರಿದಾಗಿರುವುದನ್ನು ನಾವು ಅರಿತುಕೊಳ್ಳಬಹುದಾಗಿದೆ. ವೀರಶೈವ ಸಾಹಿತ್ಯದ ಮೂಲಕವೇ ಹಳೆಗನ್ನಡದ ಕ್ಲಿಷ್ಟತೆಯು ಹಿಂದಾಗಿ ಸುಗಮವಾದ, ಸುಭಗವಾದ ಹೊಸಗನ್ನಡವು ಬೆಳಕಿಗೆ ಬರಲು ಮೊದಲಾಯಿತು. ವೀರಶೈವ ಸಾಹಿತ್ಯದ ಮೂಲಕವಾಗಿಯೇ ಕನ್ನಡದ ಜನಪ್ರಿಯ ಷಟ್ಪದಿಯು ಬೆಳವಣಿಗೆ ಹೊಂದಿ ಅದರ ಝೇಂಕಾರವು ಕನ್ನಡಿಗರ ಕಿವಿಗಳನ್ನು ತಣಿಸಹತ್ತಿತು. ಕನ್ನಡ ಕಾವ್ಯಕ್ಕೆ ಜೈನರು ಆದಿಕವಿಗಳಾದರೆ ವೀರಶೈವರು ಕನ್ನಡದ ಗದ್ಯದ ಆದ್ಯ ಪ್ರವರ್ತಕರಾಗಿದ್ದಾರೆ. ವೀರಶೈವರು ಕನ್ನಡಕ್ಕೆ ಕೊಟ್ಟ ಜ್ಞಾನದಾಯಕ ಸಾಹಿತ್ಯ ಅಮೋಘವಾಗಿದೆ. ವೀರಶೈವರ ಕಾವ್ಯೋದ್ದೇಶವೇ ಘನವಾಗಿತ್ತು. ಒಂದು ಅಪೇಕ್ಷಣೀಯವಾದ ಸಾಂಪ್ರದಾಯವು ಹರಿಹರನ ಕಾಲದಿಂದಲೂ ಬೆಳೆದುಬಂದಿತು.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ ।
ತನತನಗಿಂದ್ರ ಚಂದ್ರ ರವಿಕರ್ಣ ದಧೀಚಿ ಬಲೀಂದ್ರನೆಂದು ತಾ ॥
ನನವರತಂ ಪೊಗಟ್ದು ಕಿಡಬೇಡೆಲೆ ಮಾನವ ನೀನರ್ಹನಿಶಂ ।
ನೆನೆ ಪೊಗಟರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಪಂಪೆಯಾಳ್ದನಂ ।

ಎಂಬ ಹರಿಹರನ ನುಡಿಯಲ್ಲಿ ವೀರಶೈವ ಸಂಪ್ರದಾಯವು ಒಡಮೂಡಿದೆ. "ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ತಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್" ಎಂಬ ಆದಿಪಂಪನ ಸಂಪ್ರದಾಯವನ್ನನುಸರಿಸಿದ ಜೈನ ಉಪ್ದಾಮ ಕವಿಗಳು ತಮ್ಮ ಪೋಷಕ ಪ್ರಭುಗಳನ್ನು ಇಂದ್ರರೆಂದೋ, ಚಂದ್ರರೆಂದೋ ಬಣ್ಣಿಸಿದ ರೀತಿಯು ನಿಸ್ಪೃಹನಾದ ಹರಿಹರದೇವನಿಗೆ ಸೇರಲಿಲ್ಲ. ಅಂತೆಯೇ ಆ ರೀತಿಯನ್ನು ಹೀಗೆ ತನ್ನ ಮಾತಿನಲ್ಲಿ ಖಂಡಿಸಿದ್ದಾನೆ. ಮನುಜರಾದವರನ್ನು, ಸಾಯುವವರನ್ನು ಹೊಗಳಿ ಕೆಟ್ಟು ಹೋಗದೆ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನನ್ನು ಸ್ತುತಿಸಿ ಕಾವ್ಯವು ಸಾರ್ಥಕತೆಯನ್ನೂ, ಕವಿಯು ಧನ್ಯತೆಯನ್ನೂ ಪಡೆಯಬೇಕೆಂದು ಹರಿಹರದೇವನು ಇಲ್ಲಿ ಹೇಳಿದ್ದಾನೆ. ಈ ಹಿರಿಯ ಕವಿಯ ಈ ಘನವಾದ ಸಂಪ್ರದಾಯವನ್ನೇ ಮುಂದಿನ ವೀರಶೈವ ಕವಿಗಳೂ ಪಾಲಿಸಿದ್ದಾರೆ. ಮಾನವನಾದ ಹರಿಶ್ಚಂದ್ರನ ಚರಿತ್ರವನ್ನು ಕಾವ್ಯವಸ್ತುವನ್ನು ಮಾಡಿಕೊಂಡದ್ದಕ್ಕಾಗಿ ರಾಘವಾಂಕನ ಮೇಲೆ ಹರಿಹರನು ಕೋಪಿಸಿಕೊಂಡನೆಂದು ಹೇಳುವ ಆಖ್ಯಾಯಿಕೆಯಲ್ಲಿಯೂ ಈ ಧೀರ ಸಂಪ್ರದಾಯದ ಧ್ವನಿಯೇ ಇದೆ. ಚಾಮರಸನಾದರೂ ಇನ್ನೂ ಸ್ಪಷ್ಟವಾದ ಶಬ್ದಗಳಲ್ಲಿ:

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲಕುವರ ಸೀಮೆಯ ಹೊಲಬು ತಾನಲ್ಲ ॥
ಹೊತ್ತು ಹೋಗದೆ ಪುಂಡರಾಲಿಪ ।
ಮತ್ತಮತಿಗಳ ಗೋಷ್ಠಿಯಲ್ಲಿದು ।
ಸತ್ಯಶರಣರು ತಿಳಿವುದೀ ಪ್ರಭುಲಿಂಗ ಲೀಲೆಯನು ॥

ಎಂಬುದಾಗಿ ಈ ಧೀರ ಸಂಪ್ರದಾಯವನ್ನು ಬೆಳೆಯಿಸಿಕೊಂಡು ಹೋಗಿದ್ದಾನೆ. 'ಸತ್ತವರ'—ಸಾಯುವವರ ಕಥೆಯನ್ನು ಹೇಳಲು ತಾವು ವೃಥಾಯಾಸ ಬಡುವದಿಲ್ಲವೆಂಬುದೇ ವೀರಶೈವ ಕವಿಗಳ ಪಂಥವಾಗಿದೆ. ಕವಿಶೇಖರನಾದ ಷಡಕ್ಷರದೇವನು ಸಹ ಇದನ್ನು ಸರಿಯಾಗಿಯೇ ಹೇಳಿದ್ದಾನೆ.

ಧರೆಯೊಳ್‌ಮೇಣ್ ಪುಟ್ಟಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ ।
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್ ।
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯ ಲಕ್ಷ್ಮೀ ।
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್ ॥

ಅದರಿಂದೆ ಮಹಿತ ಮಹಿಮಾ ।
ಸ್ಪದನಂ ಶಿವನಂ ತದೀಯ ಶರಣವ್ರಜಮಂ ॥
ಪಡೆದು ಮುದಮೊದವೆ ಬಲ್ಲಂ ।
ಪದೆ ನುತಿಪೆಂ ನುತಿಸೆಸುಳಿದ ಸುರರಂ ನರರಂ ॥

ನರರ ಮೇಲೆ ಕಬ್ಬಂಗಳಂ ಕಟ್ಟಿದ ಕಬ್ಬಿಗರು ಕೆಟ್ಟುಪೋದರೆಂದೇ ಷಡಕ್ಷರ ದೇವನ ನಂಬಿಗೆ. ಉಳಿದ ನರರನ್ನೇ ಅಲ್ಲ, ಉಳಿದ ಸುರರನ್ನೂ ಕೂಡ ತಾನು ಸ್ತುತಿಸಲಾರೆನೆಂದು ಹೇಳುತ್ತಾನೆ. ಇಂತಹ ಒಂದು ನಿಷ್ಠೆ ಆತನದು. ಈಗಿನ ವಿಚಾರಕ್ಕನುಸರಿಸಿ ಅದನ್ನು ಸಂಕುಚಿತ ಭಾವನೆಯೆಂದು ಹೇಳುವುದು ಸರಿ ಯಾಗಲಾರದು. ಆಗಿನ ಕಾಲದ ಧಾರ್ಮಿಕ ವಾತಾವರಣ, ನಿಷ್ಠೆಯ ರೀತಿ ಇವು ಗಳನ್ನು ಇಂದಿನ ವಿಚಾರಗಳ ಮಾನದಂಡದಿಂದ ಅಳೆಯುವುದು ಉಚಿತವಲ್ಲ. ವೀರಶೈವ ಕವಿಗಳ ಈ ಸಂಪ್ರದಾಯದಿಂದ ಅವರ ಕಾವ್ಯೋದ್ದೇಶವು ಸ್ಪಷ್ಟವಾಗು ತ್ತದೆ. ಜೈನ ಕವಿಗಳ 'ಲೌಕಿಕ ಕಾವ್ಯ' ಸಂಪ್ರದಾಯವನ್ನು ಇವರು ತೀವ್ರವಾಗಿ ಖಂಡಿಸಿದ್ದಾರೆ. ಜೈನನೇ ಆದರೂ ಹದಿನಾರನೆಯ ಶತಮಾನದಲ್ಲಿ ಆಗಿಹೋದ ರತ್ನಾಕರವರ್ಣಿ ಎಂಬ ಕವಿಯೂ ಕೂಡ,

ಹೊಲ್ಲದ ನೃಪರಿಗಿಲ್ಲದ ಗುಣಗಳನಿಟ್ಟು ।
ಸೊಲ್ಲಿಪ ಕೃತಿಮಾರ್ಗವಿದಲ್ಲ ॥
ಉಳ್ಳ ಸದ್ಗುಣಗಳ ಕಡೆಗಂಡು ಬಣ್ಣಿಸ ।
ಬಲ್ಲವನಾವನಾ ನೃಪನಾ ॥

ಎಂದು ಹೇಳುತ್ತಾನೆ. ರತ್ನಾಕರವರ್ಣಿಯ ಮೇಲೆ ವೀರಶೈವ ಕವಿಗಳ ಖಂಡನೆಯು ಪರಿಣಾಮವನ್ನುಂಟುಮಾಡಿದ್ದೀತೋ ಏನೋ, ಅದೇನಿದ್ದರೂ ಆತನು ಕಾವ್ಯ ಬರೆದದ್ದು ಕೂಡ ಒಬ್ಬ ಮನುಷ್ಯನ ಮೇಲೆಯೇ. ಮುಂದೆ ಬಂದ ವೀರಶೈವ ಕವಿಗಳಾದರೂ ಮನುಷ್ಯರ ಮೇಲೆ ಕಾವ್ಯ ಬರೆದಿದ್ದರೂ ಕೂಡ ಅವರು 'ಶಿವನ ಶರಣವ್ರಜ'ವೆಂದು ಅವರ ಸಮಾಧಾನ. ಅದರಂತೆ ಉಳಿದ ಮತೀಯರೂ ಸಮಾ ಧಾನ ಮಾಡಿಕೊಳ್ಳಬಹುದು.

ಜೈನ, ವೀರಶೈವ ಕವಿಗಳ ಪರಸ್ಪರ ಕಾವ್ಯೋದ್ದೇಶವನ್ನು ಇನ್ನೊಂದು ದೃಷ್ಟಿಯಿಂದಲೂ ಅವಲೋಕಿಸಬಹುದಾಗಿದೆ. ಆದಿಪಂಪನು "............ನೆಗಟ್ತೆಯ ನಾಳ್ದ ಕಬ್ಬಮಂ ಕುಸುಮನೀಮದರಿಕೇಸರಿ ಕೇಸರಿಗಲ್ಲದ ವಸ್ತುಗೀವುದೆ" ಎಂಬುದಾಗಿ ಹೇಳಿದ್ದಾನೆ. ತನ್ನ ಕಾವ್ಯವೆಂಬ ಕೂಸನ್ನು ಅರಿಕೇಸರಿಗೆ ಈಯಬೇಕೆಂದು ಆತನ ಆಶಯ. ಹದಿಮೂರನೆಯ ಶತಮಾನದ ಗುಣವರ್ಮನೆಂಬ ಕವಿಯೂ ಕೂಡ ಇಂತಹದೇ ಅಭಿಪ್ರಾಯವನ್ನು ಸೂಚಿಸುತ್ತಾನೆ. ಕಾವ್ಯವು ಕನ್ಯೆ, ಕವಿಯು ಜಾಮಾತರನ್ನು ಅರಸುವ ಕನ್ಯಾಪಿತ— ಹೀಗೆ ಒಂದು ರೂಪಕ ಎಂದಿನಿಂದಲೂ ನಮ್ಮ ದೇಶದಲ್ಲಿ ಇದೆ. ಅರಿಕೇಸರಿಯೆಂಬ ಮಾನವರ ಅರಸನೆ ತನ್ನ ಕಾವ್ಯ ಕನ್ನಿಕೆಯನ್ನು ಸ್ವೀಕರಿಸಲು ಯೋಗ್ಯನೆಂದು ಹೇಳುವ ಜೈನಕವಿ ಪಂಪನ ರೀತಿಯು ವೀರಶೈವ ಕವಿಗಳಿಗೆ ಒಪ್ಪಿಗೆಯಾಗಿಲ್ಲ. ರಾಘವಾಂಕನ ಕೆಳಗಿನ ಉಕ್ತಿಯನ್ನು ಪರಿಶೀಲಿಸಬೇಕು.

> ರಸಿಕತನ ಸುಳಿಸುಖಂ ನಿಳಯವಂತಪ್ಪ ಈ ।
> ಪೊಸಕಾವ್ಯ ಕನ್ನಿಕೆಯ ಪಡೆದು ಪಂಪಾಂಬಿಕೆಯ ।
> ರಸ ವಿರೂಪಾಕ್ಷಂಗೆ ಕೊಟ್ಟು ಹಂಪೆಯ ರಾಘವಾಂಕನೇಂ ಕೃತಕೃತ್ಯನೋ ।

'ಪೊಸ ಕಾವ್ಯ ಕನ್ನಿಕೆಯ ಪಡೆದು ಪಂಪಾಂಬಿಕೆಯರಸ ವಿರೂಪಾಕ್ಷಂಗೆ ಕೊಟ್ಟು' ಎಂಬ ರಾಘವಾಂಕನ ಉಕ್ತಿ 'ಕಬ್ಬಮಂ ಕೂಸುಮನೀವುದರಿಕೇಸರಿಗೆ' ಎಂಬ ಪಂಪನ ಉಕ್ತಿ ಇವುಗಳಲ್ಲಿಯ ವ್ಯತ್ಯಾಸವನ್ನು ಗಮನಿಸಿದರೆ ವೀರಶೈವ ಕವಿಗಳ ಕಾವ್ಯೋದ್ದೇಶವು ಸುಸ್ಪಷ್ಟವಾಗದೆ ಇರದು. ಕೀಟ್ಸ್ ಕವಿಯ Truth is beauty; beεuty is truth ಎಂಬ ಮಾತು ಆತನ ಕಾವ್ಯಸೂತ್ರವಾಗಿರುವಂತೆ ರಾಘವಾಂಕ ಕವಿಯು ಹೇಳಿದ "ಹರನೇ ಸತ್ಯ, ಸತ್ಯವೇ ಹರ" ಎಂಬ ಉಕ್ತಿ ವೀರಶೈವ ಕವಿಗಳ ಕಾವ್ಯಸೂತ್ರವಾಗಿ ಕಂಡುಬರುತ್ತದೆ. ಉದಾತ್ತವಾದ ಕಾವ್ಯೋದ್ದೇಶವನ್ನು ಇಟ್ಟುಕೊಂಡ ವೀರಶೈವ ಕವಿಗಳು ಅದನ್ನು ಉದಾತ್ತವಾಗಿಯೇ ನಿರ್ವಹಿಸಲು ಯತ್ನಿಸಿದ್ದಾರೆ. ಅಂತೆಯೆ ಗಾತ್ರದ ಜೊತೆಗೆ ವೀರಶೈವ ಕವಿಗಳ ಕಾವ್ಯಗಳ ಯೋಗ್ಯತೆಯೂ ದೊಡ್ಡದಾಗಿದೆ. ಮೇಲೆ ಸೂಚಿಸಿದ ಕಾವ್ಯೋದ್ದೇಶವಲ್ಲದೆ ಇನ್ನೂ ಒಂದು ಉದ್ದೇಶವನ್ನು ವೀರಶೈವ ಕವಿಗಳು ಇಟ್ಟುಕೊಂಡಂತಿದೆ. ಅದೆಂದರೆ 'ಕನ್ನಡ ಭಾಷೆಯು ಜ್ಞಾನದೇವತೆಯ ವಾಹನವಾಗುವಂತೆ, ಜ್ಞಾನವು ಸಾರ್ವಜನಿಕವಾಗುವಂತೆ ಪ್ರಯತ್ನಿಸುವುದು.' ಭಾಷೆಯ ಸಂಬಂಧವಾದ ಕಟ್ಟುನಿಟ್ಟುಗಳನ್ನು ತೊಡೆದು ಹಾಕಿ ಭಾಷೆಯನ್ನು ಸುಲಭ ಮಾಡಿದವರು ಹರಿಹರ-ರಾಘ

ವಾಂಕರು. ಆತ್ಮ, ಪರಮಾತ್ಮ, ಮುಕ್ತಿ ಇವುಗಳ ಬಗೆಗೆ ಜ್ಞಾನವನ್ನು ಸುಲಭ ವಾದ ಸುಲಲಿತವಾದ ಕನ್ನಡದಲ್ಲಿ ಬರೆದವರು ವಚನಕಾರರು. ಜೈನರ ಚಂಪೂ ಶೈಲಿಯ ರೂಪಕ್ಕೆ ಪ್ರತಿಯಾಗಿ ಸರಳವಾದ ಹೊಸ ಸಾಹಿತ್ಯ ರೂಪಗಳನ್ನು ಒದಗಿಸಿ ಕೊಟ್ಟು, ಮುಂದೆ ಷಟ್ಪದಿಯ ಝೇಂಕಾರವು ಕನ್ನಡಿಗರ ಕಿವಿ-ಮನಗಳನ್ನು ತಣಿಸು ವುದಕ್ಕೆ ಹಾದಿ ಮಾಡಿಕೊಟ್ಟವರು ವೀರಶೈವ ಕವಿಗಳು. ಚಂಪೂಕಾವ್ಯದಲ್ಲಿ ತುಂಡು ತುಂಡಾಗಿ ಉಪಯೋಗಿಸಲ್ಪಡುತ್ತಿದ್ದ ಹಳಗನ್ನಡ ಕ್ಲಿಷ್ಟ ಗದ್ಯಕ್ಕೆ ಪ್ರತಿಯಾಗಿ ನಿರರ್ಗಳ ಭಾವದ, ಹಾಗೂ ಆ ಭಾವನಿರೂಪಣೆಯ ಸಾಧನವಾಗುವಂತಹ ಹೊಸ ರೀತಿಯ ಗದ್ಯದ ಉಪಯೋಗವನ್ನು ಅರಿತುಕೊಂಡು ಅದನ್ನು ಬಳಸಿದವನು ಹರಿಹರ ದೇವನು. ಒಂದು ದೃಷ್ಟಿಯಿಂದ ಹೊಸಗನ್ನಡ ಗದ್ಯಕ್ಕೆ ಹಾದಿ ಮಾಡಿಕೊಟ್ಟವರು ವಚನಕಾರರು; ಹಾಗೂ ಹರಿಹರದೇವನು. 'ಶಿವನಂ ತದೀಯ ಶರಣವ್ರಜಮಂ' ಸ್ತುತಿಸುವುದಕ್ಕೆ ಹರಿಹರದೇವನು ಕನ್ನಡ ಗದ್ಯದ ಕಸುವನ್ನು ಬಳಸಿಕೊಂಡನು. ಮುಂದೆ ೧೬ನೆಯ ಶತಮಾನದ ನಿಜಗುಣ ಶಿವಯೋಗಿವರ್ಯನಂತೂ ಧಾರ್ಮಿಕ, ನೈತಿಕ ಜ್ಞಾನ ಕೋಶವೆನ್ನಬಹುದಾದ ಆರು ಶಾಸ್ತ್ರಗಳನ್ನು ಸುಲಭವಾದ ಕನ್ನಡದಲ್ಲಿ ಬರೆದು ಕನ್ನಡ ಜನತೆಯಲ್ಲಿ ಜ್ಞಾನಪ್ರಸಾರ ಮಾಡಿದನು. ತನ್ನ ಗ್ರಂಥಗಳಿಂದಷ್ಟೆ ಅಲ್ಲದೆ, ಅಕ್ಷರಜ್ಞಾನವು ಜನತೆಯಲ್ಲಿ ಪಸರಿಸುವಂತೆ ಮಠ-ಮಠಗಳಲ್ಲಿ, ಸಾಲೆಗಳ ವ್ಯವಸ್ಥೆಯನ್ನು ಮಾಡಲು ಕಾರಣನಾದನು. 'ಗಾವಠಿ' ಶಾಲೆಗಳಲ್ಲಿಯ ಅಯ್ಯನವರು ಕನ್ನಡ ಅಕ್ಷರ ಪ್ರಸಾರಕ್ಕೆ ಸಲ್ಲಿಸಿದ ಸೇವೆ ಅಮೋಘವಾಗಿದೆ. ಬಹುಶಃ ಈತ್ತೀಚಿನ ಅವಾಂತರಗಳಲ್ಲಿ ಕನ್ನಡವು ಉಳಿದು ಬೆಳೆಯುವುದಕ್ಕೆ ಈ ಮಠಗಳ ಅಯ್ಯನವರು ಬಹುಮಟ್ಟಿಗೆ ಕಾರಣರೆಂಬುದರಲ್ಲಿ ಎಷ್ಟೂ ಅತಿಶಯೋಕ್ತಿಯಿಲ್ಲ. ನಮಗಿಂತ ಒಂದು ತಲೆ ಹಿಂದಿನವರು ಈ ಮಠದಯ್ಯಗಳ ಸಹಾಯವಿಲ್ಲದೆ ಕನ್ನಡವನ್ನು ಕಲಿಯುವುದು ಸಾಧ್ಯವಿದ್ದಿರಲಿಲ್ಲ. ವೀರಶೈವರು ಧರ್ಮವನ್ನು ಸಾರ್ವಜನಿಕ ಮಾಡಿದಂತೆ ಅಕ್ಷರವಿದ್ಯೆಯನ್ನು ಸಾರ್ವಜನಿಕವಾಗಿ ಮಾಡಲು ಸಾಕಷ್ಟು ಪ್ರಯತ್ನಪಟ್ಟಿದ್ದಾರೆ. ಅರ್ಥಾತ್ ವೀರಶೈವರ ಪ್ರಯತ್ನಗಳು ಧರ್ಮಪ್ರಸಾರ, ಜ್ಞಾನಪ್ರಸಾರ, ಇವುಗಳನ್ನೇ ಗುರಿಯಾಗಿಟ್ಟುಕೊಂಡಂತಿವೆ. ವೀರಶೈವ ಸಾಹಿತ್ಯದ ವೈಶಿಷ್ಟ್ಯ ಗಳನ್ನು ಅವಲೋಕಿಸುವಾಗ ರಾಘವಾಂಕ ಕವಿಯ "ಪೆರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ" ಎಂಬ ಉಕ್ತಿಯು ನಮಗೆ ವಿಶೇಷ ಉಪಯುಕ್ತವಾಗು ತ್ತದೆ. ಕಾವ್ಯವಸ್ತುವನ್ನು ಆರಿಸಿಕೊಳ್ಳುವಾಗ ಸಂಸ್ಕೃತದಲ್ಲಿದ್ದ ರಾಮಾಯಣ ಮಹಾ ಭಾರತಗಳಿಗೇ ಇವರು ಮೊರೆ ಹೋಗಿಲ್ಲವೆಂಬ ಮಾತಂತೂ ಇದರಿಂದ ಸೂಚಿತ ವಾಗುತ್ತದೆ. ವೀರಶೈವ ಧರ್ಮವು ಅಚ್ಚ ಕನ್ನಡನಾಡಿನ ಧರ್ಮವಾಗಿರುವದರಿಂದ,

ಅವರ ಶರಣರೂ ಹೆಚ್ಚಾಗಿ ಕನ್ನಡಿಗರಾಗಿರುವದರಿಂದ ಅವರು ತಮ್ಮ ಕಾವ್ಯವಸ್ತುವಿ ಗಾಗಿ ಬೇರೆ ಭಾಷೆಯ ಮೋರೆ ನೋಡುವ ಪ್ರಸಂಗ ಬರಲಿಲ್ಲ. ಕೆಲವು ಪುರಾತನರ ಚರಿತ್ರುಗಳನ್ನು ದಕ್ಷಿಣದ ಶೈವ ಗ್ರಂಥಗಳಿಂದ, ಶಿವನ ಪಂಚವಿಂಶತಿ ಲೀಲೆಗಳನ್ನು ಸಂಸ್ಕೃತ ಪುರಾಣಗಳಿಂದ, ಭೀಮ ಕವಿಯು ಬಸವ ಪುರಾಣವನ್ನು ತೆಲುಗು ಮಾತೃಕೆ ಯಿಂದ ಆರಿಸಿಕೊಂಡ ಮಾತನ್ನು ಮರೆಮಾಜುವದಕ್ಕೆಂದು ಮೇಲಿನ ಮಾತನ್ನು ಹೇಳಲಿಲ್ಲ. ಆದರೆ ವೀರಶೈವರ ಕಾವ್ಯವಸ್ತುವಿನಲ್ಲಿ ಅದೊಂದು ಬಗೆಯ 'ದೇಶೀ ಯತೆ' ಧ್ವನಿತವಾಗುತ್ತದೆ. ಹರಿಹರನು ನೂತನ ಪುರಾತನರ ರಗಳೆಗಳನ್ನು ಬರೆಯು ವುದಕ್ಕೆ ಬೇರೆ ಭಾಷೆಗಳ ಮಾತೃಕೆಗಳು ಬೇಕಾಗಲಿಲ್ಲ. ಕನ್ನಡ ಕವಿಗಳಾದ ರಾಘ ವಾಂಕ, ಪದ್ಮರಸರ ಜೀವನಗಳನ್ನು ಕಾವ್ಯವಾಗಿ ಬರೆಯುವವರಿಗೆ 'ಪೆರರೊಡವೆ' ಏಕೆ ಬೇಕು. ವಿರಕ್ತಶ್ರೇಷ್ಠನೂ, ಜ್ಞಾನಮೂರ್ತಿಯೂ ಆದ ಅಲ್ಲಮನ ಜೀವನಚರಿ ತೆಯು ಮೊದಲು ಕನ್ನಡದಲ್ಲಿ ಬರೆಯಲ್ಪಟ್ಟು ನಂತರ ತೆಲಗು, ತಮಿಳು, ಸಂಸ್ಕೃತ, ಮರಾಠಿಗಳಿಗೆ ಪರಿವರ್ತಿತವಾದದ್ದು ಕನ್ನಡಿಗರಿಗೆ ಹೆಮ್ಮೆಯ ವಿಷಯ. ಅನುಭವ ಮಂಟಪ, ಆದರಲ್ಲಿಯ ಶರಣ-ಶರಣೆಯರು, ಇವರನ್ನು ಚಿತ್ರಿಸುವ ವೀರಶೈವ ಸಾಹಿ ತ್ಯವು ಯಾವ ಭಾಷೆಯ ಋಣಕ್ಕೂ ಒಳಪಡದ ಕನ್ನಡದ್ದೇ ಆಗಿದೆ. ಆದರಂತೆಯೆ ಕೆಲವು ಚರಿತ್ರ ಗ್ರಂಥಗಳು—ಗುರುರಾಜ ಚಾರಿತ್ರ (೧೬೫೦) ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ ಇವುಗಳೂ ಬಸವ, ಚೆನ್ನಬಸವ, ಅಕ್ಕ ಮಹಾದೇವಿ, ಅಲ್ಲಮ ಪ್ರಭು, ಸಿದ್ಧರಾಮ ಇವರ ಜೀವನ ಕಾವ್ಯಗಳೂ ಕನ್ನಡಿಗರ ಸೊತ್ತೇ ಆಗಿವೆ. ಜೀವನ ಚರಿತ್ರೆಯಲ್ಲಿ ಎಂತೋ ಹಾಗೆಯೇ ತತ್ತ್ವನಿರೂಪಣೆಯ ಗ್ರಂಥಗಳಲ್ಲಿಯೂ ಕೂಡ ವೀರಶೈವರು 'ಪೆರರೊಡವೆಯಂ ಕೊಂಡು ಕೇಳದ' ದೇಶೀಯತೆಯನ್ನು ಮೆರೆದಿದ್ದಾರೆ. ಅಸಂಖ್ಯಾತ ವಚನಗಳು, ಶೂನ್ಯಸಂಪಾದನೆ ಗ್ರಂಥ, ಷಟ್ಸ್ಥಲ, ನೂರೊಂದು ಸ್ಥಲ ಇತ್ಯಾದಿ ತಾತ್ವಿಕ, ನೈತಿಕ ಗ್ರಂಥಗಳಿಗಾಗಿ ಕನ್ನಡಿಗರು ಯಾರಿಗೂ ಋಣಿಯಾಗಿರಬೇಕಾಗಿಲ್ಲ. ವೀರಶೈವ ಶರಣರು ಸ್ವಾನುಭವದ ಸಂಪ ತ್ತನ್ನೇ ವಚನಗಳಲ್ಲಿ ನಿರೂಪಿಸಿ, ಕನ್ನಡದ ಸಂಪತ್ತನ್ನು ಹೆಚ್ಚಿಸಿ, ಉಳಿದ ಭಾಷೆ, ಸಾಹಿತ್ಯಗಳಿಗೆ ಮಾದರಿಯನ್ನು ಒದವಿಸಿಕೊಟ್ಟಿದ್ದಾರೆ. ವಚನ ಸಾಹಿತ್ಯವು ಸ್ವಾನು ಭವದ ಆವಿರ್ಭವವಾದದ್ದರಿಂದ ಅವುಗಳಿಗೆ ಸಂಸ್ಕೃತ ಮಾತೃಕೆಗಳನ್ನು ಹುಡುಕ ಬೇಕಾದ ಅವಶ್ಯಕತೆ ಇಲ್ಲ. ಆದರೆ ಗೀರ್ವಾಣ ಭಾಷೆಯ ಮುದ್ರೆಯಿಂದಲೇ ತತ್ತ್ವ ಗಳು ಅಧಿಕೃತವಾಗುವವೆಂಬ ಹಂಬಲಕ್ಕೆ ಕಟ್ಟುಬಿದ್ದ ಕೆಲವರು ಕನ್ನಡ ವಚನಗಳ ತತ್ತ್ವಗಳನ್ನು ಸಂಸ್ಕೃತಕ್ಕೆ ತದನಂತರದಲ್ಲಿ ಇಳಿಸಲು ಪ್ರಯತ್ನಿಸಿದ್ದಾರೆ. ಅರ್ಥಾತ್ ಸಂಸ್ಕೃತದ ಮಾತೃಕೆ, ಅಧಿಕೃತ ಗ್ರಂಥಗಳಿಂದ ವೀರಶೈವರ ಸಾಹಿತ್ಯವು

ನಿರ್ಮಾಣವಾಗಿಲ್ಲ. ತದ್ವಿರುದ್ಧವಾಗಿ ಸಂಸ್ಕೃತ ಸಾಹಿತ್ಯಕ್ಕೆ ಕನ್ನಡವು ಕಾಣಿಕೆಯನ್ನು ಅರ್ಪಿಸಿದಂತಿದೆ. ಇದು ಕನ್ನಡಿಗರಿಗೆ ಹೆಮ್ಮೆಯನ್ನುಂಟುಮಾಡಬೇಕಾದ ವಿಷಯವಲ್ಲವೇ ?

ಕನ್ನಡ ಸಾರಸ್ವತ ಪ್ರಪಂಚದಲ್ಲಿ ವೀರಶೈವ ಸಾಹಿತ್ಯವು ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಕಾಯ್ದುಕೊಂಡಿದೆ, ಎಂಬ ಮಾತನ್ನು ಹಿಂದೆ ಸೂಚಿಸಿದ್ದೇನೆ. ಬಿಚ್ಚುಮಾತಿನ ಬಂಟನಾದ ಸರ್ವಜ್ಞಕವಿಯು ಕನ್ನಡಕ್ಕೆ ಅಪೂರ್ವವಾದ, ಅರ್ಥ ಪೂರ್ಣವಾದ ಕಾಣಿಕೆಯನ್ನು ಸಲ್ಲಿಸಿದ್ದಾನೆ. ಜೀವನದ ವಿವಿಧ ರಂಗಗಳಲ್ಲಿಯ ತನ್ನ ಅನುಭವವನ್ನು ಜೀವನದಲ್ಲಿ ನಾಟುವಂತಹ ನುಡಿಗಳಲ್ಲಿ ಸರ್ವಜ್ಞನು ಉಸುರಿದ್ದಾನೆ. ಕನ್ನಡಜನತೆಯಲ್ಲಿ ಸರ್ವಜ್ಞನ ಉಕ್ತಿಗಳು ಹಾಸುಹೊಕ್ಕಾಗಿ ನೆಯ್ಯಲ್ಪಟ್ಟವೆ. ಸರ್ವಜ್ಞನ ತ್ರಿಪದಿಯ ಅನುಕರಣದ ಅತಿರೇಕವೇ ಆತನ ಜನಪ್ರಿಯತೆಯ ಗುರುತಾಗಿದೆ. 'ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಪದ್ಯಮಂ,' ರಚಿಸಬಾರದೆಂಬ ಸಂಪ್ರದಾಯವು ಹರಿಹರದೇವನಿಂದ, ಷಡಕ್ಷರದೇವನ ವರೆಗೆ ಬಳೆದು ಬಂದಿತೆಂಬ ಮಾತನ್ನು ನಾನು ಈ ಮೊದಲೇ ನಿರೂಪಿಸಿದ್ದೇನೆ. ಇದೀಗ ಸರ್ವಜ್ಞನು ಕನ್ನಡ ಸಾಹಿತ್ಯದಲ್ಲಿಯ ಯಾವ ಸಂಪ್ರದಾಯಕ್ಕೂ ಕಟ್ಟುಬೀಳದೆ ತನ್ನದೇ ಆದ ಒಂದು ಮಾರ್ಗವನ್ನು ಹಾಕಿಕೊಟ್ಟನು. ಆದರೆ ವೀರಶೈವ ಕವಿಗಳ ಜ್ಞಾನದಾನದ ಕಾರ್ಯವನ್ನು ಅವನು ಒಳ್ಳೆಯ ಪರಿಣಾಮಕಾರಕ ರೀತಿಯಲ್ಲಿಯೇ ನಿರ್ವಹಿಸಿಕೊಂಡು ಬಂದಿದ್ದಾನೆ. ವಸಂತ, ಉದ್ಯಾನ, ಕೋಗಿಲೆ, ನಲ್ಲ-ನಲ್ಲೆಯರು ಇವುಗಳ ವರ್ಣನೆಯೇ ಕವಿತೆಯೆಂದು ನಂಬಿದವರು ಸರ್ವಜ್ಞನಿಗೆ ಕವಿ ಎಂಬ ಹೆಸರನ್ನು ಕೊಡಲು ಹಿಂಜರಿಯಬಹುದು. ಆದರೆ ಜನಮನವನ್ನು ಸಂಸ್ಕರಿಸುವ ಸರ್ವಜ್ಞನ ಸಿಡಿಲಿನ ನುಡಿಗಳ ಯೋಗ್ಯತೆಯನ್ನು ಯಾರೂ ಅಲ್ಲಗಳೆಯಲಾರರು. ಹಿಂದೆ ಹರಿಹರ, ರಾಘವಾಂಕರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಡೆಯಿಸಿದ ಕ್ರಾಂತಿಯನ್ನು ಕಂಡೆವು. ಇದೀಗ ವಿಪ್ಲವಮೂರ್ತಿ ಸರ್ವಜ್ಞನ ನವೀನ ಕ್ರಾಂತಿಯು ಕನ್ನಡ ಜನಾಂಗಕ್ಕೆ ಹೊಸದೊಂದು ಕಳೆಯನ್ನು, ಸಂಸ್ಕಾರವನ್ನು, ಸಂದೇಶವನ್ನು ಬೀರಿತೆಂದು ಹೇಳಬೇಕು. ಸಾಹಿತ್ಯವು "ಬಾಳಬಟ್ಟೆ"ಯಾಗುವುದರಲ್ಲಿಯೇ ಸಾರ್ಥಕತೆಯಿದೆ ಎಂದು ನಂಬುವವರಿಗೆ— ಹಾಗೆ ನಂಬಬೇಕೆಂದು ನನ್ನ ಅಭಿಪ್ರಾಯ— ಸರ್ವಜ್ಞಮೂರ್ತಿಯ ನುಡಿಗಳ ಮಿಂಚಿನ ಕಣಗಳಲ್ಲಿ ಒಂದು ಅಪೂರ್ವವಾದ ಬೆಳಕು ಕಂಡುಬರುತ್ತದೆ. ಆಂಧ್ರ ದೇಶದ ವೇಮನನಂತೆ, ಕನ್ನಡ ದೇಶದ ಸರ್ವಜ್ಞನು ಜನಮನವನ್ನು ಸಂಸ್ಕಾರಗೊಳಿಸಿ ಉಚ್ಚಮಟ್ಟಕ್ಕೇರಿಸುವ ಕಾರ್ಯಮಾಡಿ ಕನ್ನಡ ನಾಡಿಗೆ ಅನಂತ ಉಪಕಾರವನ್ನು ಮಾಡಿ, ಕನ್ನಡ ನುಡಿಗೆ ಹೊಸ ಕಾಣಿಕೆಯನ್ನು

ಕೊಟ್ಟಿರುವುದಲ್ಲದೆ, ಕನ್ನಡ ನುಡಿಯೂ ಕೂಡ ತನ್ನದೊಂದು ಕಾಣಿಕೆಯನ್ನು ಜಗತ್ತಿಗೆ ಕೊಡುವುದಕ್ಕೆ ಕಾರಣನಾಗಿದ್ದಾನೆ. ಅಂತು ವೀರಶೈವ ಸಾಹಿತ್ಯವು ಅನೇಕ ರೀತಿಯಿಂದ ವೈಶಿಷ್ಟ್ಯಗಳನ್ನು ಒಳಗೊಂಡಿದೆಯೆಂದು ಹೇಳಬಹುದು.

ಇನ್ನು ವೈವಿಧ್ಯದ ದೃಷ್ಟಿಯಿಂದ ವೀರಶೈವರ ಸಾಹಿತ್ಯವನ್ನು ಅವಲೋಕಿಸಬೇಕು. ಕನ್ನಡದಲ್ಲಿ ವಚನಗಳಿಂದಲೇ ವೀರಶೈವರ ಸಾಹಿತ್ಯವು ಮೊದಲಾಯಿತೆಂದು ಇಟ್ಟುಕೊಳ್ಳಬೇಕು. ಪ್ರಾರಂಭದ ಸಾಹಿತ್ಯ ರೂಪವಾದ "ವಚನ ಸಾಹಿತ್ಯ"ವು ಉಜ್ವಲವಾಗಿರುವುದಲ್ಲದೆ ಅಪೂರ್ವವೂ ಆಗಿದೆ. ಕನ್ನಡಸಾಹಿತ್ಯದಲ್ಲಿಯಷ್ಟೇ ಅಲ್ಲದೆ ಜಗತ್ತಿನ ಯಾವುದೇ ಭಾಷೆಯ ವಾಙ್ಮಯದ ದೃಷ್ಟಿಯಲ್ಲಿ ಕೂಡ ಈ ರೀತಿಯ ಸಾಹಿತ್ಯವು ತನ್ನ ಘನತೆಯನ್ನು ಮೆರೆಯಿಸಬಲ್ಲದು. ಎ-ಕೆಂಪಿಯಸ್ ನ(Imitations of Christ) ಎಂಬ ಗ್ರಂಥವು ಮಾತ್ರ ಕೆಲಮಟ್ಟಿಗೆ ಈ ಮಾದರಿಯನ್ನು ಹೋಲುತ್ತದೆ. ಅದನ್ನುಳಿದರೆ ಈ ಮಾದರಿಯ ಸಾಹಿತ್ಯವು ಕೇವಲ ಕನ್ನಡದ ಸೊತ್ತು ಎಂಬ ಮಾತು ಯಾವ ಕನ್ನಡಿಗನಿಗಾದರೂ ಅಭಿಮಾನವನ್ನುಂಟು ಮಾಡಬೇಕು. ಈ ವಚನರೂಪದ ನಂತರ ಚಂಪೂ-ರಗಳೆಗಳು ಬರುತ್ತವೆ. ಚಂಪೂ ರೂಪವನ್ನು ಕನ್ನಡದಲ್ಲಿ ಅನೇಕರು ಪ್ರಯೋಗಿಸಿ ನೋಡಿದ್ದಾರೆ. ಆದರೆ 'ವಚನ ರಚನೆ'ಗಳು ಮಾತ್ರ ಕೇವಲ ವೀರಶೈವರವೇ ಎಂದು ಹೇಳಬೇಕಾಗುತ್ತದೆ. ನಿರರ್ಗಳವಾಗಿ ಹರಿಯುವ, ಭಕ್ತಿಯ ಆವೇಶದಿಂದ ಉದ್ರೇಕಗೊಳಿಸುವ ಶಿವಶರಣರ ಕಥನಕಾವ್ಯಗಳನ್ನು ನಿರೂಪಿಸಲಿಕ್ಕೆ ಹರಿಹರದೇವನು 'ರಗಳೆ' ಎಂಬ ರೂಪವನ್ನು ಉಪಯೋಗಿಸಿದನು. ಆತನು ನೂರಾರು ಇಂತಹ ರಗಳೆಗಳನ್ನು ಬರೆದಿದ್ದಾನೆ. 'ರಗಳೆಯ ಕವಿ' ಎಂಬ ಅಪಹಾಸ್ಯಕ್ಕೂ ಆತನು ಪಾತ್ರನಾಗಿರಬೇಕು. ಹೊಸ ಪ್ರಯೋಗಗಳನ್ನು ಕೈಕೊಂಡವರು ಇಂತಹ ಅಪಹಾಸ್ಯಗಳನ್ನು ಎದುರಿಸಬೇಕಾಗುವುದು ಸಹಜ. ಪ್ರೌಢ ಪಾಂಡಿತ್ಯಪ್ರದರ್ಶನಕ್ಕೆಂದು ಆಗ ರೂಢಿಯಲ್ಲಿದ್ದ 'ಚಂಪೂ'ವನ್ನು ಯಶಸ್ವಿಯಾಗಿ ಬರೆಯಬಲ್ಲವನು ಎಂಬ ಮಾತನ್ನು ಗಿರಿಜಾಕಲ್ಯಾಣದ ರಚನೆಯಿಂದ ತೋರಿಸಿದ್ದಾನೆ. ಆದರೂ ನೂರಕ್ಕಿಂತ ಹೆಚ್ಚಾಗಿ 'ರಗಳೆ' ಎಂಬ ಹೊಸದಾದ ಹಾಗೂ ಮುಂದೆಯೂ ಅನ್ಯರಿಂದ ಬರೆಯಲ್ಪಡದ ಒಂದು ರೂಪವನ್ನೇ ಕನ್ನಡಕ್ಕೆ ಹರಿಹರದೇವನು ಕೊಟ್ಟಿದ್ದಾನೆ. ಇವನ ಸೋದರಳಿಯ 'ಉಭಯಕವಿ ಶರಭಭೇರುಂಡ' 'ಕವಿಕಮಲಮಾರ್ತಾಂಡ' ರಾಘವಾಂಕನು ಷಟ್ಪದಿ ಸಾಂಪ್ರದಾಯ ಸ್ಥಾಪಕನಾಗಿ ವೀರಶೈವ ಸಾಹಿತ್ಯ ರೂಪಗಳ ವೈವಿಧ್ಯವನ್ನು ಹೆಚ್ಚಿಸಿದ್ದಾನೆ. ಷಟ್ಪದಿಯು ಮುಂದೆ ಕನ್ನಡಿಗರ ಅಚ್ಚುಮೆಚ್ಚಿನದಾದ ರೂಪವಾಗಿ ಪರಿಣಮಿಸಿತು. ವಚನ, ರಗಳೆಗಳಂತೆ ಷಟ್ಪದಿಯಾದರೂ ವೀರಶೈವ ಕವಿಗಳ ಕಾಣಿಕೆಯಾಗಿದೆ. ವಚನಗಳ ಮೂಲಕವೇ

ಕನ್ನಡ ಗದ್ಯ ಚರಿತ್ರೆ ಆರಂಭವಾಗುತ್ತದೆ. ಅರ್ಥಾತ್ ಗದ್ಯಕ್ಕೆ ವೀರಶೈವ ಕವಿಗಳೇ ಮೊದಲಿನವರೆಂದು ಹೇಳಬೇಕು. ಹರಿಹರನು ತನ್ನ ಶಿವಶರಣರ ರಗಳೆಗಳಲ್ಲಿ ಸಂಪೂರ್ಣ ಒಂದು ಸ್ಥಲವನ್ನು ಗದ್ಯದಲ್ಲಿಯೇ ಬರೆದಿದ್ದಾನೆ. ಸರ್ವಜ್ಞನ ತ್ರಿಪದಿಗಳಂತೂ ಸರ್ವಜನ ಪ್ರಿಯವಾಗಿವೆ. ನಿಜಗುಣ ಶಿವಯೋಗಿ, ಹಾಗೂ ಸಪ್ಪಣ್ಣ ಕವಿಗಳ ಹಾಡುಗಳು ಬಹುಜನ ಕನ್ನಡಿಗರ ನಾಲಗೆಯ ಮೇಲೆ ಯಾವಾಗಲೂ ನಲಿಯುತ್ತಿದ್ದು, ಕನ್ನಡಿಗರ ಕಿವಿಗೆ ಇಂಪನ್ನೂ, ಬುದ್ಧಿಗೆ ಬೆಳಕನ್ನೂ ಕೊಡುತ್ತಿವೆ. ಹೀಗೆ ಹಾಡುಗಳೂ ಕೂಡ ವೀರಶೈವ ಕವಿಗಳಿಂದ ಕನ್ನಡಕ್ಕೆ ಕೊಡಲ್ಪಟ್ಟಿವೆ. ಇನ್ನು ನಿಜಗುಣ ಶಿವಯೋಗಿ ಕವಿಯೊಬ್ಬನೇ ಕನ್ನಡಕ್ಕೆ ಸಾಂಗತ್ಯ, ಗದ್ಯ ರಗಳೆ, ತ್ರಿಪದಿಗಳನ್ನು ಕೊಟ್ಟಿರುವುದು ಕಂಡುಬರುತ್ತದೆ. ಈ ಕವಿಯು ಒಂದು ದೃಷ್ಟಿಯಿಂದ ವೀರಶೈವ ಕವಿಗಳ ವೈವಿಧ್ಯದ ಪ್ರತೀಕದಂತಿದ್ದಾನೆಂದು ಹೇಳಬೇಕಾಗಿದೆ. ವಿವಿಧ ಜ್ಞಾನವನ್ನು ಕನ್ನಡಿಸಿದುದರ ಮೂಲಕವೂ ಕೂಡ ಆ ಕವಿ ವೀರಶೈವ ಕವಿಗಳ ಪ್ರತಿನಿಧಿಯಂತಿದ್ದಾನೆ. ಚಂಪೂ ರೂಪವನ್ನು ವೀರಶೈವರ ಪ್ರಥಮ ಪ್ರಬಲ ಕವಿಯಾದ ಹರಿಹರನೇ ಕೊಟ್ಟಿದ್ದಾನೆ. ಈ ಚಂಪೂ ರೂಪವು ಸೋಮರಾಜ, ಸುರಂಗ, ವೀರಭದ್ರ ಕವಿಗಳಲ್ಲಿ ಕಳೆಗೊಂಡು, ಶ್ರೀಷಡಕ್ಷರದೇವನಲ್ಲಿ ಬೆಡಗನ್ನು ಪಡೆದು, ಉಜ್ವಲವಾಗಿ ಪರಿಣಮಿಸಿದೆ. ವೀರಶೈವರ 'ಶೂನ್ಯಸಂಪಾದನೆ' ಎಂಬ ಗ್ರಂಥದ ರೂಪವೂ ಕೂಡ ಕನ್ನಡಕ್ಕೆ ಹೊಸತೇ ಸರಿ. ಆ ಗ್ರಂಥವನ್ನು ಪ್ಲೇಟೋನ ಸಂವಾದಕ್ಕೆ ಹೋಲಿಸಬಹುದೆಂದು ವಿಮರ್ಶಕರು ಹೇಳುತ್ತಾರೆ. ಅದು 'ಹಾಲತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳಲು, ತವರಾಜದಂತಹ ನೆರೆ-ತೊರೆಗಳು' ಇತ್ಯಾದಿ ಬಣ್ಣಿಸಲ್ಪಟ್ಟ ಶಿವಶರಣರ ವಚನಗಳನ್ನು ಸುವ್ಯವಸ್ಥಿತವಾಗಿ, ಸಂಭಾಷಣಾರೂಪವಾಗಿ, ಪ್ರಶ್ನೋತ್ತರರೂಪವಾಗಿ ಅಳವಡಿಸಿಕೊಂಡ ಗ್ರಂಥಗಳಾಗಿವೆ. ಅರ್ಥಾತ್ ವೀರಶೈವ ಸಾಹಿತ್ಯದಲ್ಲಿ ವಚನ, ರಗಳೆ, ಷಟ್ಪದಿ, ಗದ್ಯ, ತ್ರಿಪದಿ, ಸಾಂಗತ್ಯ, ಹಾಡು, ಚಂಪೂ ಇವೆಲ್ಲವುಗಳೂ ಸಮಾವೇಶವಾಗಿರುತ್ತವೆ.

ಅಭ್ಯಾಸದ ಅನುಕೂಲತೆಗಾಗಿ ಕನ್ನಡ ಸಾಹಿತ್ಯಕ್ಷೇತ್ರವನ್ನು ಮೂರು ಭಾಗವಾಗಿ ವಿಭಾಗಿಸುವಾಗ ಮಧ್ಯಭಾಗವನ್ನು 'ವೀರಶೈವಕಾಲ' ಎಂದು ಹೇಳುವದುಂಟು. ಹೀಗೆ ಮತವನ್ನು ಅನುಸರಿಸಿ ಕಾಲವಿಭಾಗಮಾಡುವುದು ಸರಿಯಲ್ಲವೆಂದು ವಾದಿಸುವವರು– ಈ ವಿಭಾಗಗಳು ಜಾತಿಯನ್ನು ಸೂಚಿಸಲಿಕ್ಕೆ ಇಲ್ಲ, ಆದರೆ ಅಭ್ಯಾಸದ ಅನುಕೂಲತೆಗಾಗಿ ಇವೆಯೆಂಬುದನ್ನು ಲಕ್ಷಕ್ಕೆ ತಂದುಕೊಳ್ಳಬೇಕು. ಹಾಗೂ ಜೈನ, ವೀರಶೈವ, ಬ್ರಾಹ್ಮಣ ಮತದ ಕವಿಗಳ ಕಾವ್ಯಗಳಲ್ಲಿ ಆವರವರ ಕೆಲವು ವೈಶಿಷ್ಟ್ಯಗಳು ತೋರಿಬರುವುದರಿಂದ ಅವುಗಳನ್ನು ಈ ರೀತಿ ವಿಭಾಗಿಸಿ ಹೇಳುವುದು

ತಪ್ಪಲ್ಲವೆಂದು ನಾನು ನಂಬುತ್ತೇನೆ. ಈ ನನ್ನ ಲೇಖನದಲ್ಲಿಯ ನಿರೂಪಣೆಯು ಅಂತಹ ವಿಭಾಗವು ತಪ್ಪಲ್ಲವೆಂಬುದನ್ನು ಸೂಚಿಸುವಂತಿದೆ. ಆದರೆ ಹೀಗೆ ವಿಭಾಗ ಮಾಡುವಾಗ ಕಾಲವನ್ನು ಕಟ್ಟುನಿಟ್ಟಾಗಿ ನಿರ್ದೇಶಿಸಲು ಮಾತ್ರ ಸಾಧ್ಯವಿಲ್ಲ. ಒಂದು ಶತಮಾನದಲ್ಲಿ ಅಥವಾ ವಿಭಾಗದಲ್ಲಿ ಒಂದೇ ಮತದ ಕವಿಗಳು ಕಾವ್ಯ ನಿರ್ಮಾಣ ಮಾಡಿದರು ಎಂಬ ಅರ್ಥದಲ್ಲಿ ಮಾತ್ರ ಈ ವಿಭಾಗಗಳನ್ನು ತಿಳಿದುಕೊಳ್ಳಬಾರದು. ಏಕೆಂದರೆ ಈ ಮೂರೂ ಮತದ ಕವಿಗಳು ಅನೇಕ ಸಲ ಒಂದೇ ಕಾಲದಲ್ಲಿ ಸಾಹಿತ್ಯ ನಿರ್ಮಾಣ ಮಾಡಿದ್ದು ಕಂಡುಬರುತ್ತದೆ. ಆದರೆ ಕನ್ನಡದಲ್ಲಿ ಸಾಹಿತ್ಯ ನಿರ್ಮಾಣವು ಜೈನರಿಂದ ಆರಂಭವಾಗಿ, ಮುಂದೆ ವೀರಶೈವ ಕವಿಗಳು ಹಾಗೂ ಬ್ರಾಹ್ಮಣ ಕವಿಗಳಿಂದ ಈ ಕಾರ್ಯವು ಮುಂದುವರಿಸಲ್ಪಟ್ಟಿತು. ಪ್ರಸ್ತುತ ವಿಭಾಗವನ್ನು 'ನಡುಗನ್ನಡದ ಕಾಲ'ವೆಂದೂ 'ಮತಪ್ರಚಾರಕ ಕಾಲವೆಂದೂ' 'ಬಸವಯುಗ'ವೆಂದೂ ಬೇರೆ ಬೇರೆ ದೃಷ್ಟಿಯಿಂದ ವಿಮರ್ಶಕರು ಬೇರೆಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ. ವೀರಶೈವ ಕವಿಗಳಲ್ಲಿ ಪ್ರಸಿದ್ಧವೆಂದು ತೋರುವ ಕೆಲವು ಹೆಸರುಗಳನ್ನು ಹಾಗೂ ಕೆಲವೊಂದು ಒಲವುಗಳನ್ನು ಮಾತ್ರ ಸ್ಥೂಲವಾಗಿ ಈ ಲೇಖದಲ್ಲಿ ನಿರೂಪಿಸಬಹುದು.

ವೀರಶೈವ ಸಾಹಿತ್ಯವು ಮೊದಲಾಗುವುದು ವಚನಕಾರರಿಂದಲೇ ಸರಿ. ಸುಮಾರು ೨೦೦ರಷ್ಟು ವಚನಕಾರರು ಇದ್ದಿರಬಹುದೆಂದೂ, ೧೬೦ ಕೋಟಿ ವಚನಗಳು ನಿರೂಪಿಸಲ್ಪಟ್ಟವೆಯೆಂದೂ ಹೇಳಲಾಗುತ್ತದೆ. ಇವುಗಳಲ್ಲಿ ವಚನದ ಸಂಖ್ಯೆ ನಿಜವಾಗಿಯೂ ಅಷ್ಟಿರದೆ ವಿಪುಲತೆಯನ್ನು ತೋರಿಸುವ ದೃಷ್ಟಿಯಿಂದ ಹೇಳಲ್ಪಟ್ಟಿರಬೇಕೆಂದು ನಂಬಬಹುದು. ಈ ವಚನಕಾರರಲ್ಲಿ ಬಸವ, ಅಲ್ಲಮ, ಅಕ್ಕ ಮಹಾದೇವಿ ಈ ಹೆಸರುಗಳು ಹೆಚ್ಚು ಉಜ್ವಲವಾಗಿವೆ. ಬಸವನ ಮನಂಬುಗುವ ರೀತಿ, ಅಲ್ಲಮನ ಜ್ಞಾನದ ಕಿಡಿಗಳು, ಅಕ್ಕನ ಕಾವ್ಯರಮಣೀಯತೆ ಇವು ಗಮನಾರ್ಹವಾಗಿವೆ. ಸ್ತ್ರೀಯರೂ ಮುಂದೆ ಬಂದು ವಚನಸಾಹಿತ್ಯವನ್ನು ಕನ್ನಡಕ್ಕೆ ಸಲ್ಲಿಸಿದರು. ಈ ಅನೇಕ ವಚನಗಳು ಸ್ವಾನುಭವ ಸಂಪತ್ತಿನಿಂದ ಕೂಡಿದ ಹೃದ್ಯವಾದ ಗದ್ಯದ ತುಂಡುಗಳಾಗಿವೆ. ಇವುಗಳನ್ನು 'ಕನ್ನಡದ ಉಪನಿಷತ್ತು'ಗಳೆಂದು ಕರೆಯಲಾಗಿದೆ. ಬಸವಣ್ಣನವರ ಮೃದುನುಡಿಗಳೂ, ಅಂಬಿಗರ ಚೌಡಯ್ಯನ ಕಠಿನೋಕ್ತಿಗಳೂ, ಎರಡು ತುದಿಗಳನ್ನು ನಿರ್ದೇಶಿಸುವಂತಿವೆ. ಹನ್ನೆರಡನೆಯ ಶತಮಾನದ ಮಧ್ಯದಿಂದಲೇ ವಚನಕಾರರ ಕಾಲವು ಆರಂಭವಾಗುತ್ತದೆಂದು ಸ್ಥೂಲವಾಗಿಟ್ಟುಕೊಳ್ಳಬಹುದು. ಆದರೆ ಹನ್ನೊಂದನೆಯ ಶತಮಾನದಿಂದಲೇ ದಾಸಿಮಯ್ಯನು ವಚನಸಾಹಿತ್ಯವನ್ನು ಮೊದಲುಮಾಡಿದನು ಎಂಬ ಹೇಳಿಕೆಯೂ ಇದೆ. ಹನ್ನೆರಡನೆಯ ಶತಮಾನದ ಅನಂತರ ವಚನಗಳು ಹೆಚ್ಚಾಗಿ ಬರೆಯಲ್ಪಟ್ಟಿಲ್ಲ.

ವಚನಕಾರರ ನಂತರ ನಾವು ಹರಿಹರ-ರಾಘವಾಂಕರ ಕ್ರಾಂತಿಯನ್ನು ಕಾಣುತ್ತೇವೆ. ಈ ಇಬ್ಬರು ಉದ್ದಾಮ ಕವಿಗಳು ಕನ್ನಡ ಸಾಹಿತ್ಯದಲ್ಲಿ, ಭಾಷೆಯಲ್ಲಿ ಅಪೇಕ್ಷಣೀಯವಾದ ಕ್ರಾಂತಿಯನ್ನು ತಂದರು.

> ನೋಡುವೊಡೊಂದಕ್ಕರಮುದು ।
> ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ ॥
> ಕೊಡೆ ಕವಿತತಿ ವಿಚಾರಿಸ ।
> ಬೇಡದಱಿಂ ಱಳಕುಳಕ್ಷಳಂಗಳನಿದಱೊಳ್ ॥

ಎಂದು ಧೈರ್ಯವಾಗಿ ಹೇಳಿ ಹರಿಹರದೇವನು ಪ್ರಾಸವಿಷಯದಲ್ಲಿ ಱಳ, ಕುಳ, ಕ್ಷಳಗಳ ತೊಡಕನ್ನು ತೊಡೆದು ಹಾಕಲು ಯತ್ನಿಸಿದನು. ಮಾವನ ಕೆಚ್ಚೆದೆಯಿಂದ ಸ್ಫೂರ್ತಿಪಡೆದ ರಾಘವಾಂಕನು "ನಡೆವರೆಡಹದೆ ಕುಳಿತರೆಡಹುವರೆ" ಎಂದು ಷಟ್ಪದಿಯ ಹೊಸ ಹಾದಿಯನ್ನು ಕನ್ನಡಕ್ಕೆ ಹಾಕಿಕೊಟ್ಟನು. 'ಶಿವನಂ, ತದೀಯ ಶರಣವ್ರಜಮುಂ ಸ್ತುತಿಸಿ' ಹರಿಹರನು ಕೃತಕೃತ್ಯನಾದನು. 'ಹರನೆಂಬುದೇ ಸತ್ಯ, ಸತ್ಯವೆಂಬುದು ಹರನು'—ಎಂಬ ವಾಕ್ಯವ ನಿರುತವ ಮಾಡಿ ಮೂಜಗಕೆ ತೋರಿದ ಹರಿಶ್ಚಂದ್ರನ ಕಥೆ ಮೊದಲು ಹೇಳಿ, ಅನಂತರ ವೀರಶೈವ ಶರಣರ ಜೀವನಗಳನ್ನು ಕಾವ್ಯಗಳಲ್ಲಿ ಬಣ್ಣಿಸಿ ಧರ್ಮೋದ್ಧಾರ, ಭಾಷೋದ್ಧಾರಗಳಿಗೆ ರಾಘವಾಂಕನು ಕಾರಣನಾದನು. ಇವರಿಬ್ಬರ ಸಮಕಾಲೀನನಾದ ಕೆರೆಯಪದ್ಮರಸನು ವೀರ ಶೈವ ಧಾರ್ಮಿಕ ಸಾಹಿತ್ಯದ ಬೆಳವಣಿಗೆಗೆ ಕಾರಣನಾದನು. ಈತನು "ದೀಕ್ಷಾ ಬೋಧೆ" ಎಂಬ ಗ್ರಂಥವನ್ನು ಕನ್ನಡದಲ್ಲಿಯೂ 'ಶಿವಾದ್ವೈತ ಸಾಕಾರ ಸಿದ್ಧಾಂತ ಸಾನಂದ ಚರಿತ್ರೆ' ಎಂಬ ಗ್ರಂಥವನ್ನು ಸಂಸ್ಕೃತದಲ್ಲಿಯೂ ಬರೆದಿದ್ದಾನೆ. ಈ ಕವಿಗಳ ಕಾಲವು ಹದಿಮೂರನೆಯ ಶತಮಾನದ ಆದಿಭಾಗವೆಂದು ಇಟ್ಟುಕೊಳ್ಳಬೇಕು. ಹರಿಹರ ರಾಘವಾಂಕರು ೧೨೧೬ರಲ್ಲಿದ್ದರೆಂದು ತಿಳಿಯಲಿಕ್ಕೆ ಸಾಧನಗಳಿವೆ. ಇನ್ನು ಮುಂದೆ ಬರುವ ವೀರಶೈವ ಕವಿಗಳು ಉದ್ದಾಮ ಕವಿಗಳಾದ ಮತ್ತು ಪೂರ್ವಿಕರಾದ ಹರಿಹರ, ರಾಘವಾಂಕರನ್ನೂ ಹಾಗೂ ಧರ್ಮಜ್ಯೋತಿಗಳಾದ ಬಸವಣ್ಣ ಇತ್ಯಾದಿ ಶಿವಶರಣರನ್ನೂ ಸ್ತುತಿಸಿಯೇ ತಮ್ಮ ಕಾವ್ಯಗಳನ್ನು ಆರಂಭಿಸಿರುವುದು ಸ್ವಾಭಾವಿಕವಾಗಿದೆ.

ಹರಿಹರ, ರಾಘವಾಂಕರಾದ ಮೇಲೆ ಕಂಡುಬರುವ ಮಹತ್ವದ ವೀರಶೈವ ಕವಿಯೆಂದರೆ ಭೀಮಕವಿಯು. ಈತನು ಬಸವಣ್ಣನವರ ಜೀವನವನ್ನು ವಿಸ್ತಾರವಾಗಿ ಕನ್ನಡದಲ್ಲಿ ಬರೆದನು. ಈ ಕವಿಯಿಂದ ಷಟ್ಪದಿಯ ಬೆಳವಣಿಗೆಗೂ ಸಹಾಯವಾಗಿದೆ.

ಈತನು ಹರಿಹರ ರಾಘವಾಂಕರ ಕೃಪೆಯಿಂದಲೇ ಕೃತಿ ರಚಿಸುವೆನೆಂದು ಹೇಳಿಕೊಂಡಿದ್ದಾನೆ. ಧರ್ಮವೂ, ಕಾವ್ಯವೂ ಹಾಸುಹೊಕ್ಕಾಗಿರುವ ಕನ್ನಡ ಕೃತಿಗಳಲ್ಲಿ ಇದು ಒಂದಾಗಿದೆ. ಈ ಕವಿಯು ೧೩೬೯ರಲ್ಲಿದ್ದನೆಂದು ನಂಬಲಾಗಿದೆ. ಇನ್ನುಮುಂದೆ ಬರುವ ಕವಿಗಳು ವಿಜಯನಗರ ಸಾಮ್ರಾಜ್ಯದ ಪೋಷಣೆಯಲ್ಲಿದ್ದು ನಾಮಾಂಕಿತರಾಗಿದ್ದಾರೆ. ಅರ್ಥಾತ್ ಇನ್ನು ಮುಂದಿನ ಕಾಲವನ್ನು 'ವಿಜಯನಗರದ ಯುಗ'ವೆಂದು ಯಥಾರ್ಥವಾಗಿ ಕರೆಯಬಹುದಾಗಿದೆ. ಹೊಯ್ಸಳರ ಆಸ್ಥಾನದಲ್ಲಿ ಹರಿಹರ, ರಾಘವಾಂಕರು ಪ್ರಸಿದ್ಧಿಗೆ ಬಂದಂತೆ ವಿಜಯನಗರದಲ್ಲಿ ಲಕ್ಕಣ್ಣದಂಡೇಶ, ಚಾಮರಸರು ಪ್ರಖ್ಯಾತರಾಗಿದ್ದಾರೆ. ಲಕ್ಕಣ್ಣದಂಡೇಶನು ೧೪೨೯ರಿಂದ ೧೪೪೬ರ ವರೆಗೆ ಆಳಿದ ಪ್ರೌಢದೇವರಾಯನ ಮಹಾಪ್ರಧಾನನೂ, ಆಪ್ತಮಿತ್ರನೂ ಆಗಿದ್ದಂತೆ ತಿಳಿಯುತ್ತದೆ. ಈತನು ತನ್ನ ಒಡೆಯನ ರಾಜ್ಯದ ಅಭ್ಯುದಯಕ್ಕೂ, ವೀರಶೈವ ಧರ್ಮದ ಅಭ್ಯುದಯಕ್ಕೂ ಕಾರಣನಾದನು. ಈತನು 'ಶಿವತತ್ವ ಚಿಂತಾಮಣಿ'ಯೆಂಬ ಉತ್ಕೃಷ್ಟ ಧಾರ್ಮಿಕ ಗ್ರಂಥವನ್ನು ರಚಿಸಿದ್ದಾನೆ. ಆ ಗ್ರಂಥವನ್ನು ಕವಿಯೇ 'ಇದು ವೀರಶೈವ ಸಿದ್ಧಾಂತ ತಂತ್ರದ ಸೂತ್ರವಿದು, ಸಕಲವೇದಾಗಮದ ಶಿಖಾಸೂತ್ರವಿಂತಿದು' ಎಂದು ಬಣ್ಣಿಸಿದ್ದಾನೆ. ಅಲ್ಲದೆ ಅದು 'ಗುರುವಚನ, ಶ್ರುತಿಪುರಾಣಾಗಮ ಪರಮಾರ್ಥ, ವರಪುರಾತನರ ವಚನ, ಶಿವತಾಂತ್ರಿಕರು ಪೇಳ್ದ ಸಿದ್ಧಾಂತ, ಪರಮಾನುಭವದ ಅನುಪಮಗೋಷ್ಠಿ' ಇಂತಿವೆಲ್ಲವುಗಳನ್ನು ಮಥಿಸಿ ರಚಿಸಿದೆಯೆಂದು ಕವಿಯು ಹೇಳುತ್ತಾನೆ. ಪ್ರೌಢದೇವರಾಯನ ಆಳಿಕೆಯು ವೀರಶೈವರ ಧಾರ್ಮಿಕ ಸಾಹಿತ್ಯ ಚರಿತ್ರೆಯಲ್ಲಿ ಉಜ್ವಲವಾದ ಅಧ್ಯಾಯವಾಗಿದೆ. ಪ್ರೌಢದೇವರಾಯನು ವೀರಶೈವನಾಗಿರಬಹುದೆಂಬ ಹೇಳಿಕೆಯೂ ಇದೆ. ಬಸವ–ಚೆನ್ನಬಸವರಿಗೆ ತಮ್ಮ ಧರ್ಮ, ಸಾಹಿತ್ಯ ಪ್ರಚಾರಕ್ಕೆ ರಾಜರ ನೆರವು ದೊರೆತಿರಲಿಲ್ಲ. ಇದೀಗ ಅದು ಲಕ್ಕಣ್ಣದಂಡೇಶ, ಜಕ್ಕಣಾಚಾರ್ಯರಿಗೆ ದೊರೆಯಿತು. ಅದರಿಂದ ಈ ಕಾಲದಲ್ಲಿ ವೀರಶೈವ ಧಾರ್ಮಿಕ ಸಾಹಿತ್ಯವು ಚೆನ್ನಾಗಿ ಬೆಳೆದಿದೆ. ಈ ಯುಗದ ಹೆಚ್ಚು ಉಜ್ವಲವಾದ ಹೆಸರೆಂದರೆ ಚಾಮರಸನದು. ಜ್ಞಾನಜ್ಯೋತಿಯಾದ ಅಲ್ಲಮನ ಜೀವನ ಚರಿತ್ರೆಯನ್ನು, ಮೂರ್ತಿಸ್ವರೂಪವನ್ನು, ಬೋಧೆಯನ್ನು, ಧರ್ಮ ಪ್ರಚಾರವನ್ನು ರಮಣೀಯವಾಗಿ ಈ ಕವಿಯು ಪ್ರಭುಲಿಂಗಲೀಲೆಯಲ್ಲಿ ಚಿತ್ರಿಸಿದ್ದಾನೆ. ಈ ಮೊದಲೇ ಸೂಚಿಸಿದಂತೆ ಈ ಕಾವ್ಯವು ತೆಲಗು, ತಮಿಳು, ಮರಾಠಿ, ಸಂಸ್ಕೃತಗಳಿಗೆ ಪರಿವರ್ತಿಸಲ್ಪಟ್ಟಿರುವುದು ಕನ್ನಡಿಗರಿಗೆ ಅಭಿಮಾನದ ಸಂಗತಿಯು.

ತೋಂಟದ ಸಿದ್ಧೇಶ್ವರನು ಈ ಕಾಲದ ಒಳ್ಳೆಯ ಪ್ರಭಾವಶಾಲಿಯಾದ ವೀರಶೈವ ಯತಿಯಾಗಿದ್ದನು. ಈತನಿಂದ ವಚನಸಾಹಿತ್ಯವು ಪುನರುಜ್ಜೀವನವನ್ನು

ಹೊಂದಿತು. ಈತನು ಷಟ್ಸ್ಥಲ ಜ್ಞಾನ ಸಾರಾಮೃತವನ್ನು ವಚನರೂಪವಾಗಿ ಬರೆದಿದ್ದಾನೆ. ಈತನ ಪ್ರಭಾವದಿಂದ ವೀರಶೈವ ಮಠಗಳಲ್ಲಿ ಸುವ್ಯವಸ್ಥೆಯೂ, ಅಕ್ಷರ ಶಿಕ್ಷಣದ ವ್ಯವಸ್ಥೆಯೂ ಉಂಟಾಗಿರಬೇಕು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿಯೇ ಬರುವ ಇನ್ನುಳಿದ ಮಹತ್ವದ ಕವಿಗಳ ಹೆಸರುಗಳನ್ನು ಹೀಗೆ ಸಂಗ್ರಹಿಸಬಹುದು:

| ಕವಿ | ಕಾಲ | ಗ್ರಂಥ |
|---|---|---|
| ನೀಲಕಂಠಾಚಾರ್ಯ | (೧೪೮೫) | ಆರಾಧ್ಯಚರಿತ್ರೆ. |
| ನಿಜಗುಣ ಶಿವಯೋಗಿ | (೧೫೦೦) | ವಿವೇಕಚಿಂತಾಮಣಿ ಇತ್ಯಾದಿ ಜ್ಞಾನ ಕೋಶದಂತಿರುವ ಗ್ರಂಥ ಸಮುದಾಯ. |
| ಗುಬ್ಬಿ ಮಲ್ಲಣಾರ್ಯ | (೧೫೧೩) | ಭಾವಚಿಂತಾರತ್ನ. |

ಇವರಲ್ಲಿ ನಿಜಗುಣ ಶಿವಯೋಗಿಯ ಹೆಸರು ವೀರಶೈವ ಧಾರ್ಮಿಕ ಚರಿತ್ರೆಯಲ್ಲಿ, ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಗಣ್ಯವಾದುದಾಗಿದೆ. ಅಧ್ಯಾತ್ಮದ ಸಂಪತ್ತನ್ನು ಜನಸಾಮಾನ್ಯರ ಭಾಷೆಯಲ್ಲಿ ಹೇಳಿ ಈ ಕವಿಯು ಜ್ಞಾನದಾನದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಗುಬ್ಬಿ ಮಲ್ಲಣಾರ್ಯನು ಭಾವಚಿಂತಾರತ್ನ, ವೀರಶೈವಾಮೃತಪುರಾಣ ಎಂಬ ಉಪಯುಕ್ತ ಗ್ರಂಥಗಳನ್ನು ಬರೆದಿದ್ದಾನೆ. ಭಾವಚಿಂತಾರತ್ನವು ಷಡಕ್ಷರದೇವನ ರಾಜಶೇಖರವಿಳಾಸಕ್ಕೆ ಕಾವ್ಯವಸ್ತುವನ್ನು ಒದಗಿಸಿಕೊಟ್ಟಿದೆ. ವೀರಶೈವಾಮೃತಪುರಾಣವು ವೀರಶೈವ ಶರಣರ ಸಂಪ್ರದಾಯಗಳ ಬಗೆಗೆ ಸಂದರ್ಭಗ್ರಂಥವಾಗಬಹುದಾದ ಹೆಬ್ಬೊತ್ತಿಗೆಯಾಗಿದೆ. ಹೀಗೆ ವಿಜಯನಗರ ಯುಗದ ವೀರಶೈವ ಕವಿಗಳು ವೀರಶೈವ ಧರ್ಮದ ಬೆಳವಣಿಗೆಗೆ ಬಹುಮಟ್ಟಿಗೆ ಕಾರಣರಾಗಿದ್ದಾರೆ.

ಇನ್ನು ವಿಜಯನಗರದ ನಂತರದ ಕಾಲವನ್ನು ಅವಲೋಕಿಸಬೇಕಾಗಿದೆ. ಆದರೆ ರಕ್ಕಸತಂಗಡಗಿ ಯುದ್ಧವು ನಡೆದುಹೋದ ಸ್ವಲ್ಪ ದಿನಗಳ ಮೇಲೆ ವಿದ್ಯಾನಗರದ ಮಠದಲ್ಲಿಯೇ ಗುರುವಾಗಿದ್ದ ವಿರೂಪಾಕ್ಷ ಪಂಡಿತನು ೧೫೮೪ರಲ್ಲಿ ಚೆನ್ನಬಸವ ಪುರಾಣವನ್ನು ಬರೆದಿದ್ದಾನೆ. ಈ ಚೆನ್ನಬಸವ ಪುರಾಣವು ಬಸವಪುರಾಣ, ಪ್ರಭುಲಿಂಗಲೀಲೆಗಳಂತೆ ಧರ್ಮ ಹಾಗೂ ಕಾವ್ಯಗಳೆಂಬ ಹಾಸುಹೊಕ್ಕುಗಳ ನೆಯ್ಗೆಯಾಗಿದೆ. ಇದರಲ್ಲಿಯ ಷಟ್ಪದಿಯ ಝೇಂಕಾರವು ಇಂಪಾಗಿದೆ. ರಾಘವಾಂಕನಿಂದ ಮೊದಲಾಗಿ ಭೀಮಕವಿಯಿಂದ ಮುಂದುವರಿಸಲ್ಪಟ್ಟ ಷಟ್ಪದಿಯು ಚೆನ್ನಬಸವ ಪುರಾಣದಲ್ಲಿ ರಮಣೀಯವಾಗಿ ಬೆಳೆದು ಬಂದಿದೆ. ವಿರೂಪಾಕ್ಷಪಂಡಿತನು 'ವರ್ಣಕಕ್ಕಿಲ್ಲ ಲಕ್ಷಣಮೆಂಬ ಜನರ ನಾಣ್ನುಡಿಯಂ' ಅಲ್ಲೆನಿಸಲು ತನ್ನ ಕಾವ್ಯವನ್ನು ಹೇಳಹೊರಟಿದ್ದಾನೆ. ಹೀಗೆ ಮುಖ್ಯರಾದ ವೀರಶೈವ ಕವಿಗಳಲ್ಲಿ ಪ್ರಗತಿಶೀಲವಾದ ರೀತಿಯು ಇದೆಯೆಂದು ತಿಳಿದುಬರುತ್ತದೆ. ಈತನ ನಂತರ ಬರುವ ಉದ್ದಾಮಕವಿಯ

ಹೆಸರು ಷಡಕ್ಷರದೇವನದು. ಈತನು ರಾಜಶೇಖರವಿಳಾಸವನ್ನು ೧೬೫೫ರಲ್ಲಿ ಬರೆದಂತೆ ತಿಳಿಯುತ್ತದೆ. ಈತನ ಸುಪ್ರಸಿದ್ಧವಾದ ರಾಜಶೇಖರವಿಳಾಸ, ಬಸವರಾಜ ವಿಜಯ, ಶಬರಶಂಕರವಿಳಾಸ ಈ ಗ್ರಂಥಗಳಲ್ಲದೆ ಇನ್ನೂ ಹದಿನೆಂಟು ಕನ್ನಡ, ಸಂಸ್ಕೃತ ಗ್ರಂಥಗಳನ್ನು ಬರೆದಂತೆ 'ಶರಣ ಸಾಹಿತ್ಯ'ದ ಸಂಪಾದಕರು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಉಭಯ ಕವಿತಾ ವಿಶಾರದನಾದ ಈತನು 'ಸಕ್ಕದಗಬ್ಬಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್ ಬೆಕ್ಕಸಮುಣ್ಮುವಂತೆ ಪೊಗಳುತ್ತಿರೆ ಮೊಕ್ಕಳ ಮಾಗಿ ಸರ್ವ ರಸಮೊಪ್ಪುವಂತೆ' ಕಾವ್ಯಗಳನ್ನು ರಚಿಸಿರುವುದಾಗಿ ಹೇಳುತ್ತಾನೆ. ಉದ್ದಾಮ ಪಂಡಿತನಾದ ಈತನು ಜೈನನಾದ ದೇವಚಂದ್ರನ ರಾಜಾವಳೀಕಥೆ (೧೮೭೫) ಯಲ್ಲಿ 'ಕವಿಶೇಖರ' ನೆಂಬುದಾಗಿ ಕೀರ್ತಿಸಲ್ಪಟ್ಟಿದ್ದಾನೆ. ಈತನು ಚಂಪೂ ಶೈಲಿಯನ್ನು ಪುನರುಜ್ಜೀವನಗೊಳಿಸಿ ಅದನ್ನು ಉಜ್ವಲಗೊಳಿಸಿದ್ದಾನೆ.

೧೬೫೦ರಲ್ಲಿದ್ದ ಸಿದ್ಧನಂಜೇಶನ 'ಗುರುರಾಜ ಚಾರಿತ್ರ' ಮತ್ತು ರಾಘವಾಂಕನ ಕಾವ್ಯ, ೧೬೭೨ರಲ್ಲಿದ್ದ ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾ ಸೂತ್ರ ರತ್ನಾಕರ, ಮರಿತೋಂಟದಾರ್ಯನ ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ ಮುಂತಾದವು ವೀರಶೈವ ಗುರುಗಳು, ಕವಿಗಳು, ಸಂಪ್ರದಾಯ ಇವುಗಳನ್ನು ಅರಿಯಲು ಉಪಯುಕ್ತ ಗ್ರಂಥಗಳಾಗಿವೆ.

ವೀರಶೈವ ಕವಿಗಳಲ್ಲಿ ವಿರುಪರಾಜನಂತಹ ರಾಜನೂ, ಸರ್ವಜ್ಞನಂತಹ ತಿರುಕನೂ ಸಮಾವೇಶವಾಗುತ್ತಾರೆಂಬುದು ಮನೋರಂಜಕ ಸಂಗತಿಯಾಗಿದೆ.

ಸುಮಾರು ೧೬೮೦ರಿಂದ ಚಿಕ್ಕದೇವರಾಯನ ಆಳಿಕೆಯಲ್ಲಿ ವೈಷ್ಣವ ಕವಿಗಳ ಪ್ರಾಬಲ್ಯವು ಕಂಡುಬರುತ್ತಿದೆಯಾದರೂ ಸುಮಾರು ೧೭೦೦ರಲ್ಲಿದ್ದ ಸಪ್ಪಣ್ಣ ಕವಿಗಳ ಕೈವಲ್ಯಕಲ್ಪವಲ್ಲರಿಯು ಜನಪ್ರಿಯತೆಯನ್ನು ಪಡೆದಿದೆ. ೧೭೫೫ ರಲ್ಲಿ ನಿಟ್ಟೂರ ನಂಜಯ್ಯನೆಂಬ ವೀರಶೈವನು ಶಬ್ದಮಣಿದರ್ಪಣಕ್ಕೆ ಟೀಕೆಯನ್ನು ಬರೆದು ಹಳಗನ್ನಡ ವ್ಯಾಕರಣದ ಅಭ್ಯಾಸಕ್ಕೆ ಅನುಕೂಲ ಸಾಧನವನ್ನು ಒದಗಿಸಿ ಕೊಟ್ಟಿದ್ದಾನೆಂಬುದು ಗಮನಾರ್ಹವಾಗಿದೆ. ಹೀಗೆ ಕನ್ನಡ ಸಾಹಿತ್ಯ ನಿರ್ಮಾಣವಲ್ಲದೆ ನಿಘಂಟು, ವ್ಯಾಕರಣದ ಟೀಕೆ ಇವುಗಳಿಂದ ವೀರಶೈವರು ಕನ್ನಡದ ಅಭ್ಯಾಸ ಗ್ರಂಥಗಳನ್ನು ಒದಗಿಸಿಕೊಟ್ಟು ಕನ್ನಡದ ಬೆಳವಣಿಗೆಗೆ ಕಾರಣರಾಗಿದ್ದಾರೆ. ನಿಜಲಿಂಗಾರಾಧ್ಯರ ನಿಜಲಿಂಗ ಶತಕವೆಂಬ ನೀತಿಗ್ರಂಥವು ಹಿಂದಣ ಸೋಮೇಶ್ವರ ಶತಕದಂತೆ ಬಹುಜನ ಕನ್ನಡಿಗರ ನಾಲಗೆಯ ಮೇಲೆ ಕೇಳಬರುತ್ತಿದ್ದು ಕನ್ನಡಿಗರ ನೈತಿಕ ಬೆಳವಣಿಗೆಗೆ ಸಾಧನವಾಗಿದೆ. ಹತ್ತೊಂಬತ್ತನೆಯ ಶತಮಾನದ ಬಸವಪ್ಪ ಶಾಸ್ತ್ರಿಗಳು ಅಭಿನವ ಕಾಳಿದಾಸನೆಂಬ ಪ್ರಶಸ್ತಿಯನ್ನು ಪಡೆಯುವಷ್ಟು ಉದ್ದಾಮ

ಕವಿಗಳಾಗಿದ್ದರು. ಅವರು ಹೊಸಗನ್ನಡದ ಪುನರುಜ್ಜೀವನಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಸಲ್ಲಿಸಿದ ವೀರಶೈವರಾಗಿದ್ದಾರೆ. ಹೀಗೆ ಕನ್ನಡದ ಉಳಿವು-ಬೆಳವಣಿಗೆಗೆ, ಪುನರುಜ್ಜೀವನಕ್ಕೆ ವೀರಶೈವ ಕವಿಗಳು ಅನೇಕ ರೀತಿಯಿಂದ ಕಾರಣರಾಗಿದ್ದಾರೆ. ಈ ಚಿಕ್ಕ ಲೇಖನದಲ್ಲಿ ಸ್ಥೂಲ ನಿರ್ದೇಶವನ್ನಲ್ಲದೆ ಹೆಚ್ಚು ವಿವರಣೆ ಕೊಡಲು ಸಾಧ್ಯವಿಲ್ಲ. ಷಟ್ಪದಿಯ ಹುಟ್ಟು, ಬೆಳವಣಿಗೆಗೆ ವೀರಶೈವ ಕವಿಗಳು ಹೆಚ್ಚಾಗಿ ಕಾರಣರಾಗಿದ್ದಾರೆ. ಹನ್ನೆರಡು, ಹದಿನೈದು, ಹದಿನಾರು, ಹದಿನೇಳನೆಯ ಶತಮಾನಗಳಲ್ಲಿ ವೀರಶೈವ ಕವಿಗಳ ಶ್ರೇಷ್ಠ ಸಾಹಿತ್ಯನಿರ್ಮಾಣವು ಕಂಡುಬರುತ್ತದೆ.

ಬಸವನ ವಚನ, ಹರಿಹರನ ರಗಳೆ, ರಾಘವಾಂಕನ ಷಟ್ಪದಿ, ನಿಜಗುಣನ ವೇದಾಂತಜ್ಞಾನಕೋಶ ಹಾಗೂ ವಿವಿಧ ಜಾತಿಯ ಸಾಹಿತ್ಯರೂಪಗಳು, ಸರ್ವಜ್ಞನ ಬಿಚ್ಚುನುಡಿಯ ಭಾಂಡಾರ, ಮರಿತೋಂಟದಾರ್ಯನ ಶಬ್ದಕೋಶ, ಸಿದ್ಧವೀರಣ್ಣೊಡೆಯರ ಶೂನ್ಯ ಸಂಪಾದನೆ, ನಿಟ್ಟೂರ ಸಂಜಯ್ಯನ ಶಬ್ದಮಣಿದರ್ಪಣದ ಟೀಕೆ—ಇವೇ ಮುಂತಾದವುಗಳು ವೀರಶೈವ ಸಾಹಿತ್ಯದ ವೈಶಾಲ್ಯವನ್ನು, ವೈಶಿಷ್ಟ್ಯವನ್ನು, ವೈವಿಧ್ಯವನ್ನು ತೋರಿಸಲು ಸಹಾಯಕಾರಿಯಾಗುತ್ತವೆ. ಇವುಗಳ ಪರಿಚಯ ಮಾಡಿಕೊಳ್ಳಬೇಕೆಂಬ ಪ್ರವೃತ್ತಿಯು ಈ ಲೇಖನವನ್ನೋದುವುದರಿಂದ ಉಂಟಾಗಬಹುದಾದರೆ ಈ ಲೇಖನವು ಸಾರ್ಥಕ್ಯವನ್ನು ಹೊಂದಿದಂತಾಯ್ತು.

# ಹದಿಮೂರನೆಯ ಶತಮಾನದ ಕನ್ನಡ ಸಾಹಿತ್ಯ

ಸಾಹಿತ್ಯಚರಿತ್ರೆಯಲ್ಲಿ ಶತಮಾನಗಳ ವಿಭಾಗವೆಂದರೆ ಅಭ್ಯಾಸದ ಅನುಕೂಲತೆ ಯಲ್ಲದೆ ಸಾಹಿತ್ಯಪ್ರವಾಹವನ್ನು ಅನೈಸರ್ಗಿಕವಾಗಿ ವಿಭಾಗಿವುಸುದಕ್ಕಲ್ಲ. ಒಬ್ಬನೇ ಕವಿಯು ಒಂದು ಶತಮಾನದ ಕೊನೆಯ ಭಾಗದಲ್ಲಿ, ಮುಂದಿನ ಶತಮಾನದ ಮೊದಲ ನೆಯ ಭಾಗದಲ್ಲಿ ಇರುವುದು ಸಹಜವಾಗಿದೆ. ಸಾಹಿತ್ಯಪ್ರವಾಹದ ಒಲವುಗಳು ಎರಡು ಶತಮಾನಗಳಲ್ಲಿ ಒಂದೇಯಾಗಿರುವುದಾಗಲಿ, ಒಂದೇ ಶತಮಾನದಲ್ಲಿ ಬೇರೆಬೇರೆ ಒಲವುಗಳು ಕಂಡುಬರುವದಾಗಲಿ ಸ್ವಾಭಾವಿಕವಾಗಿರಬಹುದು. ಆದ್ದರಿಂದ ಹದಿ ಮೂರನೆಯ ಶತಮಾನದ ನಿರ್ದಿಷ್ಟ ಅವಧಿಯಲ್ಲಿಯ ಒಲವುಗಳ ನಿರೂಪಣೆ ಸಂಪೂ ರ್ಣವಾಗಲಿ, ಸುಲಭವಾಗಲಿ ಆಗಲಿಕ್ಕಿಲ್ಲ. ಅಲ್ಲದೆ ಕನ್ನಡಸಾಹಿತ್ಯಕ್ಕೆ ವಿಶಿಷ್ಟವಾದ ಬೇರೊಂದು ತೊಡಕೂ ಇದೆ. ಅದೆಂದರೆ ಅನೇಕ ಕನ್ನಡ ಕವಿಗಳ ಕಾಲದ ವಿಚಾರ ವಾಗಿರುವ ಭಿನ್ನಾಭಿಪ್ರಾಯಗಳು. ಕೀರ್ತಿಶೇಷ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯ ಒಂದನೆಯ ಭಾಗದಲ್ಲಿ ಹೇಳಿದ ಕೆಲವು ಕವಿಗಳ ಕಾಲವನ್ನು ಬೇರೊಂದು ರೀತಿಯಲ್ಲಿ ಡಾ. ವೆಂಕಟಸುಬ್ಬಯ್ಯನವರು ತಮ್ಮದೊಂದು ಗ್ರಂಥದಲ್ಲಿ ಸೂಚಿಸಿದ್ದಾರೆ. ಈ ಇಬ್ಬರು ಸಂಶೋಧಕರ ಭಿನ್ನಾಭಿಪ್ರಾಯಗಳಲ್ಲಿ ಹೊಂದಿಕೆಯಾ ಗುವುದು ಸಾಧ್ಯವೇ ಇಲ್ಲದಂತಹ ವಾಗ್ಯುದ್ಧ ಒಮ್ಮೆ ನಡೆಯಿತು. ಮುಖ್ಯವಾಗಿ ಇವರಿ ಬ್ಬರಲ್ಲದೆ ಇನ್ನು ಕೆಲವು ಸಂಶೋಧಕರ ಅಭಿಪ್ರಾಯಗಳ ಮೂಲಕ ಕೆಲವು ಕವಿಗಳ ಕಾಲದ ವಿಚಾರವು ಅನೇಕ ಭಿನ್ನಾಭಿಪ್ರಾಯಗಳಿಗೆ ಎಡೆಗೊಟ್ಟಿರುವದರಿಂದ ಕನ್ನಡ ಸಾಹಿತ್ಯಚರಿತ್ರೆಯನ್ನು ನಿರೂಪಿಸುವುದು ಹೆಚ್ಚಾದ ತೊಡಕಿನ ಮಾತಾಗಿದೆ. ಆದರೆ

ಕವಿಚರಿತೆಕಾರರ ಅಭಿಪ್ರಾಯಗಳನ್ನು ಮುಖ್ಯವಾಗಿಟ್ಟುಕೊಂಡು ಅವಶ್ಯ ಕಂಡಲ್ಲೆಲ್ಲ ಭಿನ್ನಾಭಿಪ್ರಾಯಗಳನ್ನು ಸೂಚಿಸಿ ಲೇಖನ ಬರೆಯುವುದು ಈ ತೊಡಕನ್ನು ಬಿಡಿಸಲು ಅನುಕೂಲವಾಗಬಹುದೆಂದು ನಾನು ನಂಬುತ್ತೇನೆ. ಹಾಗೆ ಒಂದು ನಿಶ್ಚಿತ ಅಭಿಪ್ರಾಯವನ್ನುಅನುಸರಿಸದೆ ಹೋದಲ್ಲಿ ಅಸಂದಿಗ್ಧ ನಿರೂಪಣೆಗೆ ತುದಿ-ಮೊದಲಿಲ್ಲದೆ ಹೋಗಬಹುದು. ಆದಕ್ಕಾಗಿಯೇ ನಾನು ಆರಿಸಿಕೊಂಡ ಶತಮಾನದ ಸಾಹಿತ್ಯೇತಿಹಾಸವನ್ನು ಕವಿಚರಿತೆಕಾರರು ಕೊಟ್ಟ ಕಾಲಗಳ ದೃಷ್ಟಿಯಿಂದಲೇ ನಿರೂಪಿಸುವೆನು. ಅಂತೆಯೇ ನಾನು ಪ್ರೊಫೆಸರ ಕುಂದಣಗಾರರವರೊಡನೆ ಸಂಶೋಧನೆ ನಡೆಯಿಸಿದ ಫಲವಾಗಿ ಹರಿಹರ-ರಾಘವಾಂಕರ ಕಾಲ ೧೧೬೫[೧] ಎಂಬ ಸಿದ್ಧಾಂತಕ್ಕೆ ಬಂದಿದ್ದರೂ ಕೂಡ ಈ ಲೇಖನದಲ್ಲಿ ಅವರನ್ನು ಹದಿಮೂರನೆಯ ಶತಮಾನದಲ್ಲಿ ಸೇರಿಸಿಲ್ಲ. ಕವಿಚರಿತೆಕಾರರು ಹದಿಮೂರನೆಯ ಶತಮಾನದವರೆಂದು ಹೇಳಿರುವ ಕವಿಗಳನ್ನು ಅನುಲಕ್ಷಿಸಿಯೇ ನಾನು ಈ ಲೇಖನ ಬರೆಯುತ್ತಿದ್ದೇನೆ.

ಹನ್ನೆರಡನೆಯ ಶತಮಾನವು ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ಘನತೆಯನ್ನು ಪಡೆಯತಕ್ಕದುದು. ಸಾಹಿತ್ಯಚರಿತ್ರೆಯಲ್ಲಿ ಅದೊಂದು ಪುನರುಜ್ಜೀವನದ ಕಾಲ. ಆಗ ನಡೆದ ವೀರಶೈವ ಧಾರ್ಮಿಕ ವಿಪ್ಲವದ ಮೂಲಕ ಕನ್ನಡ ಸಾಹಿತ್ಯದಲ್ಲಿ ವಿಲಕ್ಷಣವಾದ ಜಾಗೃತಿಯುಂಟಾಯಿತು. ಹತ್ತನೆಯ ಶತಮಾನವನ್ನು ನಾವು ಉದ್ದಾಮ ಕವಿಗಳ ಕಾಲವೆಂದು ಕರೆಯಬಹುದಾದರೆ ಸಂಖ್ಯಾದೃಷ್ಟಿಯಿಂದ, ನವೀನ ಪ್ರಯೋಗಗಳ ದೃಷ್ಟಿಯಿಂದ, ಹಾಗೂ ಜನಜೀವನದ ಮೇಲೆ ಅದರಿಂದುಂಟಾದ ಜಾಗೃತಿಯ ಮೇಲಿಂದ ಹನ್ನೆರಡನೆಯ ಶತಮಾನವನ್ನು ನಾವು ಸಾಹಿತ್ಯವು ಸಾರ್ಥಕತೆಯನ್ನು ಪಡೆದ ಕಾಲವೆಂದು ಹೇಳಬಹುದಾಗಿದೆ. ಹದಿಮೂರನೆಯ ಶತಮಾನವು ಪ್ರತಿಕ್ರಿಯೆಯ ಕಾಲವಾಗಿದೆ. ಹನ್ನೆರಡನೆಯ ಶತಮಾನದ ಸಾಹಿತ್ಯಚರಿತ್ರೆಯಲ್ಲಿಯ ಶಕ್ತಿವಿಶೇಷಗಳ ಪ್ರತಿಕ್ರಿಯೆಯು ಹದಿಮೂರನೆಯ ಶತಮಾನದಲ್ಲಿ ಕಂಡುಬರುತ್ತಿದೆ. ಹನ್ನೆರಡನೆಯ ಶತಮಾನದ ಕೊನೆಗೆ ಸ್ವಲ್ಪಮಟ್ಟಿಗೆ ತಲೆದೋರಿದ ಜೈನರ ಪುನರುತ್ಥಾನವು ಹದಿಮೂರನೆಯ ಶತಮಾನದ ತುಂಬ ವ್ಯಾಪಿಸಿದೆ. ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ವೀರಶೈವ ಕವಿಗಳನೇಕರು ಹೆಚ್ಚಾಗಿ ಸಾಹಿತ್ಯ ನಿರ್ಮಾಣ ಮಾಡಿದ್ದರಿಂದ ಜೈನಕವಿಗಳು ಹಿಮ್ಮೆಟ್ಟಬೇಕಾಯಿತು. ಮೊದಲಿಗೆ ಅವರಿಗೆ ದೊರೆಯುತ್ತಿದ್ದ ರಾಜಾಶ್ರಯವೂ ಕಡಮೆಯಾಯಿತು. ಅಂತೆಯೆ ಕೆಲವು ಚರಿತ್ರೆಕಾರರು ಹನ್ನೆರಡನೆಯ ಶತಮಾನಕ್ಕೆ ಜೈನರ ಕನ್ನಡ ಸಾಹಿತ್ಯ ನಿರ್ಮಾಣವು ಕುಗ್ಗಿ

---

೧. ಕೊಲ್ಲಾಪುರ ಕರ್ನಾಟಕ ಸಂಘದವರು ಪ್ರಕಟಿಸಿದ ಹರಿಹರ ದೇವ ಎಂಬ ಗ್ರಂಥದಲ್ಲಿ 'ಹರಿಹರನಕಾಲ' ಎಂಬ ಲೇಖನ.

ತೆಂದು ಹೇಳುವದುಂಟು. ಆದರೆ ಈ ಮಾತು ಸಂಪೂರ್ಣವಾದ ಸತ್ಯವಲ್ಲ. ಏಕೆಂದರೆ ಹದಿಮೂರನೆಯ ಶತಮಾನದಲ್ಲಿ ಜೈನಕವಿಗಳೇ ಹೆಚ್ಚಾಗಿದ್ದಾರೆ.

ಈ ಶತಮಾನದಲ್ಲಿ ರಾಜಕೀಯ ಕ್ಷೋಭೆಯಿದ್ದುದು ಕಂಡುಬರುತ್ತದೆ. ಹೊಯ್ಸಳ ಅರಸರು ಹೆಚ್ಚಾಗಿ ಯುದ್ಧದ ಗಲಭೆಯಲ್ಲಿದ್ದರು. ಅವರು ದಕ್ಷಿಣದಲ್ಲಿಯೂ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸುವ ಪ್ರಯತ್ನಮಾಡಬೇಕಾಯಿತು. ಪುನಃ ಪುನಃ ಪಾಂಡ್ಯ ಚೋಳರೊಡನೆ ಯುದ್ಧ ನಡೆಯಿಸಬೇಕಾಗುತ್ತಿತ್ತು. ರಾಜ್ಯವಿಸ್ತರಣವು ನಡೆದಿತ್ತು. ಇದಲ್ಲದೆ ಅಂತಃಕಲಹ, ಮುಸಲ್ಮಾನರ ಅಭಿಯೋಗ ಇವುಗಳಿಂದ ರಾಜಕೀಯ ಕ್ಷೇತ್ರದಲ್ಲಿ ಸುಶಾಂತಿ ಉಳಿದಿರಲಿಲ್ಲ. ಅಂತೆಯೆ ಸಾಹಿತ್ಯನಿರ್ಮಾಣ ಹೆಚ್ಚಾಗಿ ಈಗ ನಡೆದಿಲ್ಲ. ಈ ಶತಮಾನದ ಕವಿಗಳ ಸಂಖ್ಯೆಯು ಈ ಮಾತಿಗೆ ನಿದರ್ಶನ.

ಇನ್ನು ಧಾರ್ಮಿಕ ರಂಗದಲ್ಲಿ ಜೈನರ ಪ್ರತಿಕ್ರಿಯೆಯ ವಾತಾವರಣವಿತ್ತು. ವೀರಶೈವ ಧಾರ್ಮಿಕ ವಿಪ್ಲವದಿಂದ ಜೈನಧರ್ಮಕ್ಕೆ, ಪರ್ಯಾಯದಿಂದ ಸಾಹಿತ್ಯಕ್ಕೆ ಉಂಟಾದ ಆಘಾತವನ್ನು ತೊಡೆದುಹಾಕಿ ಜೈನಧರ್ಮ-ಸಾಹಿತ್ಯಪ್ರಚಾರ ನಡೆಯುವಂತಹ ಪ್ರಯತ್ನಗಳು ಈಗ ನಡೆಯಹತ್ತಿದವು. ಕನ್ನಡ ಭಾಷೆಯಲ್ಲಿ ಬರಲಾರಂಭಿಸಿದ ಶೈಥಿಲ್ಯಗಳನ್ನು ತಡೆಯುವ ಹೊಣೆಯನ್ನು ಜೈನಕವಿಗಳು ಹೊರಹತ್ತಿದರು. ಈ ಮಾತಿಗೆ ಕೇಶಿರಾಜನ ಶಬ್ದಮಣಿದರ್ಪಣವೇ ಸಾಕ್ಷಿ.

ಈ ಶತಮಾನದ ಸಾಹಿತ್ಯಚರಿತ್ರೆಯನ್ನು ಮೇಲೆ ನಿರೂಪಿಸಿದ ರಾಜಕೀಯ ಧಾರ್ಮಿಕ ಹಿನ್ನೆಲದಿಂದಲೇ ಅರಿಯಬೇಕಾಗಿದೆ; ಅಳೆಯಬೇಕಾಗಿದೆ.

ಸು. ೧೨೦೦ ರಲ್ಲಿ ಕೆಳಗೆ ಸೂಚಿಸಿದ ಜೈನಕವಿಗಳು ಕಾವ್ಯ ಬರೆದರೆಂದು ಕವಿಚರಿತೆಕಾರರು ಹೇಳುತ್ತಾರೆ.

| | ಕವಿ | ಗ್ರಂಥ |
|---|---|---|
| (೧) | ಬಂಧುವರ್ಮ | ಹರಿವಂಶಾಭ್ಯುದಯ |
| | | ಜೀವಸಂಬೋಧನೆ |
| (೨) | ದೇವೇಂದ್ರಮುನಿ | ಬಾಲಗ್ರಹ ಚಿಕಿತ್ಸೆ |
| (೩) | ಶುಭಚಂದ್ರ | ಕಾರ್ತಿಕೇಯ ಅನುಪ್ರೇಕ್ಷೆಗೆ ಟೀಕೆ |

ಬಂಧುವರ್ಮನ ಹರಿವಂಶಾಭ್ಯುದಯವು ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನ ಚರಿತ್ರವಾಗಿದೆ. ಅದೇ ಕವಿಯ 'ಜೀವ ಸಂಬೋಧನೆ'ಯು ಜೈನಮತ ತತ್ತ್ವಗಳ ಬೋಧೆಯಾಗಿದೆ. ತೀರ್ಥಂಕರನ ಚರಿತ್ರೆಯ ಮೂಲಕವಾಗಿಯಷ್ಟೇ ಅಲ್ಲದೆ, ಜೀವನನ್ನು ಸಂಬೋಧಿಸಿ ಜೈನಮತ ತತ್ತ್ವಗಳನ್ನು ಉಪದೇಶಿಸುವ ಬಂಧುವರ್ಮನ ರೀತಿಯನ್ನು ಗಮನಿಸಬೇಕು. ವಚನಗಳ ಮೂಲಕ ವೀರಶೈವ ತತ್ತ್ವಗಳ

ಬೋಧೆ ಹೆಚ್ಚಾದುದರಿಂದ ಇಂತಹ ಗ್ರಂಥಗಳ ಅವಶ್ಯಕತೆಯಿದೆಯೆಂದು ಜೈನನಾದ ಬಂಧುವರ್ಮನಿಗೆ ಅನಿಸಿರಬೇಕು. 'ಎಲೆ ಎಲೆ ಜೀವರಾಶಿಗಳಿರಾ, ಮಱಿದಿನ್ನೆಗ ಮಿರ್ದು ಕೆಟ್ಟ ಗಾವಿಲಿಕೆಯೆ ಸಾಲ್ಗುಂ, ಇನ್ನಱಿದು ಬಂಧನ ಹೇತುಗಳಪ್ಪುವೆಲ್ಲವಂ ತೊಲಗಿಪುದು' ಎಂಬ ರೀತಿಯಲ್ಲಿ ಬಂಧುವರ್ಮನು ಜೈನತತ್ತ್ವ ನಿರೂಪಣೆಯನ್ನು ಮಾಡುತ್ತಾನೆ. ಇದರಿಂದ ಈ ಶತಮಾನದ ಜೈನಕವಿಗಳ ದೃಷ್ಟಿಯು ಹೇಗೆ ಹರಿಯಿತು ಎಂಬುದು ವ್ಯಕ್ತವಾಗುತ್ತದೆ.

ಸು. ೧೨೦೦ ರಲ್ಲಿ ದೇವಕವಿಯು ಕುಸುಮಾವಳಿ ಎಂಬ ಕಲ್ಪಿತ ಕಥೆಯನ್ನು ಬರೆದಿದ್ದಾನೆ.[೨] ಅವನು ಬ್ರಾಹ್ಮಣ ಕವಿಯಾಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಆದರೆ ಅದಕ್ಕೆ ಬಲವತ್ತರವಾದ ಕಾರಣಗಳಿದ್ದಂತೆ ಕಾಣುವದಿಲ್ಲ. ಈ ಕಟ್ಟುಕಥೆಯು ನೇಮಿಚಂದ್ರನ ಲೀಲಾವತಿಯ ಅನುಕರಣವಾಗಿದೆ. ಹಾಗೂ ತನ್ನ ಗ್ರಂಥಕ್ಕೆ 'ಚಿಕ್ಕರಾಜ ಚಮೂಪ' ಎಂಬವನನ್ನು ನಾಯಕನನ್ನು ಮಾಡಿಕೊಂಡಂತೆ ಆತನು ಹೇಳುತ್ತಾನೆ. ಅಲ್ಲದೆ ಈತನು ಜೈನನಾದ ಕವಿಕಮಲಭವನಿಗೆ ಶಾಂತೀಶ್ವರ ಪುರಾಣವನ್ನು ಬರೆಯಲು ಸಹಾಯ ಮಾಡಿದ್ದಾನೆಂದು ತಿಳಿಯುತ್ತದೆ. ಈ ಕಾರಣಗಳಿಂದ ಈತನು ಜೈನನಾಗಿರಬೇಕೆಂದೂ ಊಹಿಸಬಹುದಾಗಿದೆ.

ಈ ಶತಮಾನದಲ್ಲಿ ಜೈನಕವಿಗಳ ಸಂಖ್ಯೆಯೇ ಹೆಚ್ಚೆಂಬುದು ನಿರ್ವಿವಾದದ ಮಾತೇ ಸರಿ. ಹನ್ನೆರಡನೆಯ ಶತಮಾನದ ಮಧ್ಯದಲ್ಲಿ ವೀರಶೈವ ಧಾರ್ಮಿಕ ಜಾಗೃತಿಯಾದ ಕೆಲವು ವರುಷಗಳ ಮೇಲೆ ವೀರಶೈವ ಕವಿಗಳು ತೀರ ಇಲ್ಲದಂತೆ ಆಗಿ ಜೈನಕವಿಗಳೇ ಹೆಚ್ಚಿರುವುದು ಒಂದು ಗಮನಾರ್ಹವಾದ ಸಂಗತಿಯಾಗಿದೆ. ಈ ಶತಮಾನದಲ್ಲಿ ಕೆಳಗೆ ಸೂಚಿಸಿದಂತೆ ಜೈನಕವಿಗಳು ತೀರ್ಥಂಕರರ ಪುರಾಣಗಳನ್ನು ಬರೆದರು :

| | ಕವಿ | ಕಾಲ | ಗ್ರಂಥ |
|---|---|---|---|
| ೧. | ಪಾರ್ಶ್ವಪಂಡಿತ | (೧೨೦೫) | ಪಾರ್ಶ್ವನಾಥ ಪುರಾಣ. |
| ೨. | ಜನ್ನ | (೧೨೦೯) | ಅನಂತನಾಥ ಪುರಾಣ. |
| ೩. | ಗುಣವರ್ಮ II | (೧೨೩೫) | ಪುಷ್ಪದಂತ ಪುರಾಣ. |
| ೪. | ಕಮಲಭವ | (೧೨೩೫)[೩] | ಶಾಂತೀಶ್ವರ ಪುರಾಣ. |
| ೫. | ಮಹಾಬಲಕವಿ | (೧೨೫೪) | ನೇಮಿನಾಥ ಪುರಾಣ. |

---

೨. ದೇವಕವಿಯು ಈ ಶತಮಾನದ ಮಧ್ಯಭಾಗದಲ್ಲಿ ಅಂದರೆ ೧೨೪೫-೫೦ರಲ್ಲಿದ್ದಿರಬೇಕೆಂದು ಡಾ. ವೆಂಕಟಸುಬ್ಬಯ್ಯನವರ ಆಕ್ಷೇಪ.

೩. ಡಾ. ವೆಂಕಟಸುಬ್ಬಯ್ಯನವರು ಕಮಲಭವನ ಕಾಲವು ೧೨೫೫ ಎಂದು ಸೂಚಿಸುತ್ತಾರೆ.

ಹಸ್ತಿಮಲ್ಲನೆಂಬ ಕವಿಯು ಆದಿಪುರಾಣವೆಂಬ ಕಾವ್ಯವನ್ನು ಬರೆದುದಾಗಿ ಊಹೆ ಇದೆ.

ಹೀಗೆ ಆರುಜನ ಜೈನಕವಿಗಳು ಆರುಜನ ತೀರ್ಥಂಕರರ ವಿಚಾರವಾಗಿ ಪುರಾಣಗಳನ್ನು ಬರೆದಿರುವುದು ಜೈನರ ಪುನರುತ್ಥಾನವನ್ನೇ ಸೂಚಿಸುವಂತಿದೆ. ಈ ತೀರ್ಥಂಕರರ ಚರಿತೆಗಳಲ್ಲದೆ ಜನ್ನನ ಯಶೋಧರ ಚರಿತೆ, ಸಮುದಾಯದ ಮಾಘಣಂದಿಯ (೧೨೬೦) ಶಾಸ್ತ್ರಸಾರ ಸಮುಚ್ಚಯ, ಪದಾರ್ಥಸಾರ ಇವುಗಳ ಮೇಲಿನ ಟೀಕೆಗಳೂ ಬಾಳಚಂದ್ರ ಪಂಡಿತ (೧೨೭೩) ನ ದ್ರವ್ಯಸಂಗ್ರಹಸೂತ್ರದ ಕರ್ನಾಟಕ ಟೀಕೆ, ಪಂಚಪರಮೇಷ್ಠಿಗಳ ಬೊಲ್ಲಿ-ಇವುಗಳೂ ಕೂಡ ಜೈನಧರ್ಮತತ್ತ್ವ, ಸಂಪ್ರದಾಯ, ಯತಿಗಳ ಸ್ತುತಿ ಇವುಗಳನ್ನು ಒಳಗೊಂಡಿವೆ. ಇದಲ್ಲದೆ ಶಿಶುಮಾಯಣ (೧೨೩೩) ನ ತ್ರಿಪುರಹರಸಾಂಗತ್ಯ, ಆಂಡಯ್ಯ (೧೨೩೮) ನ ಕಬ್ಬಿಗರ ಕಾವ ಇವುಗಳಲ್ಲಿ ಕೂಡ ಜೈನಧರ್ಮದ ಶ್ರೇಷ್ಠತೆಯು ಪ್ರತ್ಯಕ್ಷವಾಗಿಯಾಗಲಿ, ಸೂಚ್ಯವಾಗಿಯಾಗಲಿ ನಿರೂಪಿಸಲ್ಪಟ್ಟಿದೆ. ಇದರಿಂದ ಈ ಶತಮಾನದಲ್ಲಿ ಜೈನಧರ್ಮದ ವಾತಾವರಣವು ಹೇಗೆ ಸುಳಿದಾಡುತ್ತಿದೆಯೆಂಬುದನ್ನು ಅರಿತುಕೊಳ್ಳಬಹುದು.

ಜೈನರಲ್ಲಿಯ ಕೆಲವು ಉದ್ದಾಮಕವಿಗಳೂ ಈ ಶತಮಾನದಲ್ಲಿ ಇದ್ದಾರೆ. ಅವರೇದರೆ:—

೧. ಜನ್ನ ೧೨೦೯

೨. ಗುಣವರ್ಮ II ೧೨೩೫

೩. ಕೇಶಿರಾಜ ೧೨೬೦

ಜನ್ನನು ಕನ್ನಡಸಾಹಿತ್ಯದ ಕವಿಚಕ್ರವರ್ತಿಗಳಲ್ಲಿ ಒಬ್ಬನಾಗಿದ್ದಾನೆ. ಜನ್ನನು ಪುಣ್ಯಚರಿತನಾಗಿ ಸರಸ್ವತಿ-ಲಕ್ಷ್ಮಿ ಇವರಿಬ್ಬರ ಕೃಪೆಗೆ ಪಾತ್ರನಾಗಿ 'ಕಾವ್ಯಕಲಾಪರಿಣತೆ' 'ಖಡ್ಗಕಳಾಪರಿಣತೆ' ಇವೆರಡನ್ನೂ ಪಡೆದು ಆದರಣೀಯನಾಗಿದ್ದಾನೆ. ಹದಿಮೂರನೆಯ ಶತಮಾನದ ಜೈನರ ಪ್ರತಿಕ್ರಾಂತಿಯ ಕಾಲದ ಶ್ರೇಷ್ಠಕವಿಯಾಗಿದ್ದಾನೆ.'ಜಿನಭಕ್ತಿ ಪ್ರೇರಕ,' ರಸಿಕಮನೋರಂಜಕ ಆದ ಕಾವ್ಯಗಳನ್ನು ಬರೆದ ಜನ್ನನನ್ನು ಓರ್ವ ಕವಿಯು ಕರ್ನಾಟಕ ಕೃತಿಗೆ ಸೀಮಾಪುರುಷನೆಂಬುದಾಗಿ ಕರೆದಿದ್ದಾನೆ. ಈ ಕವಿಯ 'ಅನಂತನಾಥ ಪುರಾಣ' 'ಯಶೋಧರ ಚರಿತೆ'ಗಳು ಪ್ರಕಟವಾಗಿವೆ.[೪]

---

೪ ಹೆಚ್ಚಿನ ವಿವರಗಳಿಗಾಗಿ 'ಜನ್ನಕವಿ ಪರಿಚಯ' (ಈ ಪುಸ್ತಕದ ಪುಟಗಳು ೪೪–೫೪) 'ಜನ್ನನೂ ವಾದಿರಾಜನೂ' (ಸಾಹಿತ್ಯ ಪರಿಷತ್ಪತ್ರಿಕೆ Vol. xv No. 4), ಜನ್ನನ ಕಾವ್ಯಗಳಲ್ಲಿ ಪ್ರಣಯ ನಿರೂಪಣೆ (ಪ್ರಬುದ್ಧಕರ್ನಾಟಕ ಆಂಗೀರಸ ಸಂವತ್ಸರದ ದೀಪಾವಳಿ ಸಂಚಿಕೆ) ಎಂಬ ಲೇಖನಗಳನ್ನು ನೋಡಬೇಕು.

ಎರಡನೆಯ ಗುಣವರ್ಮನ ಕಾಲದ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ.[೫] ಪುಷ್ಪದಂತ ಪುರಾಣವು ಒಂಬತ್ತನೆಯ ತೀರ್ಥಂಕರನ ಚರಿತ್ರೆಯಾಗಿದೆ. ಕಿರಿದಾದ ಕಥಾಭಾಗವನ್ನು ಕಾವ್ಯಮಯವಾಗಿ ಬೆಳೆಯಿಸಿ ಗುಣವರ್ಮನು ಅದನ್ನು ಒಂದು ಪ್ರೌಢಕಾವ್ಯವನ್ನಾಗಿ ಮಾಡಿದ್ದಾನೆ. ಈ ಕಾವ್ಯವು ಹೆಚ್ಚಾಗಿ ಪ್ರಾಸಬದ್ಧವಾಗಿದ್ದು ಯಮಕ-ಅನುಪ್ರಾಸಗಳಿಗೆ ಮಾದರಿಯಾಗಬಹುದಾಗಿದೆ. ಅಳ, ಕುಳಗಳ ನೇಮವನ್ನು ಅನುಸರಿಸಿ ಲಕ್ಷಣಬದ್ಧವಾಗಿ ಸಾಂಪ್ರದಾಯಿಕ ಚಂಪೂ ಶೈಲಿಯಲ್ಲಿ ಕಾವ್ಯವನ್ನು ಬರೆದಿದ್ದಾನೆ. ಕಾವ್ಯೋದ್ದೇಶವು ಜೈನಮತ ಪ್ರತಿಪಾದನೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದರೆ ಆಂಡಯ್ಯ ಕವಿಯು ಅಪರೋಕ್ಷವಾಗಿ ಸಿದ್ಧಮಾಡಿದ ಜೈನಧರ್ಮದ ಶ್ರೇಷ್ಠತೆಯ ಸೂಚನೆಯು ಗುಣವರ್ಮನ ಕಾವ್ಯದಲ್ಲಿಯೂ ಇದೆ.

ಪರಿಹರ ಪದ್ಮಜಾದಿಗಳನೋವದೆ ಕಂತು ಲತಾಂತಬಾಣಮೊಂ ।
ದೆರಡಱನೆಚ್ಚು ಗೆಲ್ದ ಜಯದಗ್ಗದ ಸುಗ್ಗಿಯ ಮೊೞಗೆಂದು ಬಂ ॥
ದಿರದೆ ಪೊಣರ್ಚಿ ಸೋಲ್ತು ವಿಜಯಧ್ವಜಮಂ ತೆಱೆದೆತ್ತು ಪೋದುದಂ ।
ನಿರವಿಪ ಪುಷ್ಪದಂತ ಮಕರಧ್ವಜನೀಗೆ ಮಸೋಸುರಾಗಮಂ ॥

ಪೂರ್ವದಲ್ಲಿ ಗಣಧರಾದಿಮಹಾಮುನಿಸತ್ಕವೀಶ್ವರರು ಮಾಡಿದ ಪುಷ್ಪದಂತ ಜಿನನಾಥ ಪುರಾಣಮನಿಂದು ಕನ್ನಡಂ ಮಾಡುವೆನೆಂದು ಪೊಣ್ದೆಂ. ಇದು ಶಕ್ತಿಯೋ, ಭಕ್ತಿಯೋ ಎಂದು ವಿನಯವನ್ನು ಸೂಚಿಸಿ ಕಾವ್ಯಾರಂಭ ಮಾಡುತ್ತಾನೆ. ಇದೂ ಕೂಡ ಜಿನಭಕ್ತಿದ್ಯೋತಕವಲ್ಲವೇ ? ಜೈನಕವಿಗಳ ಕಾವ್ಯೋದ್ದೇಶವನ್ನೇ ಗುಣವರ್ಮನು ತನ್ನ ಈ ಪದ್ಯದಲ್ಲಿ ಉಸುರಿದ್ದಾನೆ:

ವಿಷಯವಿಲೀನಮಾನಸದ ಮಾನಸರಂ ತಿಳಿಪಲ್ಕೆ ವೇಡಿ ನಿ ।
ರ್ವಿಷಯಿ ಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಂ ತಟಂ ।
ಕಷಮೆನೆ ತೋಱ ತದ್ರುಚಿಯ ಮೆಯ್ಯೊಳೆ ಸದ್ರುಚಿಯೊಳ್ ತೊಡರ್ಚುವೀ ।
ಮಿಷದ ಕವೀಂದ್ರರೀಗೆ ಸುಖ ಸೃಷ್ಟಿರತರ್ ಕವಿತಾ ಪ್ರಸಾದಮಂ ॥

---

೫ I ಆರ್. ನರಸಿಂಹಾಚಾರ್ಯ- ೧೩೨೦-೧೩೫೫ ರ ನಡುವೆ
II ಡಾ. ವೆಂಕಟಸುಬ್ಬಯ್ಯ- ಸು. ೧೧೧೭
III ಪುಷ್ಪದಂತ ಪುರಾಣದ ಸಂಪಾದಕರು- ೧೨೩೦-೧೨೫೦ ರ ನಡುವೆ
( ಶ್ರೀ. ವೆಂಕಟರಾವು, ಶೇಷ ಅಯ್ಯಂಗಾರ )
IV ಡಾ. ವೆಂಕಟಸುಬ್ಬಯ್ಯ- ಸು. ೧೨೧೮
(ಸಾಹಿತ್ಯಪರಿಷತ್ಪತ್ರಿಕೆಯ XIX ಸಂಚಿಕೆಯಲ್ಲಿ ಲೇಖನ ಬರೆದು ಗುಣವರ್ಮನ ಕಾಲದ ವಿಚಾರವಾಗಿ ಪುನರ್ವಿಮರ್ಶೆ ನಡೆಯಿಸಿ ಈ ಸಿದ್ಧಾಂತಕ್ಕೆ ಬಂದಿದ್ದಾರೆ. ) ಕಾರ್ತವೀರ್ಯ ಅರಸನ ನಾಳ್ಪ್ರಭುವಾದ ಶಾಂತಿನಾಥನು ಈ ಪುರಾಣ ರಚಿಸಲಿಕ್ಕೆ ಹೇಳಿದಂತೆ ತಿಳಿಯುತ್ತದೆ.

ಅಂತು 'ನಿರ್ವಿಷಯಿ ಜಿನೇಂದ್ರು ರುಂದ್ರು ಕಥೆಯೊಳ್ ನವಭಾವರಸಂಗಳಂ' ನಿರೂಪಿಸಿದ ಜೈನಕವಿಗಳ ಸಂಪ್ರದಾಯವನ್ನು ಗುಣವರ್ಮನು ಸರಿಯಾಗಿಯೇ ಕಾಯ್ದುಕೊಂಡಿದ್ದಾನೆ. ಆದರೆ ಕಥಾನಾಯಕನಾದ ನೃಪತಿ ಪದ್ಮ (ಈತನೇ ಮುಂದೆ ಪುಷ್ಪದಂತನೆಂಬ ತೀರ್ಥಂಕರನಾಗುವನು.) ನೊಡನೆ ತನ್ನ ಪೋಷಕನಾದ ಶಾಂತಿವರ್ಮನಾಟ್ಪ್ರಭುವು ಅಭಿನ್ನನೆಂದು ಹೇಳಿರುವುದರಲ್ಲಿ ಗುಣವರ್ಮನು ಒಂದು ಹೊಸ ಸಂಪ್ರದಾಯವನ್ನು ಹಾಕಿದಂತಿದೆ. ಪಂಪ-ರನ್ನರು ತಮ್ಮ ಲೌಕಿಕ ಕಾವ್ಯಗಳ ನಾಯಕರೊಡನೆ ತಮ್ಮ ಪೋಷಕ ಪ್ರಭುಗಳನ್ನು ಅಭಿನ್ನರಾಗಿ ವರ್ಣಿಸಿ, ಸ್ತುತಿಸಿದರು. ಇಲ್ಲಿ ಗುಣವರ್ಮನಾದರೋ ಜಿನನಾಗಲಿರುವ ತನ್ನ ಕಥಾನಾಯಕನಿಗೆ ಅಂದರೆ ತನ್ನ ಪಾರಮಾರ್ಥಿಕ ಕಾವ್ಯದ ನಾಯಕನಿಗೆ—ತನ್ನ ಪೋಷಕ ದೊರೆಯು ಅಭಿನ್ನನೆಂದು ಹೊಗಳುತ್ತಾನೆ. ಉದಾಹರಣೆಗಾಗಿ ಕೆಳಗಿನ ಪದ್ಯವನ್ನು ನೋಡಬೇಕು.

> ಅತನುಸಮರ್ಥತಾಪಮೊಡಗೂಡಿದ ಕೂಡದ ಪೆಂಡಿರೊಳ್ ಕುಳ ।
> ಕ್ಷಿತಿಸಹವರ್ತನಂ ಪದನತಾನತಭೂಪರೊಳುದ್ಧದಾನಸಂ ॥
> ಗತಿ ಬಹುಶಿಷ್ಟದುಷ್ಟರೊಳೊಡಂಬಡುತಿರ್ಪ ನಿದೇನೊ ಚಿತ್ರಮೀ ।
> ಕ್ಷಿತಿಪಚರಿತ್ರಮೆನ್ನದವರಾರ್ ಗಳ ನಾಟ್ಪ್ರಭುವಂಶಮೇರುವಂ ॥

ಹೀಗೆ 'ನಾಟ್ಪ್ರಭುವಂಶಮೇರು,' ಪದ್ಮರಾಜ ಇವರಿಬ್ಬರನ್ನು ಅಭಿನ್ನರಾಗಿ ಹೊಗಳಿದ ಪದ್ಯಗಳು ಪುಷ್ಪದಂತ ಪುರಾಣದಲ್ಲಿ ಕೆಲವು ಕಡೆಗೆ ಬರುತ್ತವೆ.

ಇನ್ನು ಮೂರನೆಯವನಾದ ಕೇಶಿರಾಜನು ಸುಪ್ರಸಿದ್ಧ ವೈಯಾಕರಣಿಯು. ಆತನ ಶಬ್ದಮಣಿದರ್ಪಣವೆಂಬ ವ್ಯಾಕರಣವು ಈಗಲೂ ಕನ್ನಡ ವ್ಯಾಕರಣದ ಅಧಿಕೃತ ಗ್ರಂಥವಾಗಿ ಉಳಿದಿದೆ. ಆ ವ್ಯಾಕರಣ ರಚನೆಯಲ್ಲಿ ಲಕ್ಷಣ-ಲಕ್ಷ್ಯಗಳನ್ನು ಹೇಳುವಲ್ಲಿ ಆತನ ಬಹುಶ್ರುತತ್ವ ತಾನಾಗಿಯೇ ಕಂಡುಬರುತ್ತಿದೆ. ಕನ್ನಡಭಾಷೆಗೆ ಒಂದು ಕಟ್ಟು ಹಾಕಲು ಹದಿಮೂರನೆಯ ಶತಮಾನದಲ್ಲಿ ಆತನು ಪ್ರಯತ್ನಿಸಿದಂತೆ ಇದೆ. ಕವಿಮಲ್ಲನೆಂಬ ಕನ್ನಡಕವಿಯು ಕೇಶಿರಾಜನನ್ನು—

"ಕರ್ಣಾಟಕದೊಳ್ ಪರಿಕಿಸೆ ಶಬ್ದಜ್ಞನಾವನೋರ್ವನೆ ಲೋಕಕ್ಕರಿದಲ್ತೆ, ಭಾಪು ಕವಿಕುಂಜರ ಕೇಶವರಾಜ" ಎಂಬುದಾಗಿ ಹೊಗಳಿದ್ದಾನೆ. ಕೇಶಿರಾಜನು ವ್ಯಾಕರಣವನ್ನಲ್ಲದೆ 'ಚೋಳಪಾಲಕ ಚರಿತ್ರ,' 'ಸುಭದ್ರಾಹರಣ,' 'ಪ್ರಬೋಧ ಚಂದ್ರೋದಯ' ಇತ್ಯಾದಿ ಗ್ರಂಥಗಳನ್ನು ಬರೆದಂತೆ ಹೇಳಿಕೊಂಡಿದ್ದಾನೆ. ಅವು ಎಂತಹ ಗ್ರಂಥಗಳೆಂಬುದು ನಮಗೆ ತಿಳಿಯುವಂತಿಲ್ಲ.

ನಡೆದುದೆ ಮಾರ್ಗಂ ಪದವಿಡ ।
ಲೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ ॥

ಎಂಬುದಾಗಿ ಆತನು ಹೆಮ್ಮೆಪಟ್ಟುಕೊಳ್ಳುವಾಗ ಕನ್ನಡಕವಿಗಳ ಸಂಪ್ರದಾಯವನ್ನು ಸರಿಯಾಗಿಯೇ ಪಾಲಿಸಿದ್ದಾನೆ. ಸಾಂಪ್ರದಾಯಿಕ ರೀತಿಯನ್ನನುಸರಿಸಿ ಕಾವ್ಯ ಬರೆದ ಉದ್ದಾಮ ಕವಿಗಳಲ್ಲದೆ ಈ ಶತಮಾನದಲ್ಲಿ ಚಂಪೂವನ್ನು ಬಿಟ್ಟುಕೊಟ್ಟು ಸುಲಭ ವಾದ ವೃತ್ತಗಳಲ್ಲಿ ಕಾವ್ಯ ಬರೆದ ಜೈನರೂ ಉಂಟು. ಇದೊಂದು ಈ ಶತಮಾನದ ವೈಶಿಷ್ಟ್ಯವೆಂದು ಹೇಳಬೇಕು. ಹಾಗೆ ಜನಪ್ರಿಯವಾದ ಕಾವ್ಯಗಳನ್ನು ಬರೆದವ ರೆಂದರೆ ಶಿಶುಮಾಯಣ (೧೨೩೩), ಕುಮುದೇಂದು (೧೨೭೫) ಇವರಿಬ್ಬರು.

ಕವಿಚರಿತೆಕಾರರ ಅಭಿಪ್ರಾಯವನ್ನು ಒಪ್ಪಿ ಶಿಶುಮಾಯಣನನ್ನು ಹದಿಮೂರ ನೆಯ ಶತಮಾನದ ಕವಿಯೆಂದು ತಿಳಿಯುವುದಾದರೆ[೬] ಕನ್ನಡದಲ್ಲಿ ಸಾಂಗತ್ಯವನ್ನು ಬರೆದ ಮೊದಲಿಗನು ಈತನೇ ಎಂದು ಹೇಳಬೇಕಾಗುತ್ತದೆ. ಈತನು ಅಂಜನಾ ಚರಿತ್ರೆ ಹಾಗೂ ತ್ರಿಪುರದಹನಸಾಂಗತ್ಯ ಎಂಬ ಎರಡು ಕಾವ್ಯಗಳನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ. ಮೊದಲನೆಯದರಲ್ಲಿ ಜೈನ ರಾಮಾಯಣಗಳಲ್ಲಿ ಅಡಕವಾಗಿರುವ ಅಂಜನಾದೇವಿಯ ಚರಿತ್ರವನ್ನು ಹೇಳಿದ್ದಾನೆ. ಎರಡನೆಯ ಗ್ರಂಥದಲ್ಲಿ ಜನನ, ಜರಾ, ಮರಣಗಳನ್ನು ತ್ರಿಪುರಗಳೆಂದು ರೂಪಕದಲ್ಲಿ ಹೇಳಿ ನೀತಿಬೋಧೆಯನ್ನು ಮಾಡುತ್ತಾನೆ. ಹಾಗೂ ಅದರಲ್ಲಿ ಜೈನ ಯತಿಗಳ ಸ್ತುತಿ, ಇತರ ಮತೀಯರ ಪರಿ ಹಾಸ ಇವುಗಳಿವೆ. ಜೈನರು ಸಾಂಪ್ರದಾಯಿಕ ಚಂಪೂಗಳನ್ನು ಬರೆಯುತ್ತಿರುವ ಕಾಲಕ್ಕೆ ಜನಪ್ರಿಯವಾದ ಸಾಂಗತ್ಯದ ಹಾಡಿನ ರೂಪವಾಗಿ ಕಾವ್ಯ ಬರೆಯಲು ಮೊದಲುಮಾಡಿದುದರಿಂದ ಶಿಶುಮಾಯಣನಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ.

ಕುಮುದೇಂದುವು ಷಟ್ಪದಿಯಲ್ಲಿ ರಾಮಾಯಣವನ್ನು ಬರೆದಿದ್ದಾನೆ. ಜೈನ ಸಂಪ್ರದಾಯವನ್ನು ಅನುಸರಿಸಿ ಈತನು ರಾಮಾಯಣವನ್ನು ಬರೆದಿದ್ದಾನೆ. ಈ ಸಂಪ್ರ ದಾಯವನ್ನು ಕನ್ನಡದಲ್ಲಿ ಈ ಮೊದಲೇ ನಾಗಚಂದ್ರ ಕವಿಯು ಆರಂಭಮಾಡಿದ್ದನು. ಆದರೆ ಅದನ್ನು ಷಟ್ಪದಿಯಲ್ಲಿ ಬರೆದುದು ಮಾತ್ರ ಹೊಸದು. ಕುಮುದೇಂದುವು ಷಟ್ಪದಿಗಳನ್ನು ಬರೆದ ಜೈನ ಕವಿಗಳಲ್ಲಿ ಮೊದಲಿಗನಾಗಿದ್ದಾನೆ.

ಈ ಶತಮಾನವು ಹಲವು ವೈಶಿಷ್ಟ್ಯಗಳಿಗೆ ಎಡೆಗೊಟ್ಟಿದೆ. ಅಂತಹ ವಿಶಿಷ್ಟ

೬ ಸಾಂಗತ್ಯವು ಕನ್ನಡದಲ್ಲಿ ೧೪೧೦ರ ನಂತರ ಬಂದಿರುವದಾದ್ದರಿಂದ ಶಿಶುಮಾಯಣನು ಹದಿಮೂರನೆಯ ಶತಮಾನದಲ್ಲಿ ಇದ್ದಿರಲಿಲ್ಲವೆಂದೂ ಹದಿನೇಳನೆಯ ಶತಮಾನದ ಮಧ್ಯದಲ್ಲಿ ಅಂದರೆ ೧೬೫೦ರಲ್ಲಿ ತನ್ನ ಗ್ರಂಥಗಳನ್ನು ಬರೆದನೆಂದೂ ಡಾ. ವೆಂಕಟಸುಬ್ಬಯ್ಯನವರು ಹೇಳುತ್ತಾರೆ. (ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ ಪು. ೩೪೧)

ರೀತಿಯ ಕವಿಗಳಲ್ಲಿ ಆಂಡಯ್ಯ (೧೨೩೫)ನು ಒಬ್ಬನಾಗಿದ್ದಾನೆ. ಕನ್ನಡ ನಾಡಿನ ವಿಷಯವಾಗಿರುವ ಆತನ ಹೆಮ್ಮೆ, ಕನ್ನಡನುಡಿಯ ವಿಷಯವಾಗಿರುವ ಅತ್ಯುತ್ಕಟ ಪ್ರೇಮ ಇವುಗಳಿಂದ ಆತನು ಕನ್ನಡದ ರಾಷ್ಟ್ರೀಯ ಕವಿಯೆಂದು ಕರೆಯಲ್ಪಡಲು ತಕ್ಕವನಾಗಿದ್ದಾನೆ. "ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಲಲಾಱರಿನಿತುಂ" ಎಂಬ ಬಹುದಿನಗಳಿಂದ ಬಂದ ಆರೋಪವನ್ನು ಅಲ್ಲಗಳೆದು "ಅಚ್ಚಗನ್ನಡಂ ಬಿಗಿವೊಂದಿರೆ" ಕಬ್ಬಿಗರ ಕಾವವನ್ನು ಬರೆದು ಕನ್ನಡ ಕವಿಗಳ ಕಲಂಕವನ್ನು ಹೋಗಲಾಡಿಸಿದ ಧೀರನಿವನು. ಕನ್ನಡದ ಇವನ ವೀರ ಪ್ರತಿಜ್ಞೆಯು ಕನ್ನಡಿಗನಾದವನಿಗೆ ಯಾವಾಗಲೂ ಅಭಿಮಾನವನ್ನು ತುಂಬತಕ್ಕಂತ ಹುದು. ಕನ್ನಡದ ಒಳ್ಪಿನ ನುಡಿಯಲ್ಲಿಯೇ 'ಪುದುಳ್ಗುಂ, ಲಕ್ಕಣಮುಂ, ಮೆಯ್ಸಿರಿಯುಂ' ಇವುಗಳನ್ನು ತುಂಬಿ ಸಂಸ್ಕೃತವನ್ನು ಬಿಟ್ಟೂ ಕನ್ನಡವು ಬಾಳಬಲ್ಲದೆಂಬುದನ್ನು ತೋರಿಸಿಕೊಟ್ಟು ಕನ್ನಡದ ಕೀರ್ತಿಧ್ವಜವನ್ನು ಮೆರೆಯಿಸಿದ ಬಂಟನಿವನು. ಇವರ ಜೊತೆಗೆ ಈತನು 'ಎರಗುವಂ ಆರುಹಂಗೆ, ಉಳಿದವರ್ಗೆ ಎರಗಂ' ಎಂಬ ಧೀರ ಪ್ರತಿಜ್ಞೆಯ ಜೈನನೂ ಅಹದು. ಅಂತೆಯೆ ಪರ್ಯಾಯದಿಂದ ಹಿಂದುಗಳ ದೇವನಾದ ಶಿವನನ್ನು ಜೇಷ್ಟೆಗೆಯ್ದು ಕೀಳುಮಾಡಿದಂತೆ ಇದೆ. ಶಿವನನ್ನು ಬೆಕ್ಕಸ ಬೆರಗುಗೊಳಿಸಿದ ಕಾಮನು ಜೈನ ಸವಣನನ್ನು ಕಂಡು ಗದಗದನೆ ನಡುಗಿದನೆಂದು ಹೇಳುವಲ್ಲಿ, ಕುಶಲನಾದ ಈ ಕವಿಯು ಜೈನಮತದ ಮೇಲ್ಮೆಯನ್ನು ಮೆರೆಯಿಸಿದಂತೆ ಇದೆ. ನಿಷ್ಠೆಯ ಕನ್ನಡಿಗನೂ ನಿಷ್ಠೆಯ ಜೈನನೂ ಆದ ಆಂಡಯ್ಯನು ಕನ್ನಡ ಕವಿಪ್ರಪಂಚದಲ್ಲಿಯೇ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿದ್ದಾನೆ. ಈತನು ಕುಶಲರೀತಿಯಲ್ಲಿ ಮನೋರಂಜಕ, ಕಾಲ್ಪನಿಕ ಕಥೆಯೊಂದನ್ನು ಕಟ್ಟಿ, ಅದನ್ನು ಖಂಡ ಕಾವ್ಯವಾಗಿ ಹೇಳಿ, ಕನ್ನಡ ಕಾವ್ಯಪ್ರಪಂಚಕ್ಕೆ ಒಂದು ವೈವಿಧ್ಯವನ್ನು ತಂದು ಕೊಟ್ಟಿದ್ದಾನೆ.

ಅಂತೂ ಈ ಶತಮಾನದಲ್ಲಿ ಜನ್ನನಂತಹ ಪುರಾಣ ಲೇಖಕರಿಂದ, ಶಿಶುಮಾಯಣನ ತ್ರಿಪುರದಹನದಂತಹ ರೂಪಕ ಗ್ರಂಥಗಳಿಂದ, ಸಮುದಾಯದ ಮಾಘಣಂದಿ, ಬಾಳಚಂದ್ರ ಪಂಡಿತರಂತಹರ ಟೀಕಾಗ್ರಂಥಗಳಿಂದ ಜೈನ ಧರ್ಮವು, ತತ್ತ್ವಗಳು ಪ್ರಚಾರವಾದುವು. ಅಲ್ಲದೆ, ಆಂಡಯ್ಯನಂತಹ ಕುಶಲಕವಿಯ ಅಪೂರ್ವ ಗ್ರಂಥದಿಂದಲೂ ಜೈನಧರ್ಮದ ಮೇಲ್ಮೆಯು ಮೆರೆದಿರುವುದನ್ನು ನೋಡಿದರೆ ಈ ಶತಮಾನವು ಹೇಗೆ ಜೈನರ ಪುನರುತ್ಥಾನದ ಕಾಲವಾಗಿದೆಯೆಂಬುದನ್ನು ಅರಿತು ಕೊಳ್ಳಬಹುದು.

ಈ ಕಾಲದ ಇನ್ನೊಂದು ವೈಶಿಷ್ಟ್ಯವೆಂದರೆ ಮಲ್ಲಿಕಾರ್ಜುನನೆಂಬ ಜೈನ

ಕವಿಯು 'ಸೂಕ್ತಿಸುಧಾರ್ಣವ' ಎಂಬ ಕಾವ್ಯ ಸಂಗ್ರಹವನ್ನು ಮಾಡಿಮದು. ಆತನ ಕಾಲವು ೧೨೪೫ ಎಂದು ಕವಿಚರಿತೆಕಾರರ ಅಭಿಪ್ರಾಯ.[೨] ಈ ಮಲ್ಲಿಕಾರ್ಜುನ ಕವಿಯು ಶಬ್ದಮಣಿದರ್ಪಣಕಾರನಾದ ಕೇಶಿರಾಜನ ತಂದೆಯು. ಸೂಕ್ತಿಸುಧಾರ್ಣವವು ಪೂರ್ವ ಕವಿಗಳ ಪದ್ಯಗಳ ವ್ಯವಸ್ಥಿತವಾದ ಸಂಗ್ರಹವಾಗಿದೆ. ಕಾವ್ಯಾಂಗಗಳಾದ ವಾರಿಧಿ, ಪರ್ವತ, ಪುರ ಇತ್ಯಾದಿ ಹದಿನೆಂಟು ವಿಷಯಗಳನ್ನು ವರ್ಣಿಸುವ ಬೇರೆ ಬೇರೆ ಕವಿಗಳ ಪದ್ಯಗಳನ್ನು ಮಲ್ಲಿಕಾರ್ಜುನನು ಈ ಗ್ರಂಥದಲ್ಲಿ ಸಂಗ್ರಹಿಸಿದ್ದಾನೆ. ಅಷ್ಟಾದಶವರ್ಣನೆಗಳಿಗಾಗಿ ಹದಿನೆಂಟು ಆಶ್ವಾಸಗಳುಳ್ಳ ಗ್ರಂಥದಲ್ಲಿ ೧೫ ಆಶ್ವಾಸಗಳು ಮಾತ್ರ ದೊರೆತಿವೆಯೆಂದು ಕವಿಚರಿತೆಕಾರರು ಬರೆಯುತ್ತಾರೆ. ಈ ಉಪಯುಕ್ತ ಗ್ರಂಥವು ಇನ್ನೂ ಪ್ರಕಟವಾದಂತೆ ಕಾಣುವದಿಲ್ಲ. ಇದು ಪ್ರಾಚೀನ ಕವಿಗಳ ಪರಿಚಯಕ್ಕೆ ಉತ್ತಮವಾದ ಕೈಪಿಡಿಯಾಗುವಂತಿದೆ. ಮಲ್ಲಿಕಾರ್ಜುನನಿಗಿಂತ ಮೊದಲು ಇದ್ದ ಕವಿಗಳಲ್ಲಿ ಕೆಳಗಿನವರ ಪದ್ಯಗಳು ಇದರಲ್ಲಿ ಬಂದಿವೆಯೆಂದು ಕವಿಚರಿತೆಕಾರರು ಬರೆಯುತ್ತಾರೆ:—

ಆದಿ ಗುಣವರ್ಮ, ಪಂಪ, ಪೊನ್ನ, ರನ್ನ, ನಾಗವರ್ಮ, ಚಂದ್ರರಾಜ, ದುರ್ಗಸಿಂಹ, ನಾಗಚಂದ್ರ, ಅಗ್ಗಳ, ನೇಮಿಚಂದ್ರ, ರುದ್ರಭಟ್ಟ, ಹರಿಹರ, ದೇವಕವಿ, ಕವಿಕಾಮ, ಆಂಡಯ್ಯ, ಎರಡನೆಯ ಗುಣವರ್ಮ, ಕಮಲಭವ, ಉದಯಾದಿತ್ಯ—ಇತ್ಯಾದಿ.

ಮೇಲೆ ಉಕ್ತರಾದ ಕನ್ನಡದ ಉತ್ತಮ ಕವಿಗಳ ಪದ್ಯಗಳ ಸಂಗ್ರಹವಾದ ಸೂಕ್ತಿಸುಧಾರ್ಣವವು ಪ್ರಾಚೀನ ಕನ್ನಡ ಕಾವ್ಯಪರಿಚಯಕ್ಕೆ ಒಳ್ಳೆಯ ಸಾಧನವಾಗುವುದೆಂದು ಬೇರೆ ಹೇಳಬೇಕಾಗಿಲ್ಲ. ಪ್ರಾಚೀನ ಕನ್ನಡದಲ್ಲಿ ಇಂತಹ ಪದ್ಯಸಂಗ್ರಹಗಳು ಎರಡು ಇವೆ. ಮೊದಲನೆಯದು ಈ ಸೂಕ್ತಿಸುಧಾರ್ಣವ. ಇದಕ್ಕೆ ಕಾವ್ಯಸಾರವೆಂದೂ ಹೆಸರಿದೆ. ಎರಡನೆಯದು ಸು. ೧೫೩೩ ರಲ್ಲಿ ಅಭಿನವವಾದಿ ವಿದ್ಯಾನಂದನೆಂಬ ಜೈನ ಕವಿಯಿಂದ ರಚಿಸಲ್ಪಟ್ಟ ಕಾವ್ಯಸಾರವು.

ಇನ್ನು ಈ ಶತಮಾನದಲ್ಲಿ ಕಂಡುಬರುವ ಇತರ ಮತೀಯ ಕವಿಗಳನ್ನು

---

೨. ಡಾ. ವೆಂಕಟಸುಬ್ಬಯ್ಯನವರು ಕವಿಚರಿತೆಕಾರರು ಸೂಚಿಸಿದ ಕಾಲವನ್ನಾಗಲಿ, ಮಲ್ಲಿಕಾರ್ಜುನನು ಜೈನನೆಂಬ ಮಾತನ್ನಾಗಲಿ ಒಪ್ಪುವುದಿಲ್ಲ. ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವವನ್ನು ೧೨೬೪ರಲ್ಲಿ ರಚಿಸಿದನೆಂದೂ, ಬಸರಾಳು ಶಾಸನದ ಕರ್ತೃವಾದ ಚಿದಾನಂದ ಕವಿಯೂ, ಮಲ್ಲಿಕಾರ್ಜುನ ಕವಿಯೂ ಒಬ್ಬನೇ ವ್ಯಕ್ತಿಯೆಂದೂ ಅವನು ಸ್ಮಾರ್ತ ಬ್ರಾಹ್ಮಣನೆಂದೂ ಅಭಿಪ್ರಾಯ ಪಡುತ್ತಾರೆ. [ ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ. ಪು. ೧೮೭, ೧೮೯]

ಹುಡುಕಿ ನೋಡಿದರೆ ಅಂತಹ ಹೆಸರುಗಳು ತೀರ ಕಡಮೆ ಎಂದು ಒಪ್ಪಬೇಕಾಗುತ್ತದೆ. ದೇವಕವಿಯ ಹೆಸರನ್ನು ಮೊದಲಿಗೆ ಸೂಚಿಸಿದೆ. ಅವನಲ್ಲದೆ ಪೋಲಾಳ್ವ ದಂಡನಾಥ (೧೨೨೪), ನರಹರಿತೀರ್ಥ (೧೨೮೧), ಎಂಬಿಬ್ಬರು ಬ್ರಾಹ್ಮಣ ಕವಿಗಳ ಹೆಸರುಗಳು ದೊರೆಯುತ್ತವೆ. ಪೋಲಾಳ್ವ ದಂಡನಾಥನು ಹರಿಚಾರಿತ್ರವೆಂಬ ಗ್ರಂಥವನ್ನು ಷಟ್ಪದಿಯಲ್ಲಿ ಬರೆದನೆಂದು ಒಂದು ಶಾಸನದಿಂದ ಊಹಿಸಬೇಕಾಗಿದೆ. ಇದು ನಿಜವಿದ್ದರೆ ಷಟ್ಪದಿಯನ್ನು ಬರೆದ ಮೊದಲನೆಯ ಬ್ರಾಹ್ಮಣ ಕವಿಯೂ ಇದೇ ಶತಮಾನದವನೆಂದು ಹೇಳಬೇಕಾಗುತ್ತದೆ. ಅಂದರೆ ಕನ್ನಡದಲ್ಲಿ ಷಟ್ಪದಿಯು ಬೆಳೆಯತೊಡಗಿದುದು ಈ ಶತಮಾನದಲ್ಲಿಯೇ ಎಂದು ಕಂಡುಬರುತ್ತದೆ.

ನರಹರಿತೀರ್ಥ ಕವಿಯ ಹಾಡುಗಳು ಈ ಶತಮಾನದ ಇನ್ನೂ ಒಂದು ವೈಶಿಷ್ಟ್ಯವನ್ನು ಸೂಚಿಸುತ್ತವೆ. ಮುಂದೆ ಹದಿನಾರು-ಹದಿನೇಳನೆಯ ಶತಮಾನಗಳಲ್ಲಿ ವಿಪುಲವಾಗಿ ಬೆಳೆದು ಜನಪ್ರಿಯವಾದ ದಾಸಕೂಟ ಸಾಹಿತ್ಯದ ಮೊದಲಿಗನು ನರಹರಿತೀರ್ಥನೇ ಸರಿ. ಆದರೆ ಮಧ್ವಾಚಾರ್ಯರ ಸ್ಫೂರ್ತಿಯು ಕನ್ನಡ ಸಾಹಿತ್ಯದ ಮೇಲೆ ಹದಿಮೂರನೆಯ ಶತಮಾನದಲ್ಲಿಯೇ ಹೆಚ್ಚಾಗಿ ಆಗದೆ, ಹದಿನಾರು-ಹದಿನೇಳನೆಯ ಶತಮಾನಗಳಲ್ಲಿ ಕಂಡುಬರುತ್ತಿರುವುದು ನಮ್ಮ ಸಾಹಿತ್ಯಚರಿತ್ರೆಯಲ್ಲಿ ಒಂದು ಸಮಸ್ಯೆಯೇ ಆಗಿದೆ. ಬಸವಣ್ಣನವರ ಧಾರ್ಮಿಕ ಕ್ರಾಂತಿಯ ಫಲವಾಗಿ ಅನೇಕರು ಅವರ ಕಾಲದಲ್ಲಿಯೇ ಅಸಂಖ್ಯ ವಚನಗಳನ್ನು ಬರೆದಂತೆ, ನರಹರಿತೀರ್ಥನಂತೆ ಅನೇಕ ದಾಸರು ಹಾಡುಗಳನ್ನು ಈ ಶತಮಾನದಲ್ಲಿ ಏಕೆ ಬರೆಯಲಿಲ್ಲವೋ? ೧೫೧೦ರಲ್ಲಿ ದಕ್ಷಿಣಕ್ಕೆ ಬಂದ ಚೈತನ್ಯನ ಸ್ಫೂರ್ತಿಯ ಪರಿಣಾಮವು ನಮ್ಮ ನಾಡಿನಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಅದರ ಫಲವಾಗಿಯೋ ಏನೋ, ಹದಿನಾರು-ಹದಿನೇಳನೆಯ ಶತಮಾನಗಳಲ್ಲಿ ಅನೇಕ ದಾಸರು ಹಾಡುಗಳನ್ನು ಬರೆದು, ಭಕ್ತಿಯನ್ನು ಬೋಧಿಸಿ, ಹೊಸಗನ್ನಡಕ್ಕೆ ಹಾದಿಮಾಡಿಕೊಟ್ಟರು. ಅಂತಹ ದಾಸರಲ್ಲಿ ಮೊದಲಿಗನಾದವನು ಈ ಶತಮಾನದವನು.

ಬಸವಣ್ಣನವರ ಕಾಲದಲ್ಲಿ ಅಸಂಖ್ಯ ವಚನಗಳು ರಚಿಸಲ್ಪಟ್ಟಿದ್ದರೂ ಹದಿಮೂರನೆಯ ಶತಮಾನದಲ್ಲಿ ಅವುಗಳ ಹೆಸರು ಕೇಳಬರದೆ ಇರುವದು ನಮ್ಮ ಸಾಹಿತ್ಯಚರಿತ್ರೆಯಲ್ಲಿಯ ಮತ್ತೊಂದು ಸಮಸ್ಯೆಯಾಗಿದೆ. ಕವಿಚರಿತೆಕಾರರ ಅಭಿಪ್ರಾಯಕ್ಕೆ ಭಿನ್ನವಾದ ಅಭಿಪ್ರಾಯದ ಪ್ರಕಾರ ಹರಿಹರ-ರಾಘವಾಂಕರನ್ನು ಈ ಶತಮಾನದಲ್ಲಿ ಸೇರಿಸಬೇಕಾಗುತ್ತದೆ. ಇವರನ್ನುಳಿದರೆ ವೀರಶೈವ ಕವಿಗಳ ಹೆಸರುಗಳು ಎರಡು ಮಾತ್ರ ಕವಿಚರಿತೆಯಲ್ಲಿ ಬರುತ್ತವೆ. ಒಬ್ಬನು ಸೋಮರಾಜ[೧೨೨೨][೮] ಇನ್ನೊಬ್ಬನು

೮. ಸೋಮರಾಜನು ಈ ಶತಮಾನದವನಲ್ಲವೆಂದೂ ಆತನ ಕಾಲವು ೧೫೨೨ ಆಗಿರಬೇಕೆಂದೂ ಡಾ. ವೆಂಕಟಸುಬ್ಬಯ್ಯನವರು ಸೂಚಿಸುತ್ತಾರೆ.

ಹರಭಕ್ತ. ಇವರಲ್ಲಿ ಹರಭಕ್ತನು ಸು. ೧೨೫೦ ರಲ್ಲಿದ್ದು ವೇದಭಾಷ್ಯವನ್ನು ಬರೆದನೆಂಬುದನ್ನು ಚೆನ್ನಬಸವ ಪುರಾಣದಿಂದ ಊಹಿಸಬೇಕಾಗಿದೆ ಮಾತ್ರ.

ಸೋಮರಾಜನು ರಾಜಕುಲದವನಾಗಿರಬೇಕು. ಈತನ ಉದ್ಭಟ ಕಾವ್ಯವೆಂಬ ಗ್ರಂಥದಲ್ಲಿ ಉದ್ಭಟನೆಂಬುವನು ಶಿವನನ್ನು ಒಲಿಸಿ ತನ್ನ ನಗರವನ್ನೆಲ್ಲ ಕೈಲಾಸಕ್ಕೆ ಕರೆದುಕೊಂಡು ಹೋದನೆಂಬ ಕಥೆಯಿದೆ. ಶಿವಭಕ್ತಿಯನ್ನು ನಿರೂಪಿಸುವ ಕಥೆಯಾದರೂ ಶೃಂಗಾರರಸದ ನಿರೂಪಣೆಯಿಂದ ತುಂಬಿರುವುದರಿಂದ ಈ ಕಾವ್ಯಕ್ಕೆ ಶೃಂಗಾರಸಾರವೆಂಬ ಹೆಸರೂ ಇದೆ.

ಮೇಲೆ ಸೂಚಿಸಿದ ಕವಿಗಳಲ್ಲದೆ ಈ ಶತಮಾನದಲ್ಲಿ ಕೆಲವು ಶಾಸನಕಾರರೂ ಆಗಿಹೋಗಿದ್ದಾರೆ. ಕಾವ್ಯಗಳ ಜೊತೆಗೆ ಕಲ್ಲಿನ ಮೇಲಿನ ಬರೆಹವೂ ಹೆಚ್ಚುತ್ತಿರುವುದನ್ನು ಗಮನಿಸಬೇಕು. ಜನ್ನನಂತಹ ಉದ್ದಾಮಕವಿಯು ಶಾಸನಕಾರನೂ ಆಗಿದ್ದನು. ಬಾಳಚಂದ್ರ ಕವಿಕಂದರ್ಪ (೧೨೦೪), ಕಲ್ಲಯ್ಯ (೧೨೦೭), ಕವಿನಾಗದೇವ (೧೨೨೪), ಮುನಿಚಂದ್ರ (೧೨೨೯), ಮಾದಿರಾಜ (೧೨೨೯), ಸೋಮನಾಥ ಪಂಡಿತ (೧೨೩೪), ಚಿದಾನಂದಕವಿ (೧೨೩೪), ಶ್ರೀ ವಿಜಯರ್ ದಶಕೀರ್ತಿದೇವರ್ [೧೨೩೪] ಚೇರೆಯ ಅಲ್ಲಾಳಬುಧ, ದಾಮೋದರ [೧೨೪೯], ಕವಿರಾಜ ಸಂಕಣ್ಣ [೧೨೮೭]— ಇತ್ಯಾದಿ ಶಾಸನಕಾರರ ಹೆಸರುಗಳನ್ನು ನಾವು ಈ ಶತಮಾನದಲ್ಲಿ ಕಾಣುತ್ತೇವೆ. ಈ ಶಾಸನಕಾರರಲ್ಲಿ ಹೆಚ್ಚು ಜನರು ಜೈನರೇ ಆಗಿದ್ದರೆಂಬ ಮಾತನ್ನೂ ನಾವು ಲಕ್ಷಿಸಬೇಕಾಗುತ್ತದೆ. ಆದ್ದರಿಂದ ಈ ಶತಮಾನದ ವಿವಿಧ ಸಾಹಿತ್ಯ ರೂಪಗಳನ್ನೆಲ್ಲ ಬರೆದವರು ಜೈನರೇ ಎಂದು ತಿಳಿಯುತ್ತದೆ. ಈ ಶತಮಾನದಲ್ಲಿ ಜೈನರ ಪ್ರಾಬಲ್ಯವನ್ನು ಸೂಚಿಸುವ ಹಯವದನರಾಯರ ಉಕ್ತಿಯೊಂದನ್ನು ಬೇರೊಂದು ಲೇಖನದಲ್ಲಿ ಉದಾಹರಿಸಿದ್ದೇನೆ. ಆ ಹೇಳಿಕೆ ಹೀಗಿದೆ: "In the thirteenth century we find a group of excellent Jain poets all closely related to one another, patronised by Hoysal Kings"[೯] ಇಲ್ಲಿ ಉಕ್ತರಾದ ಉದ್ದಾಮ ಜೈನ ಕವಿಗಳೆಂದರೆ ಜನ್ನ, ಮಲ್ಲಿಕಾರ್ಜುನ, ಕೇಶಿರಾಜ ಇವರೇ ಆಗಿರಬೇಕು. ಜನ್ನನ ಸೋದರಿಯ ಗಂಡನು ಮಲ್ಲಿಕಾರ್ಜುನನು. ಮಲ್ಲಿಕಾರ್ಜುನನ ಮಗನು ಕೇಶಿರಾಜನು.[೧೦] ಅರ್ಥಾತ್ ಕೇಶಿರಾಜನು ಜನ್ನನ

---

೯. Mysore Gazetter VOI. II Part I Page 431.

೧೦. ಮಲ್ಲಿಕಾರ್ಜುನ-ಕೇಶಿರಾಜರು ಜೈನರಾಗದೆ ಸ್ಮಾರ್ತ ಬ್ರಾಹ್ಮಣರಾಗಿರಬಹುದೆಂದು ಡಾ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಡುತ್ತಾರೆ. [ಕೆ. ಕ. ಜಿ. ಕಾ. ವಿಚಾರ ಪು. ೧೪೯]

ಸೋದರಳಿಯನು. ಜನ್ನನಿಗೆ ಹೊಯ್ಸಳ ವೀರಬಲ್ಲಾಳನು ಮನ್ನಣೆ ಮಾಡಿ ಕವಿಚಕ್ರವರ್ತಿ ಎಂಬ ಬಿರುದನ್ನು ದಯಪಾಲಿಸಿದನು. ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವವು ಹೊಯ್ಸಳ ವೀರಸೋಮೇಶ್ವರನ 'ವಿನೋದಾಕರ್ಣನ ಕೌತು ಕೋತ್ಪಾದಿತಮುಂ' ಎಂದು ತಿಳಿಯುತ್ತದೆ. ಹನ್ನೆರಡನೆಯ, ಹದಿಮೂರನೆಯ ಶತಮಾನಗಳಲ್ಲಿ ಕನ್ನಡಸಾಹಿತ್ಯ ನಿರ್ಮಾಣಕ್ಕೆ ಹೊಯ್ಸಳ ಅರಸರು ಒಳ್ಳೆಯ ಆಶ್ರಯವನ್ನು ಕೊಟ್ಟರು.

ಹೀಗೆ ಈ ಸಾಹಿತ್ಯ ಚರಿತ್ರೆಯನ್ನು ಪರಿಚಯಮಾಡಿಕೊಂಡ ಮೇಲೆ ಈ ಶತಮಾನವು ಜೈನರ ಪುನರುತ್ಥಾನದ ಕಾಲವಷ್ಟೆ ಅಲ್ಲ, ಅವರ ಪ್ರಾಬಲ್ಯದ ಕಾಲ ವೆಂದೂ ಒಪ್ಪಬೇಕಾಗುತ್ತದೆ. ಅಲ್ಲದೆ ಈ ಶತಮಾನವು ಸಾಹಿತ್ಯ ರೂಪಗಳಲ್ಲಿ ವೈವಿಧ್ಯಕ್ಕೆ ಎಡೆಗೊಟ್ಟು, ಹೊಸ ಪ್ರಯೋಗಗಳಿಗೆ ನೆಲೆಗೊಟ್ಟು, ಕೆಲವು ಉದ್ದಾಮ ಕವಿಗಳಿಂದ ಕೂಡಿದೆ. ಆಂಡಯ್ಯನಂತಹ ಧೀರ ಕನ್ನಡಿಗನು, ಕೇಶಿರಾಜನಂತಹ ಉದ್ದಾಮ ವೈಯಾಕರಣಿಯು ಇದ್ದ ಈ ಶತಮಾನಕ್ಕೆ ಒಂದು ರೀತಿಯ ಘನತೆ ಇದೆಯೆಂಬುದನ್ನು ನಾವು ಮರೆಯಲಾಗದು.

# ಹದಿನೇಳನೆಯ ಶತಮಾನದ ಕನ್ನಡ ಸಾಹಿತ್ಯ

ಸಾಹಿತ್ಯದ ಇತಿಹಾಸದಲ್ಲಿ ಕಾಲವಿಭಾಗವೊಂದು ಅಭ್ಯಾಸದ ಅನುಕೂಲತೆ ಮಾತ್ರವೆಂದು ಹಿಂದೊಮ್ಮೆ ಸೂಚಿಸಿದ್ದೇನೆ. ಅಲ್ಲದೆ ಸಾಹಿತ್ಯ ಪ್ರವಾಹವನ್ನು ವಿಭಾಗಿಸಿ ಹೇಳುವುದು ಸರಿಯಾಗಲಿಕ್ಕಿಲ್ಲ. ಪ್ರವಾಹದಲ್ಲಿಯ ಅಲ್ಲಲ್ಲಿಯ ಭಾಗಗಳನ್ನು ನಿರ್ದೇಶಿಸ ಹೋಗುವುದು ಸಾಧ್ಯವಲ್ಲವಾದರೂ ಅದರ ವಿವಿಧ ಗತಿಗಳನ್ನು ಅರಿತುಕೊಳ್ಳುವುದು ಅನುಕೂಲವೆಂದು ಕಂಡುಬರಬಹುದು.

ಕರ್ನಾಟಕ ಸಾಹಿತ್ಯಗಂಗೆಯು ತ್ರಿಪಥಗಾಮಿನಿಯೆಂದು ಹೇಳಬಹುದು. ಈ ತ್ರಿಪಥಗಮನವನ್ನು ಕೀರ್ತಿಶೇಷ ನರಸಿಂಹಾಚಾರ್ಯರು ಹೀಗೆ ಬಣ್ಣಿಸಿದ್ದಾರೆ:— "ಕರ್ನಾಟಕ ಕವಿತೆ ರಾಷ್ಟ್ರಕೂಟರ ಕಾಲದಲ್ಲಿ ಗೋದಾವರೀ ತೀರದಲ್ಲಿ ಕಿಸುವೊಳಲೇ ಮೊದಲಾದ ಸ್ಥಳಗಳಲ್ಲಿ ಉತ್ತಮ ಸ್ಥಿತಿಯಲ್ಲಿದ್ದು, ಅನಂತರ ದಕ್ಷಿಣಾಭಿಮುಖವಾಗಿ ಹೊರಟು ಚಾಲುಕ್ಯರಿಂದ ಪೋಷಿತವಾಗಿ, ಬಳಿಕ ಹೊಯ್ಸಳರ ಕೈಸೇರಿ, ತರುವಾಯ ವಿಜಯನಗರದಲ್ಲಿದ್ದು, ಆಮೇಲೆ ಕಾವೇರೀ ತೀರದಲ್ಲಿದ್ದ ಮೈಸೂರರಸರ ಪರಿಪಾಲನೆಯಲ್ಲಿ ನಿಂತಹಾಗೆ ತೋರುತ್ತದೆ." ಈಗ ಈ ಬರೆಹದಲ್ಲಿ ಮೈಸೂರರಸರ ಕಾಲದ ಕನ್ನಡ ಸಾಹಿತ್ಯದ ಕೆಲವೊಂದು ಭಾಗದ ಪರಿಚಯವನ್ನು ಮಾಡಿಕೊಡುವ ಪ್ರಯತ್ನವಿದೆ.

ಕನ್ನಡಿಗರ ಅಭಿಮಾನಧನವಾದ ವಿಜಯನಗರವು ಸಂಪೂರ್ಣ ಅಳಿದು ಬೇರೆ ಚಿಕ್ಕಪುಟ್ಟ ರಾಜ್ಯಗಳಾದುದೂ ಅವುಗಳಲ್ಲಿ ಮೈಸೂರು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುದೂ ಹದಿನೇಳನೆಯ ಶತಮಾನದಲ್ಲಿಯೇ. ಹದಿನೇಳನೆಯ ಶತಮಾನಕ್ಕೆ ಮೊದಲು ಬಹುಕಾಲ ಹಿಂದೆಯೇ ಮೈಸೂರು ರಾಜ್ಯದ ಅಸ್ತಿತ್ವ ಕಂಡುಬರುತ್ತಿ

ದ್ದರೂ ಒಂದು ಪ್ರಬಲ ಶಕ್ತಿಯಾಗಿ ಅದು ಪರಿಣಮಿಸಿದುದು ಈ ಶತಮಾನ ದಲ್ಲಿಯೇ ಎಂದು ಹೇಳಬೇಕು. ಕ್ರಿ. ಶ. ೧೬೧೦ರಲ್ಲಿ ರಾಜ ಒಡೆಯನು ಶ್ರೀರಂಗ ಪಟ್ಟಣವನ್ನು ತೆಗೆದುಕೊಂಡಂದಿನಿಂದ ಮೈಸೂರ ರಾಜ್ಯದ ಇತಿಹಾಸಕ್ಕೆ ಒಂದು ವಿಶೇಷ ಕಳೆ ಬಂದಿತು. ಒಂದು ದೃಷ್ಟಿಯಿಂದ ರಾಜ ಒಡೆಯ, ಆತನ ನಂತರ ಬಂದ ಕಂಠೀರವ ನರಸರಾಜ, ಚಿಕದೇವ ಇವರನ್ನು ಮೈಸೂರರಾಜ್ಯದ ನಿರ್ಮಾಣಕರ್ತ ರೆಂದು ಹೇಳಬಹುದು. ಮೈಸೂರು ಅರಸರಿಂದ ಕನ್ನಡ ಸಾಹಿತ್ಯ ಪೋಷಣೆಯೂ ಚೆನ್ನಾಗಿ ನಡೆಯಹತ್ತಿತಾದರೂ ಹದಿನೇಳನೆಯ ಶತಮಾನದಿಂದ ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಹೊಸದೊಂದು ಒಲವು ಕಂಡುಬರುತ್ತದೆ. ಅದೆಂದರೆ, ರಾಜಾಶ್ರಯ ದಿಂದಲೇ ಸಾಹಿತ್ಯದ ಬೆಳವಣಿಗೆಯೆಂಬ ಮಾತು ಹಿಂದಾಗಿ,ಇದೀಗ ಕನ್ನಡದಲ್ಲಿ ರಾಜಾ ಶ್ರಯವಿಲ್ಲದಲೆ ಸಾಹಿತ್ಯವು ಬೆಳೆಯತೊಡಗಿತು. ಕೇವಲ ರಾಜ-ರಾಣಿಯರ ವಿಲಾಸ ಕ್ಕಾಗಿ, ಇಲ್ಲವೆ ಕವಿ ಚಕ್ರವರ್ತಿಗಳೆಂಬ ಬಿರುದನ್ನು ಚಕ್ರವರ್ತಿಗಳಿಂದ ಹೊಂದು ವುದಕ್ಕಾಗಿ, ಸಾಹಿತ್ಯ ಹುಟ್ಟಿದ ಕಾಲ ಹೋಗಿಬಿಟ್ಟಿತು. ಸಾಹಿತ್ಯವು ಸರ್ವರ ಸೊತ್ತೆಂಬ ಸಾಮಾನ್ಯತತ್ತ್ವವು ವೈಷ್ಣವದಾಸರ ಕ್ರಾಂತಿಯಿಂದ ಬಳಕೆಯಲ್ಲಿ ಬಂದುಹೋಗಿತ್ತು. ಜೈನರಿಂದ ಗ್ರಾಮ್ಯ ಭಾಷೆಯು ಗ್ರಂಥಸ್ಥವಾದಂತೆ, ವೀರಶೈವರಿಂದ ಹಳೆಗನ್ನಡವು ನಡುಗನ್ನಡವಾಗಿ ಪರಿಣಮಿಸಿದಂತೆ, ಹದಿನಾರು—ಹದಿನೇಳನೆಯ ಶತಮಾನಗಳ ದಾಸಕೂಟದವರಿಂದ ನಡುಗನ್ನಡವು ಹೊಸಗನ್ನಡವಾಗಿಯೂ ಸಾರ್ವಜನಿಕರ ಕನ್ನಡವಾಗಿಯೂ ಮಾರ್ಪಟ್ಟಿತು.

ಹದಿನೇಳನೆಯ ಶತಮಾನವು ಅನೇಕ ವೈವಿಧ್ಯಗಳ ಸಂಗಮವೆಂಬಂತೆ ತೋರು ತ್ತದೆ. ಒಂದು ಕಡೆಗೆ ಕನ್ನಡ ಭಾಷೆಯು ಹೊಸ ಅವಸ್ಥೆಯನ್ನು, ಸಾಹಿತ್ಯವು ಹೊಸ ರೂಪವನ್ನು ಪಡೆಯುತ್ತಿದ್ದರೂಕೂಡ ಚಿಕದೇವರಾಯನ ಆಸ್ಥಾನದ ಪಂಡಿತರು ಪುನಃ ಜೈನರ ಹಳೆಗನ್ನಡದ ಚಂಪೂಶೈಲಿಗೆ ಮೊರೆಹೋದುದು ಕಂಡುಬರುತ್ತದೆ. ಕವಿರಾಜ ಹರಿಹರನ ಅಥವಾ ರಾಘವಾಂಕನ ರಾಜಮಾರ್ಗಗಳನ್ನು ಬಿಟ್ಟುಕೊಟ್ಟು ಷಡಕ್ಷರ ದೇವನು ಮಗುದೊಮ್ಮೆ ಹಳಗನ್ನಡ ಚಂಪೂಶೈಲಿಗೆ ಜೀವಕೊಡುವ ಪ್ರಯತ್ನ ಮಾಡಿದ್ದು ಈ ಶತಮಾನದಲ್ಲಿ ಕಂಡುಬರುತ್ತದೆ. ಷಡಕ್ಷರದೇವನಿಗೆ ತನ್ನ ಕೃತಿಯು "ವಿತತ ಪ್ರವಚನ ಕವಿಕೃತ ಕೃತಿಭೂಷಣ ಭೂಷಿತಾಂಗಿ" ಯಾಗಬೇಕೆಂಬ ಹಂಬಲ. ತನ್ನ ಕಾವ್ಯದಲ್ಲಿ ನವ್ಯತೆ ಇದೆಯೆಂದೇ ಹೇಳುತ್ತಿರುವನಾದರೂ "ಇದು ವಿನದಮರವರಮಕುಟತಟಘಟಿತಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾ ಚಂಚಚ್ಚಕೋರಾಯಮಾನ" ಇತ್ಯಾದಿ ಗದ್ಯರೂಪದಿಂದಲೇ ತನ್ನ ಆಶ್ವಾಸಗಳನ್ನು ಮುಗಿಸುತ್ತಾನೆ. ಅಲ್ಲದೆ

ವೈಷ್ಣವ ದಾಸರಿಂದ ಹೊಸಗನ್ನಡವು, ಸಾರ್ವಜನಿಕ ಕನ್ನಡವು ರೂಢವಾಯಿತೆಂದು ಹೇಳುವೆವಾದರೂ ಚಿಕದೇವರಾಯನ ಆಸ್ಥಾನದ ಉದ್ದಾಮಕವಿಗಳು ತಮ್ಮ ಕಾವ್ಯಗಳನ್ನು ಹಳೆಗನ್ನಡದಲ್ಲಿಯೇ ಬರೆಯುವ ಸಾಹಸಮಾಡಿದ್ದಾರೆ. ಹಳೆಗನ್ನಡವು ಹನ್ನೆರಡನೆಯ ಶತಮಾನದಲ್ಲಿಯೇ ಸತ್ತುಹೋಯಿತೆಂಬ ರಾಯಿಸ್ ಸಾಹೇಬರ ಅಭಿಪ್ರಾಯವನ್ನು ಆರ್. ರಘುನಾಥರಾಯರು ಕಟುವಾಗಿ ಟೀಕಿಸಲಿಕ್ಕೆ ಚಿಕದೇವನ ಆಸ್ಥಾನದ ಕವಿಗಳು ಬಲವತ್ತರವಾದ ಸಾಧನಗಳಾಗಿದ್ದಾರೆ. ಹೀಗಿದ್ದರೂ ವೈಕುಂಠ ದಾಸನಂತಹರ ಕೀರ್ತನಗಳಿಂದ ಕನ್ನಡ ಭಾಷೆಯು ಆಗ (೧೬೮೦) ಯಾವ ಮಟ್ಟಕ್ಕೆ ಬಂದಿದ್ದಿತೆಂಬುದನ್ನು ನಾವು ಸ್ಪಷ್ಟವಾಗಿ ಕಾಣಬಹುದಾಗಿದೆ:

ಶ್ರೀ ಯದುವರ ಪರಿಪಾಲಿಸು ಎನ್ನನು ಭಕ್ತ ಕಾಮಧೇನು
ಕಾಯದೆ ನೀ ಭಕ್ತನ ಬಿಟ್ಟರೆ ನಾನು ಮಾಡುವದೇನು ?
ಪೆತ್ತ ತಾಯಿ ತನ್ನ ಶಿಶುವನು ಕೊಲ್ಲಲು ಮತ್ತೆ ಕಾವರಾರೈ ?
ಸುತ್ತಿದ್ದ ಬೇಲಿಯು ಎದ್ದು ಪೈರ ಮೇಯೆ ಮತ್ತೆ ಕಾವಾರೈ ?

ಇತ್ಯಾದಿ ಪದ್ಯಗಳನ್ನೋದುವಾಗ ನಮಗೆ ಆ ಭಾಷೆಯು ಕೇವಲ ನಮ್ಮ ಇಂದಿನ ಭಾಷೆಯಂತೆಯೇ ಇರುವದೆಂಬುದು ಕಂಡುಬರುತ್ತದೆ. ಆದುದರಿಂದಲೇ ಈ ಶತಮಾನದಲ್ಲಿ ಕನ್ನಡವು ಹೊಸಗನ್ನಡವಾಗಿ ಪರಿಣಮಿಸಿತೆಂದು ಹೇಳುವುದು. ಅಂತೂ ಹದಿನೇಳನೆಯ ಶತಮಾನವನ್ನು ವಿಚಿತ್ರ ರೀತಿಗಳ ಸಂಗಮವೆಂದು ಯಥಾರ್ಥವಾಗಿ ಹೇಳಬಹುದು. ಱ ೞ ಕುಳ ಕ್ಷಳ— ಇವುಗಳ ಭೇದವನ್ನು ಪಾಲಿಸುವವರೂ ಇದ್ದಾರೆ. ಮಲ್ಲರಸ (೧೬೮೦) ನೆಂಬ ಬ್ರಾಹ್ಮಣ ಕವಿಯು ಱ ೞ, ಕುಳ, ಕ್ಷಳ ಭೇದವನ್ನು ಸರಿಯಾಗಿ ಪಾಲಿಸಿ ಸಾಂಪ್ರದಾಯಿಕ ವರ್ಣನೆಯುಳ್ಳ ಚಂಪೂ ಪುರಾಣವನ್ನು ಬರೆದ ಸಂಗತಿಯನ್ನು ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ಹೇಳುತ್ತಾರೆ. ಈ ಶತಮಾನದಲ್ಲಿ ಪುರಾಣ ಯುಗವು ಹೋಗಿ ಚರಿತ್ರಗಳ ಯುಗವು ಪ್ರಾರಂಭವಾಯಿತೆಂದು ಹೇಳಬಹುದಾದರೂ ಕೂಡ ಪ್ರಭುದೇವರ ಪುರಾಣ (೧೬೦೭-ಹರೀಶ್ವರ), ಶಿವಾಧಿಕ್ಯ ಪುರಾಣ (೧೬೧೧-ಬಸವ ಲಿಂಗ), ಕೊಟ್ಟೂರ ಬಸವೇಶ್ವರ ಪುರಾಣ (೧೬೪೪ ಬಸವಲಿಂಗ ಕವಿ), ಚತು ರಾಚಾರ್ಯ ಪುರಾಣ (೧೬೯೮-ಸಂಪಾದನೆಯ ಪರ್ವತೇಶ್ವರ) ಮೊದಲಾದ ವೀರಶೈವರ ಪುರಾಣಗಳೂ ಕೂಡ ಇಲ್ಲಿ ದೊರೆಯುತ್ತವೆ. ವೈಷ್ಣವರ ಮಹಾತ್ಮ್ಯಗಳಂತೂ ಅನೇಕವಾಗಿವೆ. ಹೀಗಿದ್ದರೂ ಹದಿನೇಳನೆಯ ಶತಮಾನವು ತನ್ನದೇ ಆದ ಅನೇಕ ವೈಶಿಷ್ಟ್ಯಗಳಿಂದ ತುಂಬಿದೆ.

ಮೈಸೂರ ಅರಸರ ಪೋಷಣೆಯಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಎರಡು ವೈಶಿಷ್ಟ್ಯಗಳು ತಲೆದೋರಿವೆ. ಕನ್ನಡದಲ್ಲಿ ಇದುವರೆಗೆ ಇತಿಹಾಸ ಗ್ರಂಥಗಳು ಬರೆಯಲ್ಪಟ್ಟಿರಲಿಲ್ಲ. ಬಹುಶಃ ಭಾರತೀಯರಿಗೆ ತಮ್ಮ ಇತಿಹಾಸವನ್ನು ಬರೆದಿಡುವ ಚಟವಿಲ್ಲವೆಂಬ ಸರ್ವ ಸಾಮಾನ್ಯ ನೂತನ್ನು ಕನ್ನಡಿಗರ ದೃಷ್ಟಿಯಿಂದಲೂ ಒಪ್ಪಿಬಿಡಬೇಕು. ಅಲ್ಲಲ್ಲಿ ಶಿಲಾಶಾಸನ, ತಾಮ್ರಪಟಗಳಲ್ಲಿ ಅಡಕವಾಗಿರುವ ಸಂಗತಿಗಳನ್ನು ಬಿಟ್ಟರೆ, ಹದಿನಾರು-ಹದಿನೇಳನೆಯ ಶತಮಾನಕ್ಕೆ ಮೊದಲು ಕನ್ನಡದಲ್ಲಿ ಕನ್ನಡಿಗರ ರಾಜಕೀಯ ಇತಿಹಾಸವನ್ನು ತಿಳಿಸುವ ಗ್ರಂಥಗಳು ಇಲ್ಲವೇ ಇಲ್ಲ. ಆದರೆ ಈ ಶತಮಾನದಲ್ಲಿ ಮಾತ್ರ ಮೈಸೂರ ರಾಜರ ಇತಿಹಾಸಗಳು ಬರೆಯಲ್ಪಡಹತ್ತಿದುವು. ಮೈಸೂರ ಅರಸರ ಆಸ್ಥಾನದ ಪೋಷಣೆಯ ನೇರವಾದ ಪರಿಣಾಮ ಇಲ್ಲಿ ಕಂಡು ಬರುತ್ತಿದೆ. ಅವುಗಳಲ್ಲಿ ನಂಜಕವಿಯ 'ಕಂಠೀರವ ನರಸರಾಜ ಚರಿತೆ', ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ', ಚೆನ್ನಾರ್ಯನ 'ದೇವರಾಜ ವಿಜಯ', ತಿರುಮಲಾರ್ಯನ 'ಚಿಕದೇವರಾಯ ಯಶೋಭೂಷಣ', 'ಚಿಕದೇವರಾಯ ವಂಶಾವಳಿ' ಇವುಗಳ ನಾಮನಿರ್ದೇಶವನ್ನು ಇಲ್ಲಿ ಮಾಡಬಹುದು. ಈ ಗ್ರಂಥಗಳು ಕಂಠೀರವ ನರಸರಾಜ (೧೬೩೮-೫೯), ದೊಡ್ಡ ದೇವರಾಯ (೧೬೫೯-೭೨), ಚಿಕ ದೇವರಾಯ (೧೬೭೨-೧೭೦೪) ಈ ಅರಸರ ಚರಿತ್ರೆಗಳಾಗಿವೆ.

ಇನ್ನು ಎರಡನೆಯ ಪರಿಣಾಮವು ಚಿಕದೇವರಾಯನ ಆಸ್ಥಾನದ್ದು. ಸ್ವತಃ ಕವಿಯಾಗಿಯೂ ಕವಿಪೋಷಕನಾಗಿಯೂ ಇರುವ ಈ ಅರಸನ ನೆರವಿನಿಂದ ಕನ್ನಡ ಸಾಹಿತ್ಯವು ಹೆಚ್ಚಾದ ಸಂಪತ್ತನ್ನು ಪಡೆಯಿತೆಂದು ಹೇಳಬಹುದು. ಹೊಸಗನ್ನಡದ ಯುಗವೆಂದು ಹೇಳಬಹುದಾದ ಈ ಶತಮಾನದಲ್ಲಿ ಕೂಡ ಅನೇಕ ಉದ್ದಾಮ ಸಾಂಪ್ರದಾಯಿಕ ಕಾವ್ಯಗಳು ಹುಟ್ಟುವುದಕ್ಕೆ ಚಿಕದೇವನ ಆಸ್ಥಾನವೇ ಕಾರಣವಾಯಿತು. ಕನ್ನಡದಲ್ಲಿ ಉಪಲಬ್ಧವಾದ ಮೊದಲನೆಯದಾದ 'ಮಿತ್ರವಿಂದಾ ಗೋವಿಂದ' ನಾಟಕವೂ 'ಅಪ್ರತಿಮವೀರಚರಿತೆ' ಯಂತಹ ಅಲಂಕಾರ ಗ್ರಂಥಗಳೂ 'ಚಿಕ ದೇವರಾಯ ವಂಶಾವಳಿ' ಯಂತಹ ಚಾರಿತ್ರಗ್ರಂಥಗಳೂ ಹಾಗೂ ಚಿಕುಪಾಧ್ಯಾಯನ ವಿವಿಧ ರೀತಿಯ ಗ್ರಂಥಗಳೂ ಹುಟ್ಟುವುದಕ್ಕೆ ಕಾರಣನಾದವನು ಈ ಅರಸನೇ. ಅಲ್ಲದೆ ವೈಷ್ಣವರು ಕನ್ನಡವನ್ನು ಕಡೆಗಣ್ಣಿನಿಂದ ನೋಡಿದರೆಂಬ ಅಪವಾದವು ದೂರಾದುದರ ಶ್ರೇಯಸ್ಸೂ ಈತನಿಗೇ. ಈತನ ಸಲುವಾಗಿ ಹಾಗೂ ಈತನ ನೆರವಿನಿಂದ ವಿಶಿಷ್ಟಾದ್ವೈತಧರ್ಮವನ್ನು ವಿವರಿಸುವ ಗ್ರಂಥಗಳು ಕನ್ನಡಕ್ಕೆ ದೊರಕಿದವು. ಸ್ವತಃ ಚಿಕದೇವರಾಯನೇ ವಿಶಿಷ್ಟಾದ್ವೈತ ತತ್ತ್ವದ ತಿರುಳನ್ನು 'ಚಿಕ ದೇವರಾಜ ಬಿನ್ನಪ' ವೆಂಬ ಗ್ರಂಥದಲ್ಲಿ ತಿಳಿಸಿಕೊಟ್ಟಿದ್ದಾನೆ. ಸಿಂಗರಾರ್ಯ, ತಿರು

ಮಲಾರ್ಯ, ಚಿಕುಪಾಧ್ಯರೆಂಬ ತ್ರಿವರ್ಗಕ್ಕೆ ಪ್ರೋತ್ಸಾಹನಕೊಟ್ಟು ಅವರಿಂದ ಉತ್ತಮ ಗ್ರಂಥಗಳು ರಚನೆಯಾಗುವುದಕ್ಕೆ ಕಾರಣನಾದ ಈ ಅರಸನಿಗೆ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಒಂದು ವಿಶೇಷ ಮಹತ್ವದ ಸ್ಥಾನವಿದೆ. ಚಿಕುಪಾಧ್ಯನಂತೂ ಮೂವತ್ತಕ್ಕೆ ಹೆಚ್ಚಾಗಿ ಗ್ರಂಥಗಳನ್ನು ಬರೆದನು. ಅವುಗಳಲ್ಲಿ ಸಾಂಪ್ರದಾಯಿಕ ಚಂಪೂ ಕಾವ್ಯಗಳೂ ಅಲ್ಲದೆ ಸಾಂಗತ್ಯಗಳೂ ಇವೆ. ಈತನು ಅನೇಕ ಮಹಾತ್ಮೆ ಗಳನ್ನೂ ಟೀಕೆಗಳನ್ನೂ ಬರೆದಿದ್ದಾನೆ. ಸಂಸ್ಕೃತ ಗ್ರಂಥಗಳ ಅನುವಾದವನ್ನು ಕನ್ನಡಕ್ಕೆ ಕೊಟ್ಟಿದ್ದಾನೆ. ಸಂಸ್ಕೃತದ 'ಶುಕಸಪ್ತತಿ'ಗೆ ಗದ್ಯರೂಪ ಕನ್ನಡ ಟೀಕೆ ಬರೆದಿದ್ದಾನೆ. 'ದಿವ್ಯಸೂರಿ' ಚರಿತೆ ಎಂಬ ತಮಿಳು ಗ್ರಂಥದ ಕನ್ನಡ ಅನುವಾದವನ್ನು ಮಾಡಿದ್ದಾನೆ. ಹಾಗೂ 'ತಿರುವಾಯ್ಮೊಳಿ'ಯೆಂಬ ತಮಿಳ ಪ್ರಬಂಧಕ್ಕೆ ವ್ಯಾಖ್ಯಾನ ಬರೆದಿದ್ದಾನೆ.

ಚಿಕದೇವನ ಆಸ್ಥಾನದಲ್ಲಿ ಮೇಲಿನ ತ್ರಿವರ್ಗವಲ್ಲದೆ ಶೃಂಗಾರಮ್ಮ, ಹೊನ್ನಮ್ಮ, ವೇಣುಗೋಪಾಲವರಪ್ರಸಾದ, ತಿಮ್ಮಕವಿ, ಮಲ್ಲಿಕಾರ್ಜುನ, ಚಿದಾ ನಂದಕವಿ ಮುಂತಾದವರೂ ಪೋಷಣೆಪಡೆದು ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕಾರಣರಾದರು. ಹೊನ್ನಮ್ಮನ "ಹದಿಬದೆಯಧರ್ಮ" ಗ್ರಂಥವು ನಮ್ಮವರಿಗೆ ಪರಿಚಿತವಾಗಿಯೇ ಇದೆ. ಈಕೆ ಚಿಕದೇವರಾಜನ ಸಂಚಿಯ ಊಳಿಗದಲ್ಲಿದ್ದಳೆಂದು ತಿಳಿಯುತ್ತದೆ. ಕವಿಕಾವ್ಯಪಕ್ಷಪಾತಿ ದೊರೆಯ ಊಳಿಗದಾಕೆಯೂ ಕೂಡ ಗ್ರಂಥ ಕರ್ತ್ರಿಯಾಗಿದ್ದುದು ಒಂದು ವಿಶೇಷವೇ ಎಂದು ಹೇಳಬೇಕು. ತನ್ನ ಗುರು ಅಳ ಸಿಂಗಾರ್ಯನಿಂದ ಕೂಡ "ಸರಸ ಸಾಹಿತ್ಯದ ವರದೇವತೆ, ಕಾವ್ಯಾಲಂಕಾರ ನಾಟಕಗಳ ಪವಣಿಗೆಯ ಬಲ್ಲವಳು" ಎಂದು ಹೊಗಳಿಸಿಕೊಳ್ಳುವ ಸಾಮರ್ಥ್ಯ ವುಳ್ಳವಳು ಈ ಹೊನ್ನಮ್ಮ. ಚಿಕದೇವರಾಯನ ಆಶ್ರಯದ ಇನ್ನುಳಿದ ಕವಿಗಳ ವಿಚಾರವನ್ನು ಸಂದರ್ಭಾನುಸಾರ ಚರ್ಚಿಸಲಾಗಿದೆ.

ಹದಿನೇಳನೆಯ ಶತಮಾನದ ಸಾಹಿತ್ಯವು ಸಂಖ್ಯೆ, ಗುಣ, ವೈವಿಧ್ಯ, ವೈಶಿಷ್ಟ್ಯ ಇವೆಲ್ಲವುಗಳ ದೃಷ್ಟಿಯಿಂದಲೂ ಘನತೆಯನ್ನು ಪಡೆದಿದೆ. ಕೇವಲ ಸಂಖ್ಯೆಯ ಮಾನ ದಿಂದ ನೋಡಿದರೂ ಕೂಡ ಸುಮಾರು ಎಂಬತ್ತಕ್ಕೆ ಮಿಕ್ಕುವಷ್ಟು ಕವಿಗಳು ಈ ಶತ ಮಾನದಲ್ಲಿ ನಮಗೆ ಸಿಕ್ಕುತ್ತಾರೆ. ಗುಣದ ದೃಷ್ಟಿಯಿಂದ ನೋಡುವಾಗ ಭಟ್ಟಾ ಕಳಂಕ, ಷಡಕ್ಷರದೇವರಂತಹ ಉದ್ದಾಮಕವಿಗಳು ಈ ಶತಮಾನದಲ್ಲಿದ್ದಾರೆ. ಆರ್. ನರಸಿಂಹಾಚಾರ್ಯ ಹಾಗೂ ಇ. ಪಿ. ರಾಯಿಸರವರ ಅಭಿಪ್ರಾಯದ ಪ್ರಕಾರ

ಕರ್ನಾಟಕ ಕವಿಚೂತವನ ಚೈತ್ರ ಲಕ್ಷ್ಮೀಶನೂ ಈ ಶತಮಾನದವನೇ.[೧] ಮೇಲಿನ ಮೂವರೂ ಕರ್ನಾಟಕದ ಮುಖ್ಯ ಮೂರು ಮತಗಳಲ್ಲಿ ಖ್ಯಾತಿವೆತ್ತವರಾಗಿದ್ದಾರೆ. ಈ ತ್ರಿಮೂರ್ತಿಗಳಿಂದ ಈ ಶತಮಾನಕ್ಕೆ ಒಂದು ವಿಶೇಷ ಕಳೆಬಂದದ್ದು ಕಂಡುಬರುತ್ತದೆ. ಅಲ್ಲದೆ ತನ್ನದೇ ಆದ ಒಂದು ರೀತಿಯನ್ನು ಕನ್ನಡಕ್ಕೆ ಕೊಟ್ಟ ಕ್ರಾಂತಿಕಾರಕ ಕವಿ, ಚಿಚ್ಚುನುಡಿಯ ಬಂಟ ಸರ್ವಜ್ಞನನ್ನೂ ಕೂಡ ಆರ್. ನರಸಿಂಹಾಚಾರ್ಯರ ಅಭಿಪ್ರಾಯದ ಪ್ರಕಾರ ಈ ಶತಮಾನದಲ್ಲಿ ಸೇರಿಸಬಹುದಾಗಿದೆ.[೨]

ಚಿಕದೇವನ ಆಸ್ಥಾನದ ಉದ್ದಾಮ ಪಂಡಿತರ ನಾಮನಿರ್ದೇಶವನ್ನು ಈ ಮೊದಲೇ ಮಾಡಿದೆ. ಈ ಶತಮಾನವು ವೈವಿಧ್ಯಗಳ ಸಂಗಮವೆಂಬುದನ್ನು ಲೇಖದ ಮೊದಲಿಗೆ ಚರ್ಚಿಸಿದೆ. ಅಲ್ಲದೆ ಈ ಶತಮಾನದ ವೈಶಿಷ್ಟ್ಯಗಳನ್ನು ಚರ್ಚಿಸುವಾಗ ಈ ವೈವಿಧ್ಯ ಇನ್ನೂ ಹೆಚ್ಚಾಗಿ ಕಂಡುಬರುತ್ತಿದೆ. ಈ ಶತಮಾನದ ವೈಶಿಷ್ಟ್ಯಗಳನ್ನು ಹೀಗೆ ಸಂಗ್ರಹಿಸಬಹುದು:

೧. ಪುರಾಣಯುಗವು ಹೋಗಿ ಚರಿತ್ರಗಳ ಯುಗವು ಈಗ ಬಂದಿತು. ಈ ಶತಮಾನದಲ್ಲಿಯೂ ಕೆಲವು ಪುರಾಣಗಳನ್ನು ಕಾಣಬಹುದು. ಆದರೂ ಹತ್ತನೆಯ ಶತಮಾನದ ಸಾಹಿತ್ಯದೊಡನೆ ಹೋಲಿಸಿದಾಗ ಈ ಶತಮಾನವು ಪುರಾಣಯುಗವಲ್ಲವೆಂಬುದು ಕಂಡುಬರುತ್ತಿದೆ. ಮೈಸೂರ ಅರಸರ ಮೂಲಕ ಹೊರಟ ಇತಿಹಾಸ ಗ್ರಂಥಗಳನ್ನಂತೂ ಮೇಲೆ ನಿರ್ದೇಶಿಸಿದೆ. ಬೇರೆಬೇರೆ ಧರ್ಮದವರು ಪೌರಾಣಿಕ ಹಾಗೂ ತಮ್ಮ ಧರ್ಮದ ವಿಭೂತಿಗಳ ಚರಿತ್ರೆಗಳನ್ನು ಬರೆದರು. ಜೈನರ ಭುಜಬಲ

---

೧ ಲಕ್ಷ್ಮೀಶನ ಕಾಲದ ಸಲುವಾಗಿ ಅನೇಕ ಭಿನ್ನಾಭಿಪ್ರಾಯಗಳಿವೆ.

[೧] ವಿಲ್ಸನ್-೧೩ನೆಯ ಶತಮಾನದ ಆದಿ

[೨] ಕಿಟ್ಟೆಲ್ ೧೭೬೦

[೩] ರಾಯಿಸ್ ೧೭೧೫, ೧೬೯೧

[೪] ಟಿ. ಎಸ್. ವೆಂಕಣ್ಣಯ್ಯ ೧೪೧೫

[೫] ಆರ್. ರಾಮರಾಯರು ೧೫ನೆಯ ಶತಮಾನದ ಅಂತ್ಯ, ೧೬ನೆಯ ಶತಮಾನದ ಆದಿ.

[೬] ಗೋವಿಂದ ಪೈ. ೧೩೩೫–೧೩೫೬ [೧ನೆಯ ಹರಿಹರನ ಆಳಿಕೆ.]

[೭] ಡಿ. ಎಲ್ ನರಸಿಂಹಾಚಾರ್ಯ ೧೬೦೦ಕ್ಕೆ ಮೊದಲು.

[೮] ಆರ್. ನರಸಿಂಹಾಚಾರ್ಯರು ಸು. ೧೭೦೦

೨ ಸರ್ವಜ್ಞನ ಕಾಲವು ಸು. ೧೭೦೦ಕ್ಕೆ ಮೊದಲು ಎಂದು ಆರ್. ನರಸಿಂಹಾಚಾರ್ಯರು ಹೇಳುತ್ತಾರೆ ಇ. ಪಿ. ರಾಯಿಸರು ಸರ್ವಜ್ಞನ ಕಾಲವು ಸು. ೧೬೦೦ ಎಂದು ಹೇಳುತ್ತಾರೆ. ಕಿಟೆಲ್ ಅವರು ೧೫೦೦ ಎಂದೂ ಹೇಳುತ್ತಾರೆ. ಆದರೆ ಉತ್ತಂಗಿ ಚನ್ನಪ್ಪನವರು ೧೬ನೆಯ ಶತಮಾನವೆಂದು ತಿಳಿಯುತ್ತಾರೆ.

ಚರಿತ್ರೆ (೧೬೧೪), ಗೊಮ್ಮಟೇಶ್ವರ ಚರಿತ್ರೆ(೧೬೪೬), ಗುರುದತ್ತ ಚರಿತ್ರೆ (೧೬೫೦), ಹಾಗು ಬಿಜ್ಜಳರಾಯನ ಚರಿತೆ, ಎಂಬುವುಗಳನ್ನೂ ವೀರಶೈವರ-ಶಿವಲಿಂಗ ಚರಿತ್ರೆ (೧೬೫೦), ಶಿವಗಣ ಚರಿತ್ರೆ (೧೬೫೦), ರಾಘವಾಂಕ ಚರಿತ್ರೆ (೧೬೫೦), ಗುರುರಾಜ ಚರಿತ್ರೆ (೧೬೫೦), ಗುರುಭಕ್ತಾಂಡಾರ ಚರಿತ್ರೆ ಎಂಬುವುಗಳನ್ನೂ ಬ್ರಾಹ್ಮಣರ-ಪ್ರಲ್ಹಾದ ಚರಿತ್ರೆ (೧೬೫೦), ದಶಾವತಾರ ಚರಿತ್ರೆ (೧೬೮೦), ರುಕ್ಮಾಂಗದ ಚರಿತ್ರೆ (೧೬೫೦) ಮುಂತಾದ ಚರಿತ್ರೆಗಳನ್ನೂ ನಾವು ಕಾಣುತ್ತೇವೆ.

೨. ಚಂಪೂ,ಷಟ್ಪದಿಗಳ ಕಾಲವು ಹಿಂದಾಗಿ ಸಾಂಗತ್ಯ,ಶೋಭಾನೆಗಳು,ಯಕ್ಷಗಾನಗಳು ಮುಂದೆ ಬಂದವು. ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದ್ದ ಯಕ್ಷಗಾನಗಳ ಬೆಳವಣಿಗೆಯು ಈ ಶತಮಾನದ ವೈಶಿಷ್ಟ್ಯಗಳಲ್ಲಿ ಮುಖ್ಯವಾಗಿದೆ. ನಾಗರಸನ ಭಗವದ್ಗೀತೆ (೧೬೫೦), ತಿಮ್ಮರಸನ ಮಾರ್ಕಂಡೇಯ ಪುರಾಣ (೧೬೫೦), ಪಮ್ಮಿಸೆಟ್ಟಿಯ ಗುರುಭಕ್ತಾಂಡಾರ ಚರಿತ್ರೆ (೧೬೫೦), ರಂಗನಾಥನ ಅನುಭವಾಮೃತ (೧೬೭೫), ರಾಘವಾಂಕ ಚರಿತ್ರೆ (೧೬೫೦) ಇತ್ಯಾದಿ ಷಟ್ಪದಿ ಕಾವ್ಯಗಳೇನೊ ನಮಗೆ ದೊರೆಯುತ್ತಿವೆ. ಆದರೂ ಈ ಶತಮಾನದಲ್ಲಿ ಸಾಂಗತ್ಯಗಳೇ ಹೆಚ್ಚು. ಶಿಶುಮಾಯಣನಿಂದ ಮೊದಲಾದ ಸಾಂಗತ್ಯವು ಈಗ ವಿಶೇಷ ಬೆಳವಣಿಗೆಯನ್ನು ಹೊಂದಿ ಜನಮೆಚ್ಚುಗೆಯನ್ನು ಪಡೆಯಿತು. ದೇವರಸ, ಸೋಮನಾಥ, ಆದಿಯಪ್ಪ, ಚಿದಾನಂದ ಕವಿ, ಚಿಕ್ಕರಸ, ಪದ್ಮನಾಭ, ಶೃಂಗಾರೆಮ್ಮ, ವೀರಜನಪತಿ ಮುಂತಾದವರು ಸಾಂಗತ್ಯಗಳನ್ನು ಬರೆದರು. ಇದರಲ್ಲಿ ಜೈನರೇ ಹೆಚ್ಚು.

೩. ಮಹಾತ್ಮ್ಯೆ ಗ್ರಂಥಗಳು ಹೆಚ್ಚಾಗಿ ಹೊರಟವು. ಈ ಶತಮಾನದ ಗ್ರಂಥಗಳ ಹೆಸರುಗಳನ್ನು ನೋಡುವಾಗ ಮಹಾತ್ಮ್ಯೆಗಳು ನಮಗೆ ವಿಶೇಷ ಕಂಡುಬರುತ್ತವೆ. ಇವುಗಳ ಬೆಳವಣಿಗೆಗೆ ವೈಷ್ಣವರೇ ಕಾರಣರು. ಅವರಲ್ಲಿ ತಿಮ್ಮ ಕವಿಯು (೧೬೭೭) ಯಾದವಗಿರಿ ಮಹಾತ್ಮ್ಯೆ, ವೆಂಕಟಗಿರಿ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮ್ಯೆಗಳನ್ನು ಬರೆದು ಪ್ರಸಿದ್ಧಿಪಡೆದನು.

೪. ಭಕ್ತಿರಸದ ಗ್ರಂಥಗಳೂ ಕೀರ್ತನೆಗಳೂ ಬೆಳವಣಿಗೆ ಹೊಂದಿ ಕನ್ನಡಕ್ಕೆ ಭಾವಗೀತೆಗಳನ್ನು ಒದಗಿಸಿಕೊಟ್ಟವು. ವೀರಶೈವ ವಚನಗಳ ಮೂಲಕ ಅನುಭಾವಿಕ ಗದ್ಯವು ದೊರೆತಂತೆ ಈ ಶತಮಾನದಲ್ಲಿ ಕೀರ್ತನೆ ಮುಂತಾದ ಭಕ್ತಿರಸಪೂರ್ಣ ಸಾಹಿತ್ಯದಿಂದ ಭಾವಗೀತೆಗಳು ದೊರೆತವು. ಸರ್ಪಭೂಷಣಕವಿ, ತಿಮ್ಮ ಮುಂತಾದವರ ಭಕ್ತಿರಸಪೂರ್ಣ ಗ್ರಂಥಗಳು ಜನರಿಗೆ ಹೆಚ್ಚಾಗಿ ಈಗಲೂ ರುಚಿಸುತ್ತಿವೆ. ಭಕ್ತಿರಸದ ಗ್ರಂಥಗಳಲ್ಲಿ ಭಕ್ತಿರಸಾಯನ, ಅನುಭವಾಮೃತ, ಭಗವದ್ಗೀತೆಗಳು ಹುಟ್ಟಿದುವು.

೫. ಚಿಕದೇವರಾಯನ ಆಸ್ಥಾನದಿಂದ ದೊರೆತ ಪೋಷಣೆಯ ಮೂಲಕ ಉಂಟಾದ ಗ್ರಂಥ ಸಂಪತ್ತಿ ಈ ವಿಚಾರವನ್ನು ಈ ಮೊದಲೇ ಹೇಳಿದ್ದಾಗಿದೆ. ಪ್ರೌಢ ಗ್ರಂಥಗಳೂ, ಲಕ್ಷಣ ಗ್ರಂಥಗಳೂ, ವಿಶಿಷ್ಟಾದ್ವೈತವನ್ನು ವಿವರಿಸುವ ಗ್ರಂಥಗಳೂ ಹಾಗೂ ಇತಿಹಾಸಗಳೂ ಹೊರಡಲಿಕ್ಕೆ ಚಿಕದೇವರಾಯನು ಕಾರಣನಾದನು.

೬. ವೀರಶೈವ ಕವಿಗಳ ಗ್ರಂಥರಚನೆಯಲ್ಲಿ ಹೊಸದೊಂದು ಮಾರ್ಗವು ಈಗ ತಲೆದೋರಿತು. ಇವರು ಹನ್ನೆರಡನೆಯ ಶತಮಾನದಿಂದ ಈ ವರೆಗೆ ಮತ-ಪ್ರಚಾರ ದೃಷ್ಟಿಯಿಂದ ಗ್ರಂಥ ಬರೆಯುತ್ತಿದ್ದರು. ಅವುಗಳಲ್ಲಿ ಶೈವಪುರಾಣಗಳು, ವಚನಗಳು ಮುಖ್ಯವಾಗಿದ್ದುವು. ಈಗ ಅವರು ಪುರಾಣಗಳ ಜೊತೆಗೆ ಚರಿತ್ರಗಳನ್ನು ಹಾಗೂ ಟೀಕೆಗಳನ್ನು ಬರೆಯಲು ತೊಡಗಿದರು. ಹದಿನೇಳನೆಯ ಶತಮಾನದ ವರೆಗೆ ಇವರ ಸೂತ್ರಪರ ಕನ್ನಡ ಗ್ರಂಥಗಳಿಗೆ ಟೀಕೆಗಳು ಹೆಚ್ಚಾಗಿ ಇರುತ್ತಿದ್ದಿಲ್ಲ. ಈಗ ಅನೇಕ ಲಿಂಗವಂತರು ಟೀಕೆ ಬರೆದರು. ಅದರಲ್ಲಿ ಶಾಂತಮಲ್ಲ (೧೬೫೦), ಪರ್ವತ ಶಿವಯೋಗಿ (೧೬೫೦), ಸಂಪಾದನೆಯ ಗುರುಲಿಂಗದೇವ (೧೬೭೦), ಸೋಮಶೇಖರ ಶಿವಯೋಗಿ (೧೬೮೦) ಮುಂತಾದವರು ಮುಖ್ಯರಾಗಿದ್ದಾರೆ. ವೀರಶೈವ ಸಿದ್ಧಾಂತ ಶಿಖಾಮಣಿ, ಶಿವಾಧಿಕ್ಯ ಪುರಾಣ ಮುಂತಾದ ಮಹತ್ವದ ಗ್ರಂಥಗಳಿಗೆ ಟೀಕೆಗಳು ಬರೆಯಲ್ಪಟ್ಟವು. ಮೈಸೂರ ಅರಸುಮನೆತನದಲ್ಲಿ ಒಬ್ಬನಾದ ಚಾಮರಾಜ (೧೬೧೭-೧೬೩೭) ನೆಂಬವನೂ ಸಹ ವಾಲ್ಮೀಕಿ ರಾಮಾಯಣ ಬ್ರಹ್ಮೋತ್ತರಖಂಡ ಗಳಿಗೆ ಟೀಕೆಯನ್ನು ಬರೆದದ್ದು ಕಂಡುಬರುತ್ತದೆ.

ಇನ್ನು ಚರಿತ್ರದ ದೃಷ್ಟಿಯಿಂದ ಬಹು ಉಪಯುಕ್ತ ಗ್ರಂಥಗಳು ವೀರಶೈವ ರಿಂದ ಬರೆಯಲ್ಪಟ್ಟವು. ಸಿದ್ಧನಂಜೇಶ ಕವಿಯ (೧೬೫೦) 'ಗುರುರಾಜ ಚಾರಿತ್ರ' ಎಂಬ ಗ್ರಂಥವು ವೀರಶೈವ ಆಚಾರ್ಯರ ವಿಚಾರವನ್ನು ತಿಳಿಯುವುದಕ್ಕೆ ವಿಶೇಷ ಉಪಯುಕ್ತವಾದ ಗ್ರಂಥವೆಂದು ಈಗಲೂ ಮನ್ನಿಸಲ್ಪಡುತ್ತದೆ. ಅದರಂತೆ ಶಾಂತ ಲಿಂಗ ದೇಶಿಕರು (೧೬೭೩) ಬರೆದ 'ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ'ವು ಸಂಶೋಧನ ದೃಷ್ಟಿಯಿಂದ ಮಹತ್ವದ ಗ್ರಂಥವಾಗಿದೆ. ಅದರಲ್ಲಿ ವೀರಶೈವ ಗ್ರಂಥ ಕಾರರ ಹಾಗೂ ಅವರ ಗ್ರಂಥಗಳ ಸಲುವಾಗಿ ಅನೇಕ ಸಂಗತಿಗಳು ಹೇಳಲ್ಪಟ್ಟವೆ. ಸಿದ್ಧನಂಜೇಶನ ರಾಘವಾಂಕಚರಿತೆಯಾದರೂ ಉದ್ದಾಮ ವೀರಶೈವ ಕವಿಗಳಾದ ಹರಿಹರ ರಾಘವಾಂಕರ ಚರಿತ್ರವನ್ನು ಅರಿತುಕೊಳ್ಳಲಿಕ್ಕೆ ಸಹಾಯಕಾರಿಯಾಗಿದೆ. ಈ ದೃಷ್ಟಿಯಿಂದ ವೀರಶೈವರ ಈ ಗ್ರಂಥಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಹು ಬೆಲೆಯುಳ್ಳವುಗಳಾಗಿವೆ ಎಂದು ಹೇಳಬಹುದು. ಈ ಶತಮಾನದಲ್ಲಿ ವಚನ ವಾಙ್ಮಯವು ತೀರ ಸ್ವಲ್ಪ. ದೊಡ್ಡ ಷಡಕ್ಷರಿ, ಚನ್ನಪ್ಪ, ನಿಃಕಲ, ನಿರಾಲಂಬ

ಎಂಬ ನಾಲ್ವರು ವಚನಕಾರರು ಮಾತ್ರ ನಮಗೆ ದೊರೆಯುತ್ತಾರೆ.

೭. ಈ ಕಾಲದಲ್ಲಿ ಜೈನ ಕವಿಗಳಿಗೆ ಹೆಚ್ಚಾಗಿ ರಾಜಾಶ್ರಯ ದೊರೆಯಲಿಲ್ಲ. ಆದರೂ ಚಿಕದೇವರಾಯನು ಚಿದಾನಂದ ಕವಿಗೆ ಆಶ್ರಯ ಕೊಟ್ಟಂತೆ ತಿಳಿದುಬರುತ್ತದೆ. ಜೈನ ಕವಿಗಳು ಮಠಗಳಲ್ಲಿಯೂ ಆಶ್ರಮಗಳಲ್ಲಿಯೂ ಇದ್ದು ಗ್ರಂಥರಚನೆ ಮಾಡುತ್ತಿದ್ದರು. ಜೈನರು ಈ ಕಾಲದಲ್ಲಿ ಚಂಪೂ ಕಾವ್ಯಗಳನ್ನು ಬರೆಯಲಿಲ್ಲ. ಅವರು ಸಾಂಗತ್ಯಗಳನ್ನೇ ಬರೆದರು. ಜೈನರ ಷಟ್ಪದೀ ಕಾವ್ಯಗಳೂ ತೀರ ಕಡಮೆ. ಸು.೧೭೦೦ರಲ್ಲಿದ್ದ ನಾಗವರ್ಮನೆಂಬುವನು ಮಾತ್ರ ಮಾಣಿಕಸ್ವಾಮಿ ಚರಿತ್ರೆಯನ್ನು ಷಟ್ಪದಿಯಲ್ಲಿ ಬರೆದಿದ್ದಾನೆ. ಚಿಕದೇವನ ಆಶ್ರಿತನಾದ ಚಿದಾನಂದನು (೧೬೮೦) ಸಾಂಗತ್ಯದಲ್ಲಿ ಬರೆದ ಮುನಿವಂಶಾಭ್ಯುದಯವೆಂಬ ಪಟ್ಟಾವಲಿ ಗ್ರಂಥವು ಸಿಪ್ಪೆ ನಂಜೇಶನ ಗುರುರಾಜ ಚಾರಿತ್ರದಂತೆ ಸಂಶೋಧನಕ್ಕೆ ಸಹಾಯಕಾರಿಯಾಗಿದೆ.

೮. ಮಾಧ್ವರು ಪುರಾಣ ಹಾಗೂ ಮಹಾತ್ಮ್ಯೆಗಳನ್ನು ಬರೆದರು. ಅವುಗಳಲ್ಲಿ ಉತ್ತರ ರಾಮಾಯಣ, ನಂದಿ ಮಹಾತ್ಮ್ಯೆ, ವೆಂಕಟೇಶ್ವರ ಪ್ರಬಂಧ, ಮಾರ್ಕಂಡೇಯ ಪುರಾಣ, ರುಕ್ಮಾಂಗದ ಚರಿತ್ರೆ, ಸುಯೋಗಚರಿತ್ರೆ, ದಶಾವತಾರ ಕಥೆ, ಜೈಮಿನಿ (?) ಇತ್ಯಾದಿ ಗ್ರಂಥಗಳು ಮುಖ್ಯವಾಗಿವೆ.

೯. ಚಂಪೂ ರೂಪದಲ್ಲಿ ಕೆಲವು ಶತಕಗಳು ಬರೆಯಲ್ಪಟ್ಟವು. ಪಂಪಾ ವಿರೂಪಾಕ್ಷ ಶತಕ, ಮಲ್ಲಿಕಾರ್ಜುನ ಶತಕ, ಗಣಿತ ಶಾಸ್ತ್ರದ ಮೇಲಿನ ಬೇಹಾರ ಗಣಿತ, ಕ್ಷೇತ್ರ ಗಣಿತ ಎಂಬ ಗ್ರಂಥಗಳು ಹುಟ್ಟಿದುವು.

೧೦. ಈ ಕಾಲದಲ್ಲಿ ಕೃಷ್ಣಲೀಲಾಭ್ಯುದಯ, ಕೃಷ್ಣಕರ್ಣಾಮೃತಕಾವ್ಯ ವಚನ, ಪಾರ್ವತೀಶೋಭನ, ಮದನಮೋಹಿನಿ ಕಥೆ ಮುಂತಾದ ಶೃಂಗಾರ ರಸಪ್ರಧಾನ ಕಾವ್ಯಗಳೂ ಹುಟ್ಟಿವೆ.

ಹೀಗೆ ಅನೇಕ ವೈಶಿಷ್ಟ್ಯಗಳನ್ನೊಳಗೊಂಡು, ವೈವಿಧ್ಯಗಳಿಗೆ ಎಡೆಗೊಟ್ಟು ಸಂಖ್ಯೆ ಹಾಗೂ ಗುಣಗಳ ದೃಷ್ಟಿಯಿಂದಲೂ ಮಹತ್ವವುಳ್ಳ ಈ ಹದಿನೇಳನೆಯ ಶತಮಾನವು ಸಾಹಿತ್ಯ ಚರಿತ್ರೆಯಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದಿದೆ. ಜೈನರ ಉದ್ದಾಮ ಕಾವ್ಯಗಳಿಂದ ಹತ್ತನೆಯ ಶತಮಾನವೂ, ವೀರಶೈವ ಕ್ರಾಂತಿಯಿಂದ ಹನ್ನೆರಡನೆಯ ಶತಮಾನವೂ, ವಿಜಯನಗರದ ಪೋಷಣೆಯಿಂದ ಹದಿನೈದು-ಹದಿನಾರನೆಯ ಶತಮಾನಗಳೂ ಮಹತ್ವದವುಗಳೆಂದು ಎಣಿಸಲ್ಪಟ್ಟಿವೆ. ಆದರೆ ಈ ಹದಿನೇಳನೆಯ ಶತಮಾನವು ಮೇಲಿನ ಎಲ್ಲ ಶತಮಾನಗಳ ವೈಶಿಷ್ಟ್ಯಗಳನ್ನು ಸರ್ವಸಾಮಾನ್ಯವಾಗಿ ಕಾಯ್ದುಕೊಂಡರೂ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ಒಂದು ವಿಶಿಷ್ಟ ಘನತೆಯನ್ನು ಪಡೆದಿದೆ.

## ಬಸವರಾಜದೇವ ರಗಳೆಯೂ ★ ★
## ★ ★ ಬಸವನ ಚರಿತ್ರೆಯೂ

ಹರಿಹರನೇ ಬಸವರಾಜದೇವ ರಗಳೆಯ ಗ್ರಂಥಕರ್ತೃವೇ, ಎಂಬ ವಾದ ನಮಗೆ ಅಪ್ರಸ್ತುತ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಮಾತ್ರ ಬಲವತ್ತರವಾದ ಕಾರಣಗಳಿಂದ ಹಾಗಿರಬೇಕೆಂದು ಊಹಿಸಿ ಹರಿಹರ ಕವಿಯ ಬಸವರಾಜದೇವ ರಗಳೆ ಎಂದೇ ಪುಸ್ತಕ ಪ್ರಸಿದ್ಧಿಸಿದ್ದಾರೆ. ವಿರುದ್ಧ ಊಹೆಗಳಿಗೆ ಆಸ್ಪದವಿದೆಯೆಂದು ಮ| ರಾ| ಶ್ರೀ. ಬುದ್ಧಯ್ಯ ಪುರಾಣಿಕ, ಇವರು ತಮ್ಮದೊಂದು ಲೇಖದಲ್ಲಿ ಸೂಚಿಸಿದ್ದಾರೆ. ಹೀಗಿದ್ದರೂ ಕೂಡ ಅವರು ಪ್ರೊ. ವೆಂಕಣ್ಣಯ್ಯನವರ ಹೇಳಿಕೆಯನ್ನು ಸಂಪೂರ್ಣವಾಗಿ ಅಲ್ಲಗಳೆಯುವಂತೆ ತೋರುವುದಿಲ್ಲ. ಅಂತು ನಾವೀಗ ಹರಿಹರನೇ ಗ್ರಂಥಕರ್ತೃವೆಂದು ತಿಳಿದು ಮುಂದೆ ಸಾಗುವುದು ಯೋಗ್ಯವಾಗಿದೆ. ಇನ್ನು ಹರಿಹರನ ಕಾಲದ ವಿಚಾರವಾಗಿಯೂ ಬೇರೆ ಬೇರೆ ವಾದಗಳಿಲ್ಲದೆ ಇಲ್ಲ. ಅವನ್ನು ವಿವರವಾಗಿ ಚರ್ಚಿಸುವುದು ಪ್ರಸ್ತುತ ಬರೆಹದ ಉದ್ದೇಶವಲ್ಲ. ಆದರೆ ಹರಿಹರನ ನಿಶ್ಚಿತ ಕಾಲವನ್ನು ಕಂಡುಕೊಳ್ಳುವುದು ನಮಗೆ ಹೆಚ್ಚು ಪ್ರಯೋಜನಕಾರಿಯಾಗುವುದು. ಏಕೆಂದರೆ ನಾವಿಲ್ಲಿ ಬಸವರಾಜದೇವ ರಗಳೆಯನ್ನು ಬಸವನ ಚರಿತ್ರಾಂಶಗಳನ್ನು ಶೋಧಿಸುವ ದೃಷ್ಟಿಯಿಂದ ಅವಲೋಕಿಸಬೇಕಾಗಿದೆ. ಆದುದರಿಂದ ಪ್ರಕೃತ ಗ್ರಂಥವು ಹೆಚ್ಚು ಪ್ರಾಚೀನವಾದಷ್ಟು ಚರಿತ್ರಾಂಶಗಳು ನಂಬಲರ್ಹವಾಗುತ್ತವೆ. ಬಸವನ ಚರಿತ್ರೆಯು ಗೂಢವಾಗಿದೆ. ಅವನ ವಿಷಯವಾಗಿ ಅನೇಕಾನೇಕ ಹೇಳಿಕೆ (Different Versions) ಗಳಿವೆ. ಅವೆಲ್ಲವುಗಳನ್ನು ಅವಲೋಕಿಸುವುದಾದರೆ ನಿಶ್ಚಿತವಾದ ಚರಿತ್ರೆಯನ್ನು ಕಂಡುಕೊಳ್ಳುವುದು ಸಾಧ್ಯವಾಗದೆ ಹೋಗುತ್ತದೆ. ಭಾವನಾಪ್ರಧಾನ ಭಕ್ತರು ಮನಸೋಕ್ತವಾಗಿ

ಆತನನ್ನು ಹೊಗಳಿ, ಅವನ ಚರಿತ್ರೆಯ ಸುತ್ತಲೂ ಸಂಭಾವ್ಯ ಅಸಂಭಾವ್ಯ ಘಟನೆಗಳನ್ನು ಹೆಣೆದಿದ್ದಾರೆ. ಭಕ್ತರ ದೃಷ್ಟಿಯು ಹೀಗಿರುವಾಗ ವಿರೋಧಿಗಳ ದೃಷ್ಟಿಯಲ್ಲಿ ಪ್ರತಿಕ್ರಿಯೆ [Reaction] ಇದೆ. Action and Reaction are equal and opposite ಎಂಬ ವೈಜ್ಞಾನಿಕ ಸತ್ಯವು ಇಲ್ಲಿ ಅನ್ವಯಿಸುವಂತಿದೆ. ಬಸವಭಕ್ತರು ಆತನನ್ನು ಹೊಗಳಿದಷ್ಟು ಜೈನ ಪುರಾಣಕಾರರು ತೆಗಳಿದ್ದಾರೆ. ಇಂತಹ ಸಂದಿಗ್ಧ ವಾತಾವರಣದಲ್ಲಿ ಬಸವನ ಚರಿತ್ರೆಯನ್ನು ಕಂಡು ಹಿಡಿಯುವುದಕ್ಕೆ ಅನುಕೂಲವಾಗುವಂತಹ ಪ್ರಮಾಣಗ್ರಂಥದ ಅವಶ್ಯಕತೆ ಬಹಳವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡದಲ್ಲಿ ಬಸವನ ವಿಷಯವಾಗಿ ರಚಿತವಾಗಿರುವ ಗ್ರಂಥಗಳಲ್ಲಿ ಬಸವರಾಜದೇವರಗಳೆಯು ತೀರ ಮೊದಲಿನದೆಂಬ ದೃಷ್ಟಿಯಿಂದ ಈ ಗ್ರಂಥವು ಹೆಚ್ಚು ವಿಶ್ವಸನೀಯವಾಗಿದೆ. ಹರಿಹರನ ಕಾಲದ ವಿಷಯವಾಗಿರುವ ವಾದಗಳನ್ನೆಲ್ಲ ಚರ್ಚಿಸಿ, ಬಲವತ್ತರವಾದ ಕಾರಣಗಳ ಮೂಲಕ ಹರಿಹರನು ೧೨೦೦ರಲ್ಲಿದ್ದನೆಂಬ ಸಿದ್ಧಾಂತಕ್ಕೆ ನಾನು ಬಂದಿರುವುದರಿಂದ[೧] ಹಾಗೂ ಆ ಸಿದ್ಧಾಂತವನ್ನು ಬೇರೆ ಪಂಡಿತರು ಒಪ್ಪುತ್ತಿರುವುದರಿಂದ ನಾವೀಗ ಆ ಕಾಲವನ್ನೇ ನಿರ್ಧಾರವಾಗಿಟ್ಟುಕೊಂಡು ಮುಂದೆ ಸಾಗಬೇಕು. ಹೀಗಾದಲ್ಲಿ ಹರಿಹರನು ಬಸವನ ಸಮಕಾಲೀನವಾಗುವುದಿಲ್ಲವಾದರೂ ಉಳಿದ ಪುರಾಣಕಾರರಿಗಿಂತ ಹೆಚ್ಚು ಪ್ರಾಚೀನನೂ ಬಸವನ ಕಾಲಕ್ಕೆ ಸಮೀಪದವನೂ ಆಗುತ್ತಾನೆ. ಆದ್ದರಿಂದ ಬಸವರಾಜದೇವ ರಗಳೆಯು ಬಸವನ ವಿಷಯದ ತೀರ ಪ್ರಾಚೀನ ಗ್ರಂಥವೆಂದಾಗುತ್ತದೆ. ಅಂದಮೇಲೆ ಅದು ಉಳಿದ ಪುರಾಣಗಳಿಗಿಂತ ಹೆಚ್ಚು ವಿಶ್ವಸನೀಯವೂ ಎಂದು ತಾನೇ ಸಿದ್ಧವಾಗುತ್ತದೆ. ಈ ಗ್ರಂಥದಲ್ಲಿ ನಿರೂಪಿತವಾಗಿರುವ ಕೆಲಮಟ್ಟಿಗೆ ತರ್ಕಶುದ್ಧವಾಗಿರುವ ಬಸವನ ಚರಿತ್ರೆಯಂತೂ ಈ ಮಾತನ್ನು ಹೆಚ್ಚಾಗಿ ಸಮರ್ಥಿಸುತ್ತದೆ. ಆದುದರಿಂದ ಈ ಗ್ರಂಥದಲ್ಲಿರುವ ಬಸವನ ಚರಿತ್ರೆಯನ್ನು ನಾವು ಕಂಡುಕೊಳ್ಳುವುದೂ ಇನ್ನುಳಿದ ಪುರಾಣಗಳ ಹೇಳಿಕೆಗಳ ಮೂಲಕ ತುಲನಾತ್ಮಕ ದೃಷ್ಟಿಯಿಂದ ಈ ಗ್ರಂಥವನ್ನು ನಾವು ಅಭ್ಯಾಸಮಾಡುವುದೂ ಅವಶ್ಯವೆಂದು ಸಿದ್ಧವಾಗುವದಿಲ್ಲವೇ?. ಪೌರಾಣಿಕ ದೃಷ್ಟಿಯನ್ನು ಬಿಟ್ಟುಕೊಟ್ಟು ವೀರಶೈವ ಪುರಾಣಗಳನ್ನು ಅವಲೋಕಿಸುವುದಾದರೆ ಅವುಗಳಲ್ಲಿ ಹೇಳಲ್ಪಟ್ಟ ಘಟನೆಗಳು ಹೆಚ್ಚಾಗಿ ಅಸಂಭಾವ್ಯವೆಂದು ನಮಗೆ ತೋರದಿರಲಾರವು. ಬಸವ ಮೊದಲಾದವರು ಅಲೌಕಿಕ ಪುರುಷರೆಂಬ ಗ್ರಹಿಕೆಯಿಂದಲೇ ಪುರಾಣಗಳು ರಚಿಸಲ್ಪಟ್ಟಿರುವುದರಿಂದ ಅವುಗಳಲ್ಲಿ ಐತಿಹಾಸಿಕ ಸತ್ಯದ ಅಭಾವವಿರುತ್ತಿದ್ದರೆ ನಾವು ಆಶ್ಚರ್ಯಪಡುವ ಕಾರಣವಿಲ್ಲ. ಅಂತೆಯೇ ಬಸವನ ವಿಷಯವಾಗಿರುವ ಅನೇಕ ಗ್ರಂಥಗಳಲ್ಲಿಯ ಅಸಂಭಾವ್ಯ ನಿರೂ

---

೧. 'ಹರಿಹರದೇವ' ಎಂಬ ಗ್ರಂಥದಲ್ಲಿ 'ಹರಿಹರನ ಕಾಲ' ವೆಂಬ ಲೇಖನ

ಪಣೆಯನ್ನು ಹಳಿಯದೆ ಸಾಧ್ಯವಿದ್ದಷ್ಟು ಐತಿಹಾಸಿಕ ಸಂಗತಿಗಳನ್ನು ನಾವು ಅವು ಗಳಿಂದ ಸಂಗ್ರಹಿಸಬೇಕು. ವೀರಶೈವ ಪುರಾಣಗಳನ್ನೂ ವಚನಗಳನ್ನೂ ಸೂಕ್ಷ್ಮ ವಾಗಿ ಅವಲೋಕಿಸಿ, ವಿಭಜಿಸಿ, ತುಲನೆಮಾಡಿ ಸಾಧ್ಯವಿದ್ದರೆ ಅನ್ಯ ಸಾಧನಗಳ ಸಹಾಯವನ್ನು ಪಡೆದು, ಬಸವಾದಿ ಮಹಾ ಪುರುಷರ ಚರಿತ್ರವನ್ನು ಕಂಡುಕೊಳ್ಳ ಬೇಕಾಗಿದೆ. ಆ ದೃಷ್ಟಿಯಿಂದ ನಾವೀಗ ಬಸವರಾಜದೇವ ರಗಳೆಯನ್ನು ಅವಲೋ ಕಿಸಬೇಕಾಗಿದೆ. ಮೊದಲು ಬಸವನ ವಿಷಯವಾಗಿ ಪ್ರಮುಖ ಗ್ರಂಥವಾಗಿ ರುವ ಭೀಮಕವಿಯ ಬಸವ ಪುರಾಣದ ಕಥಾಸಾರವನ್ನಿಲ್ಲಿ ಸಂಗ್ರಹಿಸಬೇಕಾಗಿದೆ. ಏಕೆಂದರೆ ಬಸವ ಪುರಾಣದಲ್ಲಿಯ ಹೇಳಿಕೆಗಳನ್ನೇ ಬಹುಜನರು ಆಧಾರವಾಗಿಟ್ಟು ಕೊಂಡಿರುತ್ತಾರೆ.

**ಬಸವ ಪುರಾಣದ ಕಥಾ ಸಾರಾಂಶ:—** ಭೂಲೋಕದಲ್ಲಿ ಶೈವಾಚಾರವು ನಷ್ಟವಾಗಿ ನಾಸ್ತಿಕವಾದವು ಪ್ರಬಲವಾಯಿತು. ಇದನ್ನು ನಾರದನ ಮುಖದಿಂದ ಕೇಳಿದ ಪರಮೇಶ್ವರನು ಶೈವಮತದ ಜೀರ್ಣೋದ್ಧಾರಕ್ಕಾಗಿ ಭೂಲೋಕದಲ್ಲಿ ಜನ್ಮವೆತ್ತುವಂತೆ (೧) ನಂದಿಗೆ ಆಜ್ಞಾಪಿಸಿದನು. ಬಾಗೇವಾಡಿ ಗ್ರಾಮದಲ್ಲಿ 'ಪರಮ ಶೈವಾಂಬುರುಹ ತರಣಿ'ಯಾದ ಮಾದಿರಾಜನಿದ್ದನು. ಆತನೂ ಆತನ ಪತ್ನಿ ಮಾದ ಲಾಂಬಿಕೆಯೂ ಸಂತಾನಾಪೇಕ್ಷೆಯಿಂದ ನಂದಿವ್ರತವನ್ನು ಕೈಕೊಂಡಿದ್ದರು. ಅವರಿಗೆ ಪ್ರಸನ್ನನಾದ ನಂದಿಯು ಅವರ ಗರ್ಭದಲ್ಲಿ ಜನ್ಮವನ್ನು ತಳೆದನು. ಇದರಿಂದ ಆತ ನಿಗೆ ತನ್ನ ಉದ್ದಿಶ್ಯಕಾರ್ಯವನ್ನು ನೆರವೇರಿಸಲಿಕ್ಕೆ ಆಸ್ಪದ ದೊರೆಯಿತು. ಜನ್ಮವಾದ ಕೂಡಲೆ ಕೂಸಿಗೆ ಸಂಗಮನಾಥನಿಂದ ಲಿಂಗಧಾರಣೆ ನಡೆಯಿತು. ಬಾಲಕನು ಎಂಟು ವರ್ಷದವನಾದ ಕೂಡಲೇ ತಂದೆಯು ಪದ್ಧತಿಯಂತೆ ಆತನಿಗೆ ಉಪನಯನ ಸಂಸ್ಕಾರ ವನ್ನು ಮಾಡಲು ಯೋಜಿಸಿದನು. ತಂದೆಯ ಈ ಏರ್ಪಾಡನ್ನು ಒಪ್ಪದೆ ಬಸವನು ಆತನನ್ನು ಪ್ರತಿಭಟಿಸುತ್ತಾನೆ. ಜನಿಸಿದಕೂಡಲೇ ಸಂಗಮನಾಥನಿಂದ ಲಿಂಗದೀಕ್ಷೆ ಪಡೆದ ತನಗೆ ಇನ್ನುಳಿದ ಸಂಸ್ಕಾರಗಳು ಬೇಕಿಲ್ಲವೆಂದು ವಾದಿಸಿ (೨) ತನ್ನ ತಂದೆ-ತಾಯಿಗಳನ್ನು ತೊರೆದು, ಬಾಗೇವಾಡಿಯಿಂದ ಹೊರಟು ಹೋಗುತ್ತಾನೆ. ಜೊತೆ ಯಲ್ಲಿ ಸಹೋದರಿ ನಾಗಲಾಂಬಿಕೆಯನ್ನೂ ಕರೆದುಕೊಂಡು ಸಂಗಮೇಶ್ವರ ಕ್ಷೇತ್ರಕ್ಕೆ ಹೋಗುತ್ತಾನೆ. ಬಸವನ ಈ ವೀರಶೈವ ಭಕ್ತಿಯನ್ನು ಕಂಡು ಬಲದೇವ ಮಂತ್ರಿಯು ಹರುಷಿತನಾಗಿ, ಬಸವನು ಅಲೌಕಿಕ ಪುರುಷನೆಂಬುದನ್ನು ಕಂಡುಕೊಂಡು, ಆತನಿಗೆ ತನ್ನ ಮಗಳಾದ ಗಂಗಾಂಬಿಕೆಯನ್ನು ಕೊಟ್ಟು ವಿವಾಹವನ್ನು ಜರುಗಿಸುತ್ತಾನೆ. ಬಸವನು ತನ್ನ ಪತ್ನಿ, ಸಹೋದರಿಯರೊಡಗೂಡಿ ಸಂಗಮೇಶ್ವರನಲ್ಲಿ (೩) ಉಪದೇಶ ಪಡೆಯುತ್ತಾನೆ. ಕೆಲವು ದಿವಸಗಳ ನಂತರ ಬಸವನ ಮಾವನಾದ ಬಲದೇವ

ಮಂತ್ರಿಯು ಸತ್ತುಹೋಗಲು ಆತನ 'ಬಲು ನಿಯೋಗವನೆಲ್ಲವಂ' ಪಾಲಿಸಲಿಕ್ಕೆ ಬಸವನೇ ಸಮರ್ಥನೆಂಬುದನ್ನರಿತು ಬಿಜ್ಜಳನು ಆತನನ್ನು ಬರಮಾಡಿಕೊಂಡು ಮಂತ್ರಿಪದದ ಭಾರವನ್ನು ಆತನಿಗೆ ಒಪ್ಪಿಸುತ್ತಾನೆ. (೪) ಬಸವನು ಓಲಗದಲ್ಲಿರುವಾಗ ಒಂದು ಅಲೌಕಿಕ ಘಟನೆಯು ನಡೆಯುತ್ತದೆ. ಎಲ್ಲರೂ ಆಸ್ಥಾನದಲ್ಲಿ ಕೂತಿರುವಾಗ ಆಕಾಶದತ್ತಣಿಂ ಓಲೆಯೊಂದು ಬಂದು ಸಭಾಮಧ್ಯದಲ್ಲಿ ಬೀಳುತ್ತದೆ. ಲಿಖಿತವನ್ನು ಓದಲು ಇನ್ನಾರಿಗೂ ಸಾಧ್ಯವಾಗದೆ ಬಸವನೊಬ್ಬನು ಮಾತ್ರ ಅದನ್ನು ಓದುತ್ತಾನೆ. ಆ ಲಿಖಿತದಿಂದ ಬಿಜ್ಜಳನಿಗೆ ಅಪಾರವಾದ ಭಾಂಡಾರವು ದೊರೆಯುತ್ತದೆ. ಈ ಘಟನೆಯು ನಡೆದುದರಿಂದ ಬಸವನಲ್ಲಿ ಬಿಜ್ಜಳನ ಶ್ರದ್ಧೆ ಹೆಚ್ಚಿ, ಆತನು ಅಲೌಕಿಕ ಪುರುಷನೆಂಬುದಾಗಿ ಗ್ರಹಿಕೆಯಾಗುತ್ತದೆ. ಬಸವನು ತನ್ನ ವೀರಶೈವ ಆಚಾರದಲ್ಲಿ ವಿಶೇಷ ಮಗ್ನನಾಗಿರುತ್ತಾನೆ. ಆತನ ಸಹೋದರಿ ನಾಗಲಾಂಬಿಕೆಯ ಗರ್ಭದಲ್ಲಿ ಈಶ್ವರನ ಚಿತ್ಕಳಾಂಶವು ಚೆನ್ನಬಸವನಾಗಿ ಹುಟ್ಟುತ್ತದೆ. ಬಸವಣ್ಣನವರ ಘನತೆಯು ಎಣ್ದೆಸೆಗಳಲ್ಲಿಯೂ ಪಸರಿಸುತ್ತದೆ. ಅದನ್ನು ಕೇಳಿದ ಅಲ್ಲಮಪ್ರಭುವು ಬಸವನನ್ನು ಕಾಣಲೆಂದು ಸಿದ್ಧರಾಮನೊಡನೆ ಕಲ್ಯಾಣಕ್ಕೆ ಬರುತ್ತಾನೆ. ಬಸವನು ಆತನನ್ನು ಸತ್ಕರಿಸಿ ಪೂಜಿಸುತ್ತಾನೆ. ಬಸವನು ಕೆಲವು ಅಲೌಕಿಕ ಕಾರ್ಯ (ಪವಾಡ) ಗಳನ್ನು ಮಾಡುತ್ತಾನೆ. ದಿನದಿನಕ್ಕೆ ಜಂಗಮರಲ್ಲಿ ಆತನ ಭಕ್ತಿ, ಆದರಗಳು ಹೆಚ್ಚುತ್ತವೆ. ಈ ಸಂಧಿಯ ದುರುಪಯೋಗ ಮಾಡಿಕೊಳ್ಳುವ ಅನೇಕ ಬಗೆಯ ಜಂಗಮರು ಬಸವನ ಆಶ್ರಯವನ್ನು ಪಡೆದು ಆತನಿಂದ ಪುರಸ್ಕಾರವನ್ನು ಹೊಂದುತ್ತಾರೆ. ಆಸ್ಥಾನದಲ್ಲಿ ಬಸವನ ಘನತೆಯು ಹೆಚ್ಚುತ್ತಿರುವುದನ್ನು ಕಂಡು ಇನ್ನಿತರರು ಅಸೂಯೆ ಪಟ್ಟುಕೊಳ್ಳುತ್ತಾರೆ. ರಾಜ್ಯದ ಭಾಂಡಾರವನ್ನು ಬಸವನು ಜಂಗಮರಿಗಾಗಿ ಸೂರೆಗೈಯ್ಯುವನೆಂಬುದಾಗಿ ಬಿಜ್ಜಳನ ಕಡೆಗೆ ದೂರು ಒಯ್ಯುತ್ತಾರೆ. ಬಸವನು ತನ್ನ ಅಲೌಕಿಕ ಶಕ್ತಿಯಿಂದ ಆ ಅಪವಾದವನ್ನು ಅಲ್ಲಗಳೆಯುತ್ತಾನೆ. ಬಸವನ ಸುತ್ತಲೂ ಜಂಗಮ ಸಂದೋಹ ದಿನೇ ದಿನೇ ಹೆಚ್ಚುತ್ತದೆ. ನಾಡು ಪರನಾಡುಗಳಿಂದ ಎಷ್ಟೋ ಜನರು ಬಂದು ಆತನನ್ನು ಪೂಜಿಸುತ್ತಾರೆ. ಬಸವನ ಬಳಿಯಲ್ಲಿದ್ದ ಜನರಲ್ಲಿ ಎಷ್ಟೋ ಜನರು ಮಹಿಮಾಶಾಲಿಗಳಾಗಿದ್ದರು. ಬಸವನ ಪಕ್ಷದ ಜನರಿಗೂ ಬಿಜ್ಜಳನಿಗೂ ವಿರೋಧವುಂಟಾಗುತ್ತದೆ. ತನ್ನ ಮಂತ್ರಿಯಿಂದ ತನ್ನ ತೇಜೋಭಂಗವಾಗುವ ಸಂದರ್ಭಗಳು ಬಿಜ್ಜಳನಿಗೆ ಬರುತ್ತವೆ. ಮಡಿವಾಳ ಮಾಚಿದೇವನ ಮೂಲಕ ಬಿಜ್ಜಳನ ರಾಜ್ಯಮದದ ಸೊಕ್ಕು ಅಡಗುತ್ತದೆ. ಇಂತಹ ಇನ್ನೂ ಕೆಲವು ಘಟನೆಗಳು ನಡೆಯುತ್ತವೆ. ಬಸವನ ಮಹಿಮಾ ವಿಶೇಷದಿಂದ ವೀರಶೈವ ಮತವು ಪ್ರಬಲಿಸುತ್ತದೆ. ಅದರ ಫಲವಾಗಿಯೇ ಜೈನ, ಬ್ರಾಹ್ಮಣ ಧರ್ಮಗಳು ಕಳೆಗುಂದುತ್ತವೆ. ಆದ್ದರಿಂದ

ಪರವಾದಿಗಳು ಬಿಜ್ಜಳನಲ್ಲಿಗೆ ತಮ್ಮ ದೂರು ಒಯ್ದು ಬಸವನ ವಿಷಯವಾಗಿ ಆತನ ಮನಸ್ಸನ್ನು ಕಲುಷಿತ ಮಾಡುತ್ತಾರೆ. ಬಸವನು ಬಿಜ್ಜಳನೆದುರು ಶೈವ ಭಕ್ತರ ಘನತೆ ಯನ್ನು ಪ್ರದರ್ಶಿಸುತ್ತಾನೆ. ಮುಂದೆ ಶಿವಭಕ್ತರು ಬ್ರಾಹ್ಮಣನಾದ ಮಧುವಯ್ಯ, ಹೊಲೆಯನಾದ ಹರಳಯ್ಯ ಇವರಲ್ಲಿ ಶರೀರ ಸಂಬಂಧವನ್ನು ಉಂಟುಮಾಡುತ್ತಾರೆ. ಆಗ ರೋಷದಿಂದ ಬಿಜ್ಜಳನು ಅವರ ಕಣ್ಣುಗಳನ್ನು ಕೀಳಿಸುತ್ತಾನೆ. ಈ ಶೈವ ದ್ರೋಹಕ್ಕಾಗಿ ಜಗದೇವನು (೫) ಬಸವನ ಆಜ್ಞೆಯಂತೆ ಅನುಸರಿಸಿ ಬಿಜ್ಜಳನ ಕೊಲೆ ಮಾಡುತ್ತಾನೆ. ಆಗ ಬಸವನು ಸಂಗಮೇಶ್ವರನಲ್ಲಿಗೆ ಹೋಗಿ ಲಿಂಗದಲ್ಲಿ ಐಕ್ಯನಾಗುತ್ತಾನೆ.

ಬಸವನ ವಿಷಯವಾಗಿರುವ ಗ್ರಂಥಗಳಲ್ಲಿ ಸಿಂಗಿರಾಜಪುರಾಣವು ಕೆಲವೊಂದು ದೃಷ್ಟಿಯಿಂದ ಮಹತ್ವದ್ದಾಗಿದೆ. ಯಾಕಂದರೆ ಇದರಲ್ಲಿ ಬಸವ ಪುರಾಣಕ್ಕೆ ವ್ಯತಿರಿಕ್ತ ವಾದ ಸಂಗತಿಗಳಿವೆ. ಮೇಲೆ ನಿರ್ದೇಶಿಸಿದ ಬಸವಪುರಾಣದ ಘಟನೆಗಳಿಗೆ ಅನುಕ್ರಮ ವಾಗಿ ೧, ೨, ೩, ೪, ೫, ಹೀಗೆ ನಂಬರು ಹಾಕಿದೆಯಷ್ಟೇ. ಆ ನಂಬರಿನ ಘಟನೆ ಗಳಿಗೆ ಸಿಂಗಿರಾಜ ಪುರಾಣದಲ್ಲಿ ವ್ಯತಿರಿಕ್ತವಾಗಿರುವ ಮಾತುಗಳಿಗೆ ಅವೇ ನಂಬರು ಗಳನ್ನು ಹಾಕಿ ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳ ಗ್ರಂಥವನ್ನು ಅನುಸರಿಸಿ ಕೆಳಗೆ ನಿರ್ದೇಶಿಸುತ್ತೇನೆ.

೧. ಬಸವನ ಅವತಾರದ ಕಾರಣವು ಹೀಗಿದೆ:- ಕಾರಣಾಂತರದಿಂದ ಭೂಮಿಗೆ ಬಂದಿದ್ದ ವೃಷಭೇಶ್ವರನು ಲಿಂಗವನ್ನು ಪಟ್ಟದ ಕಲ್ಲಿನ ಅನಿಮಿಷಯ್ಯನಿಗೆ ಕೊಡು ತ್ತಾನೆ. ಲಿಂಗವಿಲ್ಲದ ವೃಷಭೇಶ್ವರನನ್ನು ಕೈಲಾಸದಲ್ಲಿ ದ್ವಾರಪಾಲಕರು ತಡೆಯು ವರು. ಈ ವಿಚಾರವು ಈಶ್ವರನಿಗೆ ಮುಟ್ಟುವುದು. ಲಿಂಗವನ್ನು ಪಡೆಯಲು ಭೂಮಿ ಯಲ್ಲಿ ಅವತರಿಸೆಂದು ವೃಷಭೇಶ್ವರನಿಗೂ ಬಿಜ್ಜಳ, ಕರ್ಣದೇವರಾಗಿ ಹುಟ್ಟಿರೆಂದು ದ್ವಾರಪಾಲಕರಿಗೂ ಆಜ್ಞೆ ಮಾಡುತ್ತಾನೆ.

೨. ಮಾದರಸನು ತನ್ನ ಮಗನಿಗೆ ಉಪನಯನ ಮಾಡಬೇಕೆಂದಾಗ ಬಸವನು ಪ್ರತಿಭಟಿಸಿದನು; ಪುರೋಹಿತರನ್ನು ನಿರುತ್ತರರನ್ನಾಗಿ ಮಾಡಿದನು. ಜಾತವೇದ ಮುನಿಗಳಿಂದ ಲಿಂಗಧಾರಣೆ ನಡೆದಿರುವುದರಿಂದ ತನಗೆ ಉಪನಯನ ಬೇಡವೆಂದನು.

೩. ಬಸವಣ್ಣನವರಿಗೆ ಉಪದೇಶ ಕೊಟ್ಟವರು ಜಾತವೇದ ಮುನಿಗಳು; ಸಂಗಮೇಶ್ವರನಲ್ಲ.

೪. ಲಿಖಿತವನ್ನು ಓದುವುದಕ್ಕೆ ಮೊದಲು ಬಸವನು ಸಾಧಾರಣ ಕರಣಿಕ ನಾಗಿದ್ದನು. ಓಲೆಯನ್ನು ಓದಿದ ನಂತರ ಮಂತ್ರಿಪದವನ್ನು ಪಡೆದನು.

೫. ಸಿಂಗಿರಾಜ ಪುರಾಣದಲ್ಲಿ ಬಿಜ್ಜಳನ ಕೊಲೆಯ ವಿಚಾರವಿಲ್ಲ. ಬಿಜ್ಜಳನು ಬಸವಣ್ಣನವರ ಅಪ್ಪಣೆಯಂತೆ ಚೆನ್ನಬಸವೇಶ್ವರನನ್ನು ಮಂತ್ರಿಯನ್ನು ಮಾಡಿಕೊಂಡನು. ಅರ್ಥಾತ್ ಜಗದೇವೋಪಾಖ್ಯಾನವು ಸಿಂಗಿರಾಜ ಪುರಾಣದಲ್ಲಿ ಇಲ್ಲ.

ಮೇಲೆ ನಿರ್ದೇಶಿಸಿದ ಎರಡೂ ಪುರಾಣಗಳ ಹೇಳಿಕೆಗಳಿಗೆ ಭಿನ್ನವಾದ ಹೇಳಿಕೆಗಳು ಬಸವರಾಜದೇವ ರಗಳೆಯಲ್ಲಿ ಇವೆ. ಬಸವನ ತರ್ಕಶುದ್ಧ ವಿಚಾರಬದ್ಧ ಚರಿತ್ರೆಯನ್ನು ಕಂಡುಕೊಳ್ಳುವುದಕ್ಕೆ ಅವು ಹೆಚ್ಚಾಗಿ ಸಹಾಯಕಾರಿಯಾಗುತ್ತವೆ. ಆದುದರಿಂದ ಆ ಹೇಳಿಕೆಗಳನ್ನು ಇಲ್ಲಿ ನಿರೂಪಿಸುವುದು ಅವಶ್ಯವಾಗಿದೆ. ಮೇಲಿನಂತೆ ಅನುಕ್ರಮ ನಂಬರುಗಳನ್ನೇ ಹಾಕಿ ಬಸವರಾಜದೇವ ರಗಳೆಯಲ್ಲಿಯ ವ್ಯತ್ಯಾಸಗಳನ್ನು ಕೆಳಗೆ ಹೇಳಿದೆ.

೧. ವೃಷಭಮುಖನು ಷಣ್ಮುಖನಿಗೆ ಪ್ರಸಾದವನ್ನು ಕೊಡದೆ, ಕೊಟ್ಟೆನೆಂದು ಸುಳ್ಳು ಹೇಳುತ್ತಾನೆ. ಹೀಗೆ ಸುಳ್ಳು ಹೇಳಿದ್ದಕ್ಕಾಗಿ ಈಶ್ವರನು ಸಿಟ್ಟಾಗಿ ಭೂಮಿಯಲ್ಲಿ ಅವತರಿಸೆಂದು ವೃಷಭಮುಖನಿಗೆ ಅಜ್ಞಾಪಿಸುತ್ತಾನೆ.

೨. ಉಪನಯನದ ಸಲುವಾಗಿ ಬಸವನು ತಂದೆಯನ್ನು ಪ್ರತಿಭಟಿಸಲಿಲ್ಲ. ಯಾಕಂದರೆ ಚಿಕ್ಕಂದಿನಲ್ಲಿಯೇ ತಂದೆತಾಯಿಗಳು ತೀರಿಹೋಗಿದ್ದರು. ಬಸವನಿಗೆ ಉಪನಯನವಾಗಿ ಹೋಗಿತ್ತು. ಮುಂದೆ ಕರ್ಮಲತೆಯಂತಿದ್ದ ಜನಿವಾರವು ಅನವಶ್ಯಕವೆಂದು ಕಂಡುಕೊಂಡು ಅದನ್ನು ಕಿತ್ತೊಗೆದನು.

೩. ಬಸವನಿಗೆ ಉಪದೇಶ ಕೊಟ್ಟವರು ಈಶಾನ್ಯ ಗುರುಗಳು.

೪. ಬಿಜ್ಜಳನ ಮಂತ್ರಿ ಬಲದೇವನಲ್ಲ; ಸಿದ್ಧರಸನು. ಬಸವನು ಮೊದಲು ಸಿದ್ಧರಸನಲ್ಲಿ ಸಾಧಾರಣ ಕರಣಿಕನಾಗಿದ್ದನು. ಕುಲ-ಗೋತ್ರಗಳು ಒಂದಾಗಲು ಸಿದ್ಧರಸನು ತನ್ನ ಮಗಳಾದ ಗಂಗಾಂಬಿಕೆಯನ್ನು ಕೊಟ್ಟು ವಿವಾಹ ಮಾಡಿದನು. ಹಾಗೂ ಬಸವನನ್ನು ತನ್ನ ಮನೆಯಲ್ಲಿ ಇಟ್ಟುಕೊಂಡನು. ಸಿದ್ಧರಸನು ಕಾಲವಾದ ಮೇಲೆ ಬಸವನು ಮಂತ್ರಿಯಾದನು. ಅರ್ಥಾತ್ ಓಲೆಯ ಅಲೌಕಿಕ ಘಟನೆಯ ಪ್ರಸ್ತಾಪವು ಬಸವರಾಜದೇವ ರಗಳೆಯಲ್ಲಿಲ್ಲ.

೫. ಜಗದೇವೋಪಾಖ್ಯಾನವು ಬಸವರಾಜದೇವ ರಗಳೆಯಲ್ಲಿಲ್ಲ. ಪ್ರೊ. ವೆಂಕಣ್ಣಯ್ಯನವರು ಪ್ರಕಟಿಸಿದ ಪುಸ್ತಕದಲ್ಲಿ ಬಿಜ್ಜಳನ ಕೊಲೆಯ ಪ್ರಸ್ತಾಪವಿಲ್ಲ. ಆದರೆ ಈ ಪುಸ್ತಕವು ಸಂಪೂರ್ಣವಾಗಿ ಪ್ರಕಟವಾಗಿಲ್ಲ. ೧೩ ನೆಯ ಸ್ಥಲವು ಅರ್ಧ ಮಾತ್ರ ಮುಗಿದಿದೆ. ಆ ಸ್ಥಲದ ಇನ್ನುಳಿದ ಕೆಲಭಾಗವು ರಾ. ಸಾ. ಹಳಕಟ್ಟಿಯವರಿಂದ ಶಿವಾನುಭವದಲ್ಲಿ ಪ್ರಕಟಿಸಲ್ಪಟ್ಟಿದೆ. (೧೯೩೦ ಆಗಸ್ಟ ಸಂಚಿಕೆ.) ಆದರಲ್ಲಿ " ಶಿವದ್ರೋಹಮಂ ಗೈದ ಬಿಜ್ಜಳನ ಕೊಲಿಸುತಂ " ಎಂದಿದೆ.

ಮೇಲೆ ಹೇಳಿದ ಐದು ಮಹತ್ವದ ವ್ಯತ್ಯಾಸಗಳಲ್ಲಿ ೧ ನೆಯದು ಪೌರಾಣಿಕ ವಾದುದರಿಂದ ಚರಿತ್ರ ದೃಷ್ಟಿಯಿಂದ ನಮಗೆ ಅದರ ಮಹತ್ವವಿಲ್ಲ. ೩ ನೆಯದರಲ್ಲಿ ಕೇವಲ ಹೆಸರಿನ ವ್ಯತ್ಯಾಸವಿದೆ. ಆದುದರಿಂದ ಇನ್ನುಳಿದ ಮೂರು ವ್ಯತ್ಯಾಸಗಳನ್ನು ಮಾತ್ರ ನಾವು ಗಮನಿಸಬಹುದು. ಬಸವನ ಚರಿತ್ರದ ದೃಷ್ಟಿಯಿಂದ ಅವು ಅರ್ಥ ವತ್ತಾಗಿವೆ. ಮಹತ್ವದ ಈ ವ್ಯತ್ಯಾಸಗಳನ್ನೀಗ ಚರ್ಚಿಸುವ.

ಉಪನಯನ :— ಭೀಮಕವಿಯ ಅಭಿಪ್ರಾಯದ ಪ್ರಕಾರ ಬಸವನು ತನ್ನ ಎಂಟನೆಯ ವರ್ಷಕ್ಕೇ ಜ್ಞಾನವನ್ನು ಪಡೆದು ಉಪನಯನ ಸಂಸ್ಕಾರದಲ್ಲಿ ಹುರು ಳಿಲ್ಲವೆಂದರಿತು ತನ್ನ ತಂದೆಯೊಡನೆ ವಾದಿಸಿದನು. ವೀರಶೈವ ದೀಕ್ಷೆಯನ್ನು ಪಡೆದು ಕೊಂಡು ತನಗೆ ಅನ್ಯ ಕರ್ಮಗಳು ಅನಾವಶ್ಯಕವೆಂದು ಹೇಳಿ ತಂದೆಯೊಡನೆ ಪ್ರತಿ ಭಟಿಸಿ ಹೊರಟುಹೋದನು. ಹಾಗೆಂದಮೇಲೆ ಎಂಟು ವರ್ಷದ ಬಾಲಕನಿಗೆ ಇಷ್ಟು ಜ್ಞಾನವೂ ಧೈರ್ಯವೂ ಬಂದಿದ್ದವೆಂದಹಾಗಾಯಿತು. ಇದು ಸರ್ವಸಾಮಾನ್ಯ ಜನರ ದೃಷ್ಟಿಯಲ್ಲಿ ಅಸಂಭಾವ್ಯವೇ ಸರಿ. ಎಂಟನೆಯ ವರ್ಷಕ್ಕೆ ಸರಿಯಾಗಿ ವಸ್ತ್ರವನ್ನೂ ಧರಿಸಿಕೊಳ್ಳದ ಬಾಲಕರನ್ನು ನಾವು ನೋಡುತ್ತೇವೆ. ಆದರೆ ಜಗತ್ತಿನ ಮಹದ್ವಿ ಭೂತಿಗಳನ್ನು ಇದೇ ಅಳತೆಗೋಲಿನಿಂದ ಅಳೆಯುವುದು ಸರಿಯಾಗಲಾರದು. ಸರ್ವಸಾಮಾನ್ಯವಲ್ಲದ ದಿವ್ಯ ಶಕ್ತಿಯು ಅಂಥ ವ್ಯಕ್ತಿಗಳಲ್ಲಿ ಇರುತ್ತದೆ. ಆ ದೃಷ್ಟಿ ಯಿಂದ ನಾವು ಬಸವನ ಚರಿತೆಯನ್ನು ಅಸಂಭಾವ್ಯವೆಂದು ತಿರಸ್ಕರಿಸುವ ಸಾಹಸ ಮಾಡಲಾಗದು. ಆದರೆ ವಿವಿಧವಾದ ಹೇಳಿಕೆಗಳಿದ್ದಲ್ಲಿ ಹೆಚ್ಚು ಸಮಂಜಸವಾದು ದನ್ನು, ಹೆಚ್ಚು ಬಲವತ್ತರವಾದುದೆಂದು ತೋರುವುದನ್ನು ಆರಿಸುವುದು ಮಾತ್ರ ಸರಿ ಯಾಗುವುದು. ಹಾಗೆ ಸರಿಯೆಂದು ತೋರುವ ಅಭಿಪ್ರಾಯಕ್ಕೆ ಬೇರೆ ಪುಷ್ಟಿ ದೊರೆತ ರಂತೂ ಆ ಅಭಿಪ್ರಾಯವನ್ನು ಗ್ರಾಹ್ಯವೆಂದೇ ಭಾವಿಸಬೇಕಾಗುವುದು. ಆದುದರಿಂದ ಬಸವರಾಜದೇವ ರಗಳೆಯಲ್ಲಿ ಉಪನಯನದ ವಿಷಯವಾಗಿ ಹೇಳಿದ ಮಾತುಗಳು ಹೆಚ್ಚು ಸತ್ಯವಾದುವು ಎಂದು ನಾವು ನಂಬಬೇಕಾಗುತ್ತದೆ. ಬಸವರಾಜದೇವ ರಗಳೆ ಯಲ್ಲಿ ಎರಡನೆಯ ಸ್ಥಳ, ೪೧ ನೆಯ ಸಾಲಿನಲ್ಲಿ,

" ಪರಮವೈರಾಗ್ಯಯುಕ್ತಂ ಶಿವಲಿಂಗಾರ್ಚನಾಯತ್ತ ಚಿತ್ತಂ, ಕರ್ಮಲತೆ ಯಂತಿರ್ದ ಜನ್ನಿವಾರಮಂ ಕಳೆದು ಬಿಸುಟಿ, ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದು ಬಿಸುಟು............ ಬಾಗೇವಾಡಿಯಿಂ ಪೊರಮಟ್ಟು,"

ಎಂದು ಹೇಳಿದೆ. ಇದರಿಂದ ಬಸವನಿಗೆ ಉಪನಯನವಾಗಿತ್ತು, ಬುದ್ಧಿ ಬಂದ ಮೇಲೆ ಅದು ಅರ್ಥರಹಿತವೆಂದು ತೋರಿತು, ಎಂದು ತಿಳಿದುಬರುತ್ತದೆ. ನಿಜವಾದ ಜ್ಞಾನದ ಹಂಬಲದಲ್ಲಿರುವಾಗ ಬಾಹ್ಯ ಆಚಾರಗಳು ಅನವಶ್ಯಕವೆಂದೆನಿಸುವುದು

ಸ್ವಾಭಾವಿಕ, ಸಮಂಜಸ, ವಿಚಾರಪ್ರಧಾನರಾದವರು ಈ ಮಾತನ್ನು ಅಲ್ಲಗಳೆಯ ಲಾರರು. ತನ್ನ ಸುತ್ತಲೂ ಜೇಡನ ಬಲಿಯಂತೆ ಹಬ್ಬಿಕೊಂಡಿದ್ದ ಕರ್ಮಕಾಂಡದ ಅರ್ಥವಿಹೀನತೆಯನ್ನು ಕಂಡು ಬಸವನು ಬೇಜಾರುಪಟ್ಟುಕೊಂಡಿರಬೇಕು. ಅಂತೆಯೇ ಕರ್ಮಲತೆಯಂತಿರ್ದ ಜನಿವಾರವನ್ನು ಬಿಸುಟಿರಬೇಕು. ಬಸವರಾಜ ದೇವ ರಗಳೆಯ ಈ ಹೇಳಿಕೆಯು ಸಯುಕ್ತಿಕವಾಗಿದೆ. ಆದುದರಿಂದ ಈ ಮಾತನ್ನು ನಾವು ಒಪ್ಪಿ ಬಸವನಿಗೆ ಉಪನಯನವಾಗಿತ್ತೆಂದು ಗ್ರಹಿಸಬೇಕಾಗುವುದು. ಈ ಗ್ರಹಿಕೆ ಯನ್ನು ಸಮರ್ಥಿಸುವುದಕ್ಕೆ ಅನುಕೂಲವಾಗುವಂತೆ ಬಸವನ ವಚನಗಳ ಆಧಾರ ದೊರೆಯುತ್ತದೆ. ಬುದ್ಧನಂತೆ ಬಸವನಾದರೂ ಜ್ಞಾನತೃಷೆಯಿಂದ ಬಳಲುತ್ತಿದ್ದಂತೆ ಕಂಡುಬರುತ್ತದೆ. ತನ್ನ ಸುತ್ತಲಿರುವ ಅಜ್ಞಾನದ ಪರೆಯನ್ನು ಹರಿದೊಗೆದು ಶುದ್ಧ ಜ್ಞಾನದ ಬೆಳಕನ್ನು ಕಾಣುವುದಕ್ಕೆ ಆತನು ಕೆಲವು ದಿವಸಗಳನ್ನು ಕಳೆದಿರಬೇಕು. ಜ್ಞಾನವು ದೊರೆತ ಮೇಲೆ ತನ್ನ ಮೊದಲಿನ ಹಾಗೂ ಈಗಿನ ಇರುವಿಕೆಯಲ್ಲಿಯ ವ್ಯತ್ಯಾಸವನ್ನು ಕುರಿತು ತನ್ನ ವಚನಗಳಲ್ಲಿ ಒಡನುಡಿದಿರಬೇಕು. ಅಂತೆಯೇ ಆ ರೀತಿಯ ಉಕ್ತಿಗಳು ಬಸವೇಶ್ವರ ವಚನಗಳಲ್ಲಿ ಕಂಡುಬರುತ್ತವೆ:

ಮತಿಮಾಂದ್ಯನಾಗಿ ಗತಿಯಕಾಣದೆ ಇದ್ದೆನಯ್ಯ.
ಪುರುಷನ ಒಲವಿಲ್ಲದ ಲಲನೆಯಂತಿದ್ದೆನಯ್ಯ.
ತಾಮಸ ಮುಸುಕಿ ಕಂಗಳ ಕೆಡಿಸಿತ್ತೆನ್ನ ಭಕ್ತಿ.
ಭಕ್ತಿಯ ಕತವ ನಾನರಿಯದೆ ಮತಿಗೆಟ್ಟ ಪರಿಯ ನಾನರಿಯೆನಯ್ಯ.

ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು ಜೇರೆ ಬಾವಿಯ ತೋಡಿ ಉಪ್ಪು ನೀರುಂಬುವನ ವಿಧಿಯಂತೆ ಆಯಿತ್ತೆನ್ನ ಮತಿ.

ಏನನೋದಿ (ವೇದ) ಏನ ಕೇಳಿ (ಪುರಾಣ) ಏನ ಮಾಡಿ (ವೈದಿಕಕರ್ಮಗಳು) ಫಲವೇನು? ನಿಮ್ಮವರೊಲಿಯದನ್ನಕ್ಕರ? ಶಿವಶಿವ ಮಹಾದೇವ, ಬಾಯಿಲ್ಲದವನ ಮಾತಿನಂತಾಯಿತ್ತೆನ್ನ ಬಾಳುವೆ.

ಹಗರಣಿಗನಂತೆ ನಗೆಗೇಡಿಯಾಯಿತ್ತು.

ನೆತ್ತಿಯಲ್ಲಿ ಅಲಗು ತಿರುಹುವಂತಪ್ಪ ವೇದನೆಯಹುದೆನಗೆ.

ಈ ಮುಂತಾದ ದೈನ್ಯದ ಹಂಬಲದಲ್ಲಿ ಬಸವನ ಹೃದಯದ ಅಂತರಾಳವು ಹೊರಟಿದೆ. ಶಿವಭಕ್ತಿ ಶಿವಾಚಾರವನ್ನರಿಯದ ಮುನ್ನಿನ ಆತನ ಮನಸ್ಸಿನ ಸ್ಥಿತಿಯೇ ಇಲ್ಲಿ ಚಿತ್ರಿತವಾಗಿರುವುದು. ನಿರರ್ಥಕವಾದ ಕರ್ಮಗಳಲ್ಲಿ ಬಸವನು ಕೆಲವು ದಿವಸ ತೊಳಲಾಡಿದನೆಂದು ಇದರಿಂದ ಸಿದ್ಧವಾಗುತ್ತದೆ. ಆವನ ತ್ವೇಷ, ಅಸಮಾಧಾನ ಗಳೇ ಈ ಮೇಲಿನ ಉಕ್ತಿಗಳಲ್ಲಿ ವರ್ಣಿಸಲ್ಪಟ್ಟಿವೆ. ಕರ್ಮಕಾಂಡದ ಬಾಹ್ಯನಾಟಕ

ವನ್ನು ಕಿತ್ತೊಗೆಯುವುದಕ್ಕೆ ಬಸವನಿಗೆ ಕೆಲವು ಕಾಲ ಹತ್ತಿರಬೇಕು. ಒಮ್ಮೆ ಅವುಗಳಿಂದ ಮುಕ್ತನಾಗಿ ವಿಶುದ್ಧ ಭಕ್ತಿಯನ್ನು ಕಂಡುಕೊಂಡ ಮೇಲೆ ಆತನಿಗೆ ಅನ್ಯಾದೃಶವಾದ ಆನಂದವಾಗಿರಬೇಕು. ಅದಕ್ಕೂ ಮೊದಲು ಆತನು "ಹೊಲಬುಗೆಟ್ಟ ಶಿಸುವು ತನ್ನ ತಾಯ ಬಯಸುವಂತೆ" "ಬಟ್ಟೆದಪ್ಪಿದ ಕರು ತನ್ನ ಹಿಂಡ ತಾನರಸುವಂತೆ" ಶಿವಶರಣರ ಬರವನ್ನು ಬಯಸುತ್ತಿದ್ದನು. ದಿನಕರನ ಉದಯಕ್ಕೆ ಕಮಲ ವಿಕಸಿತವಾದಂತೆ ಶಿವಶರಣರ ಅರಿವು ಬಸವನ ಹೃದಯ ಕಮಲವನ್ನು ವಿಕಸಿತಗೊಳಿಸಿರಬೇಕು. ಅಡವಿಯಲೊಬ್ಬ ಕಡು ನೀರಡಿಸಿ ಕಡೆಯಲ್ಲಿ ನೀರ ಕಂಡಂತೆ, ಕುರುಡ ಕಣ್ಣ ಪಡೆದಂತೆ, ಬಡವ ನಿಧಾನವ ಕಂಡಂತೆ ಬಸವನ ಸ್ಥಿತಿಯಾಯಿತು. ಆದುದರಿಂದಲೇ ಆತನು "…. ಆನಂದದಿಂದ ನಲಿದಾಡಿವೆನಯ್ಯಾ. ಆನಂದದಿಂದ ಕುಣಿದಾಡುವೆ"ಯೆಂದು ಉಬ್ಬಿರಬೇಕು. ಇದರಿಂದ ಬಸವನಿಗೆ ತೀವ್ರವಾದ ಜ್ಞಾನ ತೃಷೆಯಿತ್ತೆಂದೂ ಅದು ನಂತರ ಹಿಂಗಿತೆಂದೂ ತಿಳಿಯಬಹುದು. ಆ ಜ್ಞಾನತೃಷೆಯು ಹಿಂಗುವ ಮೊದಲು ಆತನು ಕರ್ಮಲತೆಯಂತಿದ್ದ ಜನಿವಾರವನ್ನು ಧರಿಸಿರಬೇಕು. ಹೋಮದ ನೆವದಿಂ ಹೋತನೇ ಕೊಂದು ತಿಂಬ ಅನಾಮಿಕರ ಮಧ್ಯದಲ್ಲಿರಬೇಕು. ಅಷ್ಟಮಿ, ನವಮಿ, ಎಂಬ ಕಲ್ಪಿತದಲ್ಲಿ ತೊಳಲಾಡಿರಬೇಕು. ಜ್ಞಾನದ ಬಲದಿಂದ ಅಜ್ಞಾನವು ಓಡುವಂತೆ, ಜ್ಯೋತಿಯ ಬಲದಿಂದ ತಮವು ಕೆರಳುವಂತೆ, ಸತ್ಯದ ಬಲದಿಂದ ಅಸತ್ಯವು ಅಳಿಯುವಂತೆ ಕೂಡಲಸಂಗಮನ ಶರಣರ ಅನುಭಾವದಿಂದ ಬಸವನ ಕರ್ಮಕಾಂಡದ ತೊಡಕು ಬಿಟ್ಟಿರಬೇಕು. ಇದಕ್ಕೂ ಮುಂಚೆ "ಜಲವ ನುಂಗಿತ್ತಯ್ಯ ಎನ್ನ ಕರವು, ಪತ್ರಿಯ ನುಂಗಿತ್ತಯ್ಯ ಎನ್ನ ಶಿಖಿ" ಹೀಗೆ ಬಸವನ ಸ್ಥಿತಿಯಿದ್ದಿತು. ಈ ವಚನದಿಂದ ಬಸವನು ಮೊದಲು ವೈದಿಕ ಕರ್ಮಕಾಂಡದ ಗುರುತುಗಳನ್ನು ಧರಿಸಿದ್ದನೆಂದೇ ಸಿದ್ಧವಾಗುವುದಿಲ್ಲವೇ? ಆದುದರಿಂದ ಬಸವರಾಜ ರಗಳೆಯಲ್ಲಿಯ ಹೇಳಿಕೆಯಂತೆ ಬಸವನ ಉಪನಯನವಾಗಿತ್ತೆಂದೇ ಊಹಿಸಬೇಕಾಗಿದೆ.

ಉಪನಯನ ವಿಚಾರದಲ್ಲಿ ಚಾಮರಸನು ಹರಿಹರನನ್ನು ಅನುಸರಿಸಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ "ಬಸವರಾಜಂಗೆ ಉಪನಯನವಾಯಿತು"[೧] ಎಂದು ಸ್ಪಷ್ಟವಾಗಿ ಚಾಮರಸನು ಹೇಳುತ್ತಾನೆ. ಬಸವನ ವಿಷಯವಾಗಿ ಆದಿ ಗ್ರಂಥವಾದ ಬಸವದೇವರಾಜ ರಗಳೆಯ ಆಧಾರ, ಚಾಮರಸನ ಅನುಮೋದನ, ಬಸವನ ವಚನಗಳ ಪುಷ್ಟಿ ಇವೆಲ್ಲವುಗಳ ಫಲವಾಗಿ ಬಸವನಿಗೆ ಉಪನಯನವಾಗಿತ್ತೆಂದು ತಿಳಿಯಬೇಕಾಗುತ್ತದೆ.

೧ ಲಿಂ. ವಿ. ಸಂ. ವಾಙ್ಮಯ ಶಾಖೆಯ 'ಪ್ರಭುಲಿಂಗ ಲೀಲೆ' ಪುಟ ೧೧೭, ಪದ್ಯ ೧೮.

ಇನ್ನು ನಾಲ್ಕನೆಯ ನಂಬರಿನ ವ್ಯತ್ಯಾಸ:—ಬಸವನಿಗೆ ಮಂತ್ರಿಪದವು ದೊರೆಕಿ ದುದು ಹೇಗೆ? ದೇವಲೋಕದಿಂದ ಬಿದ್ದ ಓಲೆಯೊಂದನ್ನು ಓದಿದುದರಿಂದ ಬಸವನ ಘನತೆಯು ಬಿಜ್ಜಳನಿಗೆ ಮನವರಿಕೆಯಾಯಿತೆಂದು ಭೀಮಕವಿ ಹೇಳುತ್ತಾನೆ. ಪೌರಾಣಿಕರ ಕಲ್ಪನಾ ಸೃಷ್ಟಿಯನ್ನು ಒಪ್ಪದವರು ಇದರಿಂದ ಸಮಾಧಾನ ಹೊಂದ ಲಾರರು. ಬುದ್ಧಿಯನ್ನು ಮಂಕುಗೊಳಿಸಿ, ಶ್ರದ್ಧೆಯನ್ನು ಹೆಚ್ಚಿಸುವ ಯುಗವು ಇಂದಿನದಲ್ಲ. ಘಟನೆಗಳಲ್ಲಿ ಸ್ವಾಭಾವಿಕತೆ, ಸುಸಂಬದ್ಧತೆಗಳನ್ನು ಈಗಿನವರು ಅಪೇಕ್ಷಿ ಸುತ್ತಾರೆ. ಅಂತಹವುಗಳು ವಿಶ್ವಸನೀಯವೆಂದು ತೋರುತ್ತವೆ. ಆದ್ದರಿಂದ ಬಸವ ರಾಜದೇವ ರಗಳೆಯಲ್ಲಿಯ ಹೇಳಿಕೆಯು ಹೆಚ್ಚು ಸಮಂಜಸವೆಂದು ನಾವು ಒಪ್ಪಲೇ ಬೇಕು. ಇಲ್ಲಿ ದೇವಲೋಕವೂ ಇಲ್ಲ; ಅಲೌಕಿಕ ಓಲೆಯೂ ಇಲ್ಲ. ಬಸವನು ಸಿದ್ಧರಸನ ಹತ್ತಿರ ಸರ್ವಸಾಧಾರಣ ಕರಣಿಕನಾಗಿದ್ದನು. “ ಸಿದ್ಧ ದಂಡಾಧಿಪಂ ........ ತನ್ನ ಲೆಕ್ಕಂಗಳಂ ಕೇಳುತಿರೆ........ ಗಣಕರ್ ತಪ್ಪಿ ಪೇಳೆ ಭರದಿಂದಂದು ತಪ್ಪಿದುದನಱಿ ದನಾ ಬಸವರಾಜಂ” (ಐದನೆಯ ಸ್ಥಲ), ಎಂದು ಬಸವರಾಜದೇವ ರಗಳೆಯಲ್ಲಿ ಹೇಳಿದೆ. ಗಣಕರು ತಪ್ಪು ಲೆಕ್ಕವನ್ನು ಹೇಳುವುದನ್ನು ಕಂಡು ಬಸವನು ಸಿದ್ಧರಸನಿಗೆ ಅದು ತಪ್ಪೆಂದು ತೋರಿಸಿಕೊಟ್ಟದ್ದರಿಂದ ಸಿದ್ಧರಸನು ಬಸವನ ಕೌಶಲ್ಯವನ್ನು ಕಂಡು ಮೆಚ್ಚಿದನು. ಹಾಗೂ ಹರುಷಿತನಾಗಿ ಆತನನ್ನು ಬಿಜ್ಜಳನ ಕಡೆಗೆ ಕರೆದು ಕೊಂಡು ಹೋಗಿ ಅವನಿಗೆ ಬಸವನ ಕೌಶಲ್ಯವನ್ನು ನಿವೇದಿಸಿ ಆತನನ್ನು ತನ್ನ ಭಾಂಡಾರದಲ್ಲಿಟ್ಟುಕೊಳ್ಳಲು ಆಗ್ರಹಪಡಿಸಿದನು. ಈ ಘಟನೆಯು ಕೇವಲ ಸ್ವಾಭಾ ವಿಕವಾಗಿದೆ. ಬಸವನ ಕೌಶಲ್ಯವು ಆತನಿಗೆ ಸಿದ್ಧರಸನಲ್ಲಿ ಕರಣಿಕನ ಕೆಲಸ ಕೊಡಿ ಸಿತು. ಸಿದ್ಧರಸನಿಗೆ ಬಸವನ ವಿಷಯವಾಗಿ ಆಸ್ಥೆಯುಂಟಾಯಿತು. ಆದುದರಿಂದ ಆತನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. “ ಕುಲವೊಂದು ಕುಲವಾಗೆ ನೆಲೆ ವಿಚಾರಿಸೆ ತನ್ನ ಸಂಬಂಧ ಒಂದಾಗೆ ಸಿದ್ಧದಂಡಾಧಿಪಂ ಹೆಚ್ಚುತಂ ಹಿಗ್ಗುತಂ” ತನ್ನ ಮನೆಯ ಆಡಳಿತವನ್ನೆಲ್ಲ ಅವನಿಗೆ ಒಪ್ಪಿಸಿದನು. ಕೆಲಕಾಲದ ಮೇಲೆ ಸಿದ್ಧರ ಸನು ಕಾಲವಾದನು. ಆಗ ಬಿಜ್ಜಳನು ಆತನ ಆಸ್ತಿಯನ್ನೂ ಅಧಿಕಾರವನ್ನೂ ಬಸವನಿಗೆ ಕೊಟ್ಟನು. ತನ್ನ ಕೌಶಲ್ಯದಿಂದ ರಾಜನ ಆಸ್ಥಾನದಲ್ಲಿ ಪ್ರವೇಶಪಡೆದು ಮುಂದೆ ತನ್ನ ಯೋಗ್ಯತೆ, ಗುಣಗಳ ಬಲದಿಂದ ಬಸವನು ಹೆಚ್ಚಿನ ಸ್ಥಾನವನ್ನು ಪಡೆದದ್ದು ಎಲ್ಲ ರೀತಿಯಿಂದಲೂ ಸಮಂಜಸವಾದದ್ದು; ಸರಿಯಾದದ್ದು. ಸರ್ವಸಾಧಾ ರಣ ಕರಣಿಕನಾಗಿದ್ದವನು ತನ್ನ ಯೋಗ್ಯತೆಯ ಬಲದಿಂದ ಕ್ರಮಶಃ ಭಾಂಡಾರಿ ಯಾದನೆಂದು ಹೇಳುವುದು ಸಯುಕ್ತಿಕವೇ ಸರಿ. ಸಿಂಗಿರಾಜನಾದರೂ ಕೂಡ ಬಸ ವನು ಮೊದಲು ಕರಣಿಕನಾಗಿದ್ದನೆಂದು ಒಪ್ಪುತ್ತಾನೆ. ಭಂಡಾರಿಯ ಅಧಿಕಾರವನ್ನು

ಪಡೆದನಂತರ ಬಸವನ ವಿವಾಹವಾಯಿತು. ಬಸವ ಪುರಾಣವನ್ನು ಅನುಸರಿಸುವದಾದರೆ ಬಸವನು ತನ್ನ ಎಂಟನೇ ವರ್ಷಕ್ಕೆ ಮನೆಯನ್ನು ಬಿಡಲು,ಆಗಲೇ ಬಲದೇವನು ಆತನ ವಿವಾಹವನ್ನು ಜರುಗಿಸಿದನೆಂದು ನಂಬಬೇಕಾಗುತ್ತದೆ. ಎಂಟು ವರ್ಷಕ್ಕೆ ಮದುವೆಯಾಗುವ ರೂಢಿಯು ಆಗ ಇರಲಿಲ್ಲ. ಬಸವನಿಗೆ ಆಗ್ಗೆ ಮದುವೆಯ ಅವಶ್ಯಕತೆ ಇರಲಿಲ್ಲ. ತಾನು ಪ್ರೌಢನಾದ ಮೇಲೆ, ರಾಜನ ಆಸ್ಥಾನದಲ್ಲಿ ಅಧಿಕಾರ ಪಡೆದ ಮೇಲೆ ಮದುವೆಯಾದುದು ಉಚಿತವೇ ಸರಿ. ಈ ದೃಷ್ಟಿಯಿಂದಲೂ ಕೂಡ ನಾವು ಹರಿಹರನ ಹೇಳಿಕೆಯನ್ನು ಸಮರ್ಥಿಸಬೇಕಾಗುತ್ತದೆ.

ಇನ್ನು ಐದನೆಯ ನಂಬರಿನ ವ್ಯತ್ಯಾಸ. ಅದು ಜಗದೇವೋಪಾಖ್ಯಾನ. ಬಸವರಾಜದೇವ ರಗಳೆಯ ಹದಿಮೂರನೆಯ ಸ್ಥಲದ ಇನ್ನುಳಿದ ಭಾಗವನ್ನು ಶಿವಾನುಭವ ಪತ್ರಿಕೆಯ ೧೯೩೦ನೆಯ ಇಸವಿಯ ಆಗಸ್ಟ ತಿಂಗಳ ಸಂಚಿಕೆಯಲ್ಲಿ ರಾ| ಸಾ| ಹಳಕಟ್ಟಿಯವರು ಪ್ರಕಟಿಸಿದ ಭಾಗವನ್ನು ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ತಮ್ಮ ಗ್ರಂಥದ ಎರಡನೆಯ ಆವೃತ್ತಿಯಲ್ಲಿ ಮುದ್ರಿಸಿದ್ದಾರೆ. ಅದರಲ್ಲಿ,

> [1]ಇಂತು ಬಸವಂ ಮರ್ತ್ಯದೊಳಗೆ ಮಹಿಮೆಯಂ ಬೀರಿ
> ಸಂತತಂ ಕೆಲಕಾಲ ಶಿವಸುಖದೊಳೋಲಾಡಿ
> ಶಿವದ್ರೋಹಮಂ ಗೈದ ಬಿಜ್ಜಳನ ಕೊಲಿಸುತಂ

ಎಂಬ ಮಾತುಗಳಿವೆ. ಇದರಿಂದ ಬಸವನು ಶಿವದ್ರೋಹವನ್ನು ಗೈದ ಬಿಜ್ಜಳನನ್ನು ಕೊಲ್ಲಿಸಿದನೆಂದು ತಿಳಿಯುತ್ತದೆ. ಅಂದರೆ ಭೀಮ ಕವಿಯಂತೆ ಹರಿಹರನೂ ಕೂಡ ಬಸವನು ಬಿಜ್ಜಳನ ಕೊಲೆಗೆ ಉತ್ತರವಾದಿ ಎಂದು ನಂಬುತ್ತಾನೆಂದು ಕಂಡುಬರುತ್ತದೆ. ಆದರೆ ಈ ಮಾತನ್ನು ನಂಬದಿರಲಿಕ್ಕೆ ಕಾರಣಗಳಿವೆ. ಮೊದಲನೆಯದಾಗಿ ಹಾಗೂ ಮುಖ್ಯವಾಗಿಯೆಂದರೆ,ಬಸವಣ್ಣನವರ ಉದಾತ್ತ ಜೀವನ ಹಾಗೂ ಬೋಧೆ. ಕಾಯಾ-ವಾಚಾ-ಮನಸಾ ಅಹಿಂಸೆಯನ್ನು ಬೋಧಿಸಿದ ಬಸವಣ್ಣನವರು ಓರ್ವ ವ್ಯಕ್ತಿಯ ಕೊಲೆಗೆ ಕಾರಣರಾದರೆಂಬುದನ್ನು ನಂಬುವುದು ಕಠಿಣ. ಈ ಮಾತನ್ನು ಪುಷ್ಟೀಕರಿಸಲು ಬಸವಣ್ಣನವರ ವಚನಗಳಿಂದ ಎಷ್ಟೋ ಉಕ್ತಿಗಳನ್ನು ಉದಾಹರಿಸಬಹುದು. ಆದರೆ ಹಾಗೆ ಉದಾಹರಣೆ ಕೊಡುವ ಆವಶ್ಯಕತೆ ಇಲ್ಲವೆಂದು ನಾನು ನಂಬುತ್ತೇನೆ. ಎರಡನೆಯದಾಗಿ, ಶಾಸನಗಳಿಂದ ಬಿಜ್ಜಳನ ಕೊಲೆಯಾಯಿತು, ಹಾಗೂ ಆ ಮೂಲಕ ರಾಜಕೀಯ ಕ್ರಾಂತಿಯುಂಟಾಯಿತು, ಎಂಬುದಾಗಿ ತರ್ಕಿಸಲು ಬರುವಂತಿಲ್ಲವೆಂದು ತಿಳಿಯುತ್ತದೆ. ಮೂರನೆಯದಾಗಿ ಸಿಂಗಿರಾಜ ಪುರಾಣ ಕರ್ತೃವು ಈ ಮಾತನ್ನು ಒಪ್ಪುವುದಿಲ್ಲ. ಬಸವಣ್ಣನವರ ಅದ್ಭುತ ಸಾಮರ್ಥ್ಯವನ್ನು ಕಂಡ ಬಿಜ್ಜಳನು ಅವರನ್ನು ಭಕ್ತಿಪೂರ್ವಕವಾಗಿ ಮನ್ನಿಸಿ ಅವರಿಗೆ ವಿಶ್ರಾಂತಿ

---

೧ ಈ ಭಾಗ ಪ್ರಕ್ಷಿಪ್ತವೆಂದೂ ಹೇಳಬಹುದಾಗಿದೆ.

ಕೊಡುವುದಕ್ಕಾಗಿ ಚಿಕ್ಕದಣ್ಣಾಯಕ ಚೆನ್ನಬಸವಣ್ಣನಿಗೆ ಮಂತ್ರಿಪದವನ್ನು ಕೊಟ್ಟ ನೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಹಾಗೂ ಬಿಜ್ಜಳ, ಬಸವರ ಸೌಹಾರ್ದ ದಿಂದಲೇ ಗ್ರಂಥವು ಕೊನೆಗಾಣುತ್ತದೆ೧. ಆದರೆ ಸಿಂಗಿರಾಜ ಪುರಾಣ ರಚನೆಯ ಕಾಲ, ಅದರಲ್ಲಿಯ ಹೇಳಿದ ಸಂಗತಿಗಳ ಐತಿಹಾಸಿಕ ಸತ್ಯ ಇವುಗಳ ವಿಚಾರವಾಗಿ ಭಿನ್ನಾಭಿಪ್ರಾಯಗಳೂ ಇವೆ. ಅಲ್ಲದೆ ಹರಿಹರ, ಭೀಮಕವಿ, ವಿರೂಪಾಕ್ಷ ಪಂಡಿತ, ಷಡಕ್ಷರದೇವ ಇವರೆಲ್ಲ ಬಸವನ ಆದೇಶದಂತೆ ಬಿಜ್ಜಳನ ಕೊಲೆ ನಡೆಯಿತೆಂದೇ ಹೇಳುತ್ತಾರೆ. ಆದ್ದರಿಂದ ಈ ವಿಷಯವು ತೊಡಕಿನದಾಗಿದೆ. ಆದರೆ ಶಿವದ್ರೋಹ ವನ್ನು ಮಾಡಿದವರನ್ನು ಕೊಲ್ಲಬೇಕೆಂಬ ಸಂಪ್ರದಾಯವು ಬಲವತ್ತರವಾಗಿರುವ ಕಾಲದಲ್ಲಿ ಇಂತಹ ಕೊಲೆಯು ನಡೆಯಿತೆಂದು ಮೇಲಿನ ಕವಿಗಳು ನಂಬಿರಬಹುದು. ಈ ವಿಷಯವನ್ನು ಶ್ರೀ. ಎಂ. ಆರ್. ಶ್ರೀನಿವಾಸ ಮೂರ್ತಿಗಳು ಒಳ್ಳೆಯ ಸ್ವಾರ ಸ್ಯಕರವಾದ ರೀತಿಯಲ್ಲಿ ಚರ್ಚಿಸಿ೨ "ಜಗದೇವನು ಬಿಜ್ಜಳನನ್ನು ಕೊಂದಿರಬಹುದು, ಆದರೆ ಬಸವಣ್ಣನವರು ಪ್ರೇರಣ ಕರ್ತೃವಲ್ಲ." ಎಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿಗಳ ಈ ಚರ್ಚೆಯು ಸಮಂಜಸವೆಂದು ತೋರು ತ್ತದೆ. "ಕಾಲಜ್ಞಾನದ ವಚನಗಳು" ಎಂಬ ಪುಸ್ತಕದಲ್ಲಿ:—

---

೧ ಪಾದೋದಕ ಪರುಷ ಕಬ್ಬುನವ ಮುಟ್ಟಲಿಕೆ ।
ಹೋದಡವಲೋಹವದು ಪೊನ್ನಾಯ್ತು ದರುಶನದಿ ।
ಹೋದುದರಸನ ನಿಂದಕರ ಶಾಪವಾದಿಯಲಿ ಶಿವನ ಮುಂದಿಹಪರಗಳು ॥
ವಾದಿಸಿದ ವಾದ ಮಡಿಯಿತ್ತು ಕ್ರೀಭಾವದಿಂ ।
ಪಾದಕೆರಗಿದೊಲೆರಗಲಿಹವ ಪರವೆತ್ತುವಂ ।
ತಾದಯಾಂಬುಧಿ ಬಸವರಾಜ ಬಿಜ್ಜಳನರೇಂಪ್ರನ ಮುಕುಟವಿಡಿದೆತ್ತಿದಾ ॥

ದಂಡನಾಯಕ ಪದಸ್ಥಿತವೆಸರದಾ ಚಿಕ್ಕ ।
ದಂಡನಾಯಕನಾಲರಸು ಗಣಮುಖದಲ್ಲಿ ।
ಕೊಂಡಾಡಿದಸು ಬಸವರಾಜದೇವರಿಗೆ ದೇವನಾವು ಸಾಮ್ಯವೆಂಪೂ ।
ಮಂಡೆಯ ಪೇಲೆರಡು ಕೈಗಳಸವಿಡಲುಳಿದ ।
ಮಂಡಲೇಶ್ವರ ಮಂತ್ರ ತಂತ್ರ ಮೂವತ್ತಾರು ।
ಕೊಂಡೆಯರ ನಿವಹವೆಲ್ಲೆದ್ದು ಜಯ ಜಯವೆನುತ್ತಿರ್ದುದೆಮ್ಮ ಬಸವಗೇ ॥

ಇವು ನನಗೆ ದೊರೆತ ಸಿಂಗಿರಾಜ ಪುರಾಣದ ಕೈಬರೆಹದ ಪ್ರತಿಯಲ್ಲಿಯ ೪೩ ಹಾಗೂ ೪೮ನೆಯ ಪದ್ಯಗಳು.

೨ ಭಕ್ತಿ ಭಾಂಡಾರಿ ಎಂಬ ಪುಸ್ತಕದಲ್ಲಿ ೮೩-೧೦೫ ಪುಟಗಳು.

"ಪ್ರಮಥರು ಸಹಿತ ಚೆನ್ನಬಸವರಾಜದೇವರು ಅನುಭವ ಮಂಟಪದಲ್ಲಿ ಮೂರ್ತಂಗೈದಿರ್ಪ ಸಮಯದಲ್ಲಿ ಜಗದೇವ, ಮಲ್ಲಿಬೊಮ್ಮಣ್ಣಂಗಳೀರ್ವರು ಬಂದು .... ನಾಳೆ ಮಂಗಳವಾರ .... ಬಿಜ್ಜಳರಾಯನ ಇರಿದು ಕೊಂದಿಹೆವು. ನೀವೆಲ್ಲ ಗಣಂಗಳು ಸಹಿತವು ಉಳಿವೆಗೆ ಕಳುಹಿಸಿಕೊಂಡು ಚಿತ್ತೈಸುವುದು" ಎಂದು ಹೇಳಿದಂತೆ ಬರೆದಿದೆ[೧]. ಅಲ್ಲದೆ ಅವರ ಈ ಕಾರ್ಯಕ್ಕೆ ಮಡಿವಾಳಯ್ಯಗಳು ಹೆಚ್ಚು ಉತ್ತೇಜನವನ್ನು ಕೊಟ್ಟಂತೆ ಈ ಗ್ರಂಥದಿಂದ ತಿಳಿದು ಬರುತ್ತದೆ. ಹಾಗೂ ಈ ಗ್ರಂಥದಲ್ಲಿಯ ಬಸವರಾಜದೇವರು ನಿರೂಪಿಸಿದ ಕಾಲಜ್ಞಾನದ ವಚನವು ಎಂಬ ಭಾಗದಲ್ಲಿ ಬಸವಣ್ಣನವರು ಹೀಗೆ ಹೇಳಿದಂತೆ ಇದೆ:—

"ನಾಸು ಬಂದ ಕಾರ್ಯಕ್ಕೆ ನೀವು ಬಂದಿರಿ. ನೀವು ಬಂದ ಕಾರ್ಯಕ್ಕೆ ನಾನು ಬಂದೆನು. ನಾನು ನೀವು ಬಂದ ಕಾರ್ಯಕ್ಕೆ ಬಂದಾತನಲ್ಲಮಪ್ರಭುದೇವರು. ಮುಂದೆ ಕೆಲವು ದಿನಸಕ್ಕೆ ಕಲ್ಯಾಣವೆಂಬ ಪ್ರಣತಿಯಾದಿತ್ತು. ನಾನೇ ತೈಲವಾದೆನು. ಚಿಕ್ಕದಂಡನಾಯಕರೇ ಬತ್ತಿಯಾದಾರು. ಪ್ರಭುದೇವರೇ ಜ್ಯೋತಿಯಾದಾರು. ಪ್ರಣತಿ ಒಡೆದಿತ್ತು. ತೈಲವರತಿತ್ತು. ಬತ್ತಿ ಸವೆಯಿತ್ತು. ಜ್ಯೋತಿ ಬಯಲಾಯಿತ್ತು. ಸೊಡ್ಡಳ ಬಾಚರಸಯ್ಯ, ಸುಂಕದ ಬಂಕಯ್ಯ .... ಮಡಿವಾಳ ಮಾಚಿದೇವಯ್ಯ ಮೊದಲಾದ ಅಮರಗಣಂಗಳು ನಮ್ಮ ಕೈಯ್ಯೆಡೆಗೆ ಚಿಕ್ಕದಂಡನಾಯಕರ ಕೊಟ್ಟು ನಾವು ಕಪ್ಪಡಿಯ ಸಂಗಮೇಶ್ವರಕ್ಕೆ ಹೋದಿಹೆವು. ನಾವು ಹೋದ ಮೂರುವರೆ ತಿಂಗಳಿಂದೆ ಮೇಲೆ ಹರಳಯ್ಯ ಮಧುವಯ್ಯಗಳಿಂದ ಕದನ ಹುಟ್ಟಿತ್ತು. ಜಗದೇವ ಮಲ್ಲಿಬೊಮ್ಮಣಗಳೀರ್ವರು ಪಂಜುಗಾರರಾಗಿ ಹೋಗಿ ಬಿಜ್ಜಳರಾಯನ ಕ್ಷಯವ ಮಾಡಿಯಾರು"[೨] ಈ ಕಾಲಜ್ಞಾನವನ್ನು ಯಾರು ಯಾವಾಗ ಬರೆದರೆಂಬ ಮಾತು ನಿಕೃಷ್ಟವಲ್ಲದಿದ್ದರೂ ಕೂಡ, ಮೇಲೆ ಹೇಳಿದ ಮಾತು ಬಸವಣ್ಣನವರ ಜೀವನಕ್ಕೆ ಅನ್ವಯಿಸುವ ಸಮಂಜಸವಾದ ಹೇಳಿಕೆಯಾಗಿದೆ. ಈ ಹೇಳಿಕೆಯಂತೆ ಬಿಜ್ಜಳನ ಕೊಲೆ ಜಗದೇವಾದಿಗಳಿಂದ ನಡೆದಿರಬಹುದಾದರೂ ಬಸವಣ್ಣನವರು ಅದಕ್ಕೆ ಉತ್ತರವಾದಿಗಳಲ್ಲವೆಂದು ನಾವು ಸ್ಪಷ್ಟವಾಗಿ ಹೇಳಲಿಕ್ಕೆ ಅಡ್ಡಿಯಿಲ್ಲ. ಶಿವದ್ರೋಹವನ್ನು ಮಾಡಿದವರನ್ನು ಕೊಲ್ಲಿಸುವುದೂ ಒಂದು ಧರ್ಮಕಾರ್ಯವೆಂದು ನಂಬುವ ಕಾಲದಲ್ಲಿದ್ದ ಹರಿಹರನ (?) ಹೇಳಿಕೆಯನ್ನು ನಾವು ನಿಜಸಂಗತಿಯೆಂದು ನಂಬಬೇಕಾದ ಕಾರಣವಿಲ್ಲ. ಅಹಿಂಸಾವಾದಿಗಳಾದ ಮಹಾ

೧ ರಾ। ಸಾ। ಹಳಕಟ್ಟಿಯವರು ಪ್ರಕಟಸಿದ 'ಕಾಲಜ್ಞಾನದ ವಚನಗಳು' ಎಂಬ ಪುಸ್ತಕದಲ್ಲಿಯ ೧ನೆಯ ಪುಟ.

೨ ಕಾಲಜ್ಞಾನದ ವಚನಗಳು ಪುಟ ೪೩—೪೪

ತ್ಮರು ಪರಪಕ್ಷದವರ ಕೊಲೆಗೆ ಪ್ರೇರಣಕರ್ತೃವಾಗಲಾರರು. ಬಸವಣ್ಣನವರು ಅಹಿಂಸಾವಾದಿಗಳಾದ ಮಹಾತ್ಮರಾಗಿದ್ದರು.

ತುಲನಾತ್ಮಕ ಚರಿತ್ರೆಯಲ್ಲಿಯ ಮುಖ್ಯ ವ್ಯತ್ಯಾಸಗಳನ್ನು ಚರ್ಚಿಸಿದ ನಂತರ ಈಗ ಬಸವರಾಜದೇವ ರಗಳೆಯಲ್ಲಿ ಬಸವಣ್ಣನವರ ಮೂರ್ತಿಸ್ವರೂಪವು ಹೇಗೆ ಚಿತ್ರಿತವಾಗಿದೆಯೆಂಬುದನ್ನು ನೋಡಬೇಕಾಗಿದೆ. ಬಸವಣ್ಣನವರ ವಿಷಯವಾಗಿರುವ ಇತರ ಪುರಾಣಗಳಲ್ಲಿ ಶಿವಶರಣರ ಕಥಾವಳಿಗಳನ್ನೊಳಗೊಂಡ ಬಸವೇಶನ ಲೀಲೆ, ವೀರಶೈವ ಮತೋದ್ಧಾರಣ ಚಳವಳಿಯ ನಾಯಕನ ಚಟುವಟಿಕೆ, ನಂದೀಶನ ಅವತಾರದ ಪವಾಡಗಳ ವರ್ಣನೆ—ಇವುಗಳು ಕಂಡುಬರುತ್ತವೆ. ಶೂನ್ಯ ಸಂಪಾದನೆಯಲ್ಲಿ ಅನುಭವ ಮಂಟಪದ ಶಿವಶರಣರೆಂಬ ತಾರೆಗಳ ಮಧ್ಯದಲ್ಲಿ ಚಂದ್ರನಂತೆ ಶೋಭಿಸುವ ಬಸವಣ್ಣನವರ ಅನುಭಾವದ ನಿರೂಪಣೆ ಇದೆ. ಆದರೆ ಬಸವರಾಜದೇವ ರಗಳೆಯಲ್ಲಿ ಮಾತ್ರ ಬಸವಣ್ಣನವರ ಮಾನವಜೀವನವು ವಿಕಾಸವಾದ ಸುಂದರ ಚಿತ್ರವು ಕಂಡುಬರುತ್ತದೆ. ಇಲ್ಲಿ ಭಕ್ತನೊಬ್ಬನು ಹಿರಿಯ ಭಕ್ತನೊಬ್ಬನನ್ನು ಭಕ್ತಿಪರವಶತೆಯಿಂದ ಕೊಂಡಾಡಿದ ಗಾನಲಹರಿ ಇದೆ. ಹಾಗೂ ಉಳಿದ ಪ್ರಮಾಣಗಳಿಗಿಂತ ಹೆಚ್ಚು ತರ್ಕಶುದ್ಧವೆಂದು ತೋರುವ ಜೀವನದ ಬೆಳವಣಿಗೆಯ ಕಾವ್ಯಮಯ ಚಿತ್ರವಿದೆ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ತಮ್ಮ ಪೀಠಿಕೆಯಲ್ಲಿ ಈ ವಿಚಾರವನ್ನು ಚೆನ್ನಾಗಿ ನಿರೂಪಿಸುತ್ತ ಹೀಗೆ ಹೇಳಿದ್ದಾರೆ. "ಹರಿಹರನು ಅವರ ಜೀವನದ ಈ ಮೂಲ ರೇಖೆಗಳು ಸ್ಪಷ್ಟವಾಗುವಂತೆ ಕಾವ್ಯರಚನೆ ಮಾಡಿದ್ದಾನೆ. ತನ್ನ ನೈಪುಣ್ಯದಿಂದ ಬಸವಣ್ಣನವರ ಅಲೌಕಿಕ ಕಾವ್ಯಗಳನ್ನೂ ಅದ್ಭುತವಾದ ಮಹಿಮೆಗಳನ್ನೂ ಹರಿಹರನು ಮೇಲಿಂದ ಮೇಲೆ ಉದ್ಘೋಷಿಸುತ್ತಿದ್ದರೂ ಅವರ ಸರಳವಾದ ಮಾನವಹೃದಯವನ್ನು ಮಾತ್ರ ಎಲ್ಲಿಯೂ ಮರೆ ಮಾಡಿಲ್ಲ.[೧] ಬಸವಣ್ಣನವರ ಮಾನವ ಹೃದಯವನ್ನು ಅವರು ಸಂಗಮೇಶ್ವರನನ್ನು ಅಗಲಬೇಕಾದ ಸಂದರ್ಭದಲ್ಲಿ ಹೇಳುವ ಮಾತುಗಳಿಂದ ಸರಿಯಾಗಿ ಗ್ರಹಿಸಬಹುದಾಗಿದೆ:- "ನೀನೇಕೆ ಈ ನುಡಿಯೇಕೆ? ಹೊದಿದ್ದರಂ ಹೋಗೆಂಬರೆ? ಸಾರ್ದರಂ ಸೈರಿಸೆಂಬರೆ? ನಂಬಿದರ ಗೋಣಂ ಕೊಯ್ವರೆ? ಶಿಶುವನಿರಿವರೆ? ಪಶುವಂ ಕೊಲುವರೇ? ಎನ್ನಂ ಬಿಡುವರೇ? ಕರುಣಿ ಕರುಣಿ, ಕರುಣಂ ಲೇಸಾಯ್ತು. ಅರ್ಚಿಸಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು?— ಎಂದೊಟ್ಟೆ ಒಚಿಲಿ ಪರಿತಂದು ಸಂಗನಂ ತಕ್ಕೈಸಿ, ಪಳವಿಸಿ, ಪಲುಂಬಿ, ಗೋಳಿಟ್ಟು, ಅಲಿಟ್ಟು, ಸಿವದಿಟ್ಟು, ಮೊರೆಯಿಟ್ಟು ಮೂರ್ಛಿಸುತ್ತೆಂತಕ್ಕೆ ಚ್ಚತ್ತು ಮೆಲ್ಲ ಮೆಲ್ಲನಾಲಿಂಗನಮಂ ಸಡಿಲ್ಚಿ ನಡೆತಂದು— "

೧ ೧೯೩೮ರಲ್ಲಿ ಪ್ರಕಟವಾದ ಬಸವರಾಜದೇವ ರಗಳೆಯ ಪೀಠಿಕೆಯ ಪುಟ ೮.

ಇಲ್ಲಿ ನಿರೂಪಿತವಾದ ಜೀವನವು ಹೆಚ್ಚು ಸಹಜವಾದುದು ಎಂಬ ಮಾತಿಗೆ ಬಿಜ್ಜಳನಲ್ಲಿಯ ಅಧಿಕಾರಪ್ರಾಪ್ತಿಯ ಘಟನೆಯು ಉತ್ತಮ ನಿದರ್ಶನವಾಗಿದೆ. ಅಲೌಕಿಕ ಓಲೆಯ ಪ್ರಸ್ತಾಪಕ್ಕೆ ಬದಲಾಗಿ ಇಲ್ಲಿ" ಗಣಕರ್ ತಪ್ಪಿ ಪೇಳೆ ಭರದಿಂದ ಅದು ತಪ್ಪಿದುದನಱಿದು ಆ ಬಸವರಾಜಂ ನೋಡಿ, ಬುದ್ಧಿ ನಿಮಗಿಲ್ಲ ಲೆಕ್ಕಂ ತಪ್ಪಿದುದು ನೋಡಿ" ಎಂದು ಹೇಳಿದನೆಂದೂ, ಲೆಕ್ಕದಲ್ಲಿಯ ಈತನ ಕೌಶಲ್ಯದಿಂದ ಈತನಿಗೆ ಕರಣಿಕನ ಸ್ಥಾನವು ದೊರೆಯಿತೆಂದೂ ಹೇಳಿದೆ. ಹಾಗೂ ಆತನು ತನ್ನ ಪ್ರಾವೀಣ್ಯದಿಂದ ಉತ್ತರೋತ್ತರ ಹೆಚ್ಚು ಘನತೆಗೇರಿದುದು ಸ್ವಾಭಾವಿಕವಾಗಿದೆ. ಹರಿಹರನು ಇಂತಹ ಕೆಲವು ಘಟನೆಗಳಿಂದ, ಬಸವನ ಜೀವನ ಚರಿತ್ರೆಯು ಹೆಚ್ಚು ಸ್ವಾಭಾವಿಕವೆಂದು ತೋರುವಂತೆ ಚಿತ್ರಿಸಿದ್ದಾನೆ. ಪುರಾಣಪ್ರಿಯರಿಗೆ ಈ ಮಾತು ರುಚಿಸುವದಿಲ್ಲೆಂಬ ವಿಷಯ ಬೇರೆ.

ಬಸವನ ಮೂರ್ತಿ ಸ್ವರೂಪದ ನಿರ್ದುಷ್ಟ ಕಲ್ಪನೆಯನ್ನು ಹರಿಹರನು ಇಟ್ಟುಕೊಂಡಿದ್ದನೆಂದು ಸೂಚಿಸುವ ಅನೇಕ ಉಕ್ತಿಗಳು ರಗಳೆಯಲ್ಲಿ ದೊರೆಯುತ್ತವೆ. ಅವುಗಳಲ್ಲಿ ಎಂಟನೆಯ ಸ್ಥಲದಲ್ಲಿ ಶರಣರು ಬಸವನನ್ನು ಹೊಗಳಿದ ರೀತಿಯು ಹೆಚ್ಚು ಪರಿಣಾಮಕಾರಿಯಾಗಿದೆ. ಶರಣರು ಬಸವನನ್ನು ಕುರಿತು ಹೀಗೆ ಹೇಳಿದ್ದಾರೆ:

'ಎಲೆ ಬಸವ,....ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ, ಸ್ವಪ್ನ, ಸುಷುಪ್ತಿ ಅವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚಶಿವರಾತ್ರಿಯನಚ್ಚರಿಯಿಂ ಮಾಳ್ಪೆ. ಜಂಗಮ ಪ್ರಾಣಿಯಾಗಿಪ್ಪೆ. ಶಿವಲಿಂಗರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ,....ಲಿಂಗದಲ್ಲಿ ಕಠಿನಮಂ ಕೇಳೆ ಜಂಗಮದಲ್ಲಿ ಜಾತಿಯನಱಿಸೆ ಪ್ರಸಾದದಲ್ಲಿ ಅಪವಿತ್ರತೆಯನ್ನಱಿಯೆ, ಪರಾಂಗನೆಯರಂ ಹೆತ್ತತಾಯ್ಗಳೆಂಬೆ. ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ. ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಂಗದೀಯೆ, ಕೊಟ್ಟು ನೆನೆಯೆ, ನಟ್ಟು ಕೀಳೆ.... ನೆನೆದು ಮರೆಯೆ ಮನದೊಳೋವರಿಯಿಲ್ಲ, ಬುದ್ಧಿಯೊಳು ವಿಸಂಚವಿಲ್ಲ, ಅಹಂಕಾರದೊಳು ಗರ್ವವಿಲ್ಲ, ಚಿತ್ತದೊಳು ಹೊಱೆಯಿಲ್ಲ, ಕಾಮವಿಲ್ಲ, ಕೋಪದ ಮಾತೇಕೆ? ಲೋಭದ ಗಾಳಿ ತೀಡದು, ಮೋಹಕ್ಕೆ ತೆಱಹಿಲ್ಲ, ಮದದ ಸೊಗಡು ಹೊದ್ದದು, ಮತ್ಸರಕ್ಕಿಂಬಿಲ್ಲ, ಬಸವರಾಜ, ನಿನ್ನ ಗುಣಂಗಳಂ ಬಣ್ಣಿಸಲೆಮ್ಮಳವಲ್ಲ........"

ಬಸವಣ್ಣನವರ ಮೂರ್ತಿಸ್ವರೂಪದ ಈ ಶಬ್ದಚಿತ್ರವು ಅಪೂರ್ವವಾಗಿದೆ.

ಹರಿಹರನು ಬಸವಣ್ಣನವರನ್ನು ಬಗೆಬಗೆಯಿಂದ ಹೊಗಳಿದ್ದಾನೆ. ಈ ಗ್ರಂಥದಲ್ಲಿ ಇನ್ನೂ ಅನೇಕ ಕಡೆಗೆ ಇಂತಹ ಹೊಗಳಿಕೆಯನ್ನು ನೋಡಬಹುದು. ಹಾಗೂ ಹರಿಹರನ ಭಕ್ತಿಯ ಆವೇಶದ ಪರಿಚಯವನ್ನು ಮಾಡಿಕೊಳ್ಳಬಹುದು.

ರಗಳೆಯಲ್ಲಿ ಬಸವಣ್ಣನವರ ಶಿವಪೂಜೆಯ ಸಂಭ್ರಮ, ನಿಷ್ಠೆ, ಸರ್ವಾರ್ಪಣ ಭಾವ, ತಾದಾತ್ಮ್ಯಭಾವ, ಸೇವಕಭಾವ, ಲಿಂಗ-ಜಂಗಮ ಸಾಮರಸ್ಯ—ಇವೆಲ್ಲವುಗಳನ್ನು ನಾವು ಕಾಣುತ್ತೇವೆ. ಇವೆಲ್ಲವುಗಳಿಂದ ಬಸವಣ್ಣನವರ ಮೂರ್ತಿಸ್ವರೂಪವು ಉಜ್ವಲವಾಗಿ ತೋರುತ್ತದೆ. ಸತಿ-ಪತಿಭಾವ, ಸೇವ್ಯ-ಸೇವಕಭಾವ, ಇವುಗಳಿಂದ ಬಸವನ ಅನನ್ಯವಾದ ಶಾರಣ್ಯವು ಕಂಡುಬರುತ್ತದೆ. ಕಪ್ಪಡಿ ಸಂಗಮೇಶ್ವರನ ದೇವಾಲಯಕ್ಕೆ ಬಂದಕೂಡಲೆ ದೊಪ್ಪನೆ ಬಿದ್ದು 'ದೇವದೇವ,ಅನಾಥನಾಥ,ಅನಿಮಿತ್ತ ಬಂಧುವೆ, ತಾಯ್ತಂದೆ, ಬಂಧುಬಳಗವೆ, ಬಲವೆ, ಛಲವೆ, ತವರೆ, ಕಣ್ಣೆ, ಮತಿಯೆ, ಪುಣ್ಯವೆ, ಪ್ರಾಣವೆ, ಕಾವುದು, ಕಾವುದು' ಎಂದು ಮೂರ್ಛೆ ಹೋಗುವ ರೀತಿಯನ್ನು ಗಮನಿಸಬೇಕು. ಮೂರನೆಯ ಸ್ಥಲದಲ್ಲಿಯ ಶಿವಪೂಜಾ ಸಂಭ್ರಮವನ್ನು ಓದಿ ತಲ್ಲೀನತೆ ಪಡೆಯಬೇಕು. ಏಳನೆಯ ಸ್ಥಲದಲ್ಲಿಯ ಗಣಾರಾಧನೆಯ ವರ್ಣನೆಯಲ್ಲಿಯ ಬಸವನ ಅನನ್ಯವಾದ ಭಕ್ತಿ ನಿಷ್ಠೆಗಳನ್ನು ನೋಡಿ ನಲಿಯಬೇಕು. ಒಂಬತ್ತನೆಯ ಸ್ಥಲದಲ್ಲಿ ಕಳ್ಳರು ಗೋವುಗಳನ್ನು ಕಳವು ಮಾಡಿಕೊಂಡು ಹೋದರೆಂದು ಗೋವಳರು ಬಂದು ಬಸವನಿಗೆ ಬಿನ್ನವಿಸಿದಾಗ ಆತನು,

........ಮರುಳ ಗೋವಳಾ ಭಕ್ತರೇಂ ಕಳ್ಳರೇ
ನಿನಗೇನು ತಮ್ಮೊಡವೆಯಂ ತಾವೆ ಕೊಳ್ಳರೇ

....   ....   ....   ....   ....

....   ....   ....   ....   ....

ಸಂಗನೇ ಕೊಂಬವಂ ಸಂಗನೇ ಕೊಡುವವಂ
ಸಂಗನೇ ಉಂಬುವವಂ ಸಂಗನೇ ಉಡುವವಂ,

ಎಂದು ಹೇಳುತ್ತಾನೆ. ಇಲ್ಲಿ ಆತನ ಸರ್ವಾರ್ಪಣಭಾವವು ಸರಿಯಾಗಿ ಚಿತ್ರಿತವಾಗಿದೆ. ಅದೇ ಒಂಬತ್ತನೆಯ ಸ್ಥಲದಲ್ಲಿ ಬಸವನ ಪ್ರಾಣವು ಶರಣರೊಡನೆ ಹೊರಟು ಹೋದುದರ ವರ್ಣನೆ ಇದೆ. ಇದರಿಂದ ಆತನ ನಿಜವಾದ ನಿಷ್ಠೆ, ಶರಣರ ಪ್ರೇಮಗಳು ವ್ಯಕ್ತವಾಗುತ್ತವೆ. ಬಸವನೇ ಹೀಗೆ ಹೇಳುತ್ತಾನೆ:

ಶರಣತತಿ ಹೋಹುದೇ ಎನ್ನ ಹರಣದ ಹೋಗು
ಶರಣಬರವೇ ಎನ್ನ ಹರಣದ ಬರವಿನಾಗು

ಹತ್ತನೆಯ ಸ್ಥಲದಲ್ಲಿ ಕಂಬಳಿನಾಗಿ ದೇವನೆಂಬ ಅಸ್ಪೃಶ್ಯನ ಮನೆಯನ್ನು ಹೊಕ್ಕು ಪ್ರಸಾದ ಸ್ವೀಕರಿಸಿದುದರ ಪ್ರಸ್ತಾಪವಿದೆ. ಇದರಿಂದ ಬಸವಣ್ಣನವರ ಅಸ್ಪೃಶ್ಯೋದ್ಧಾರ, ಅವರು ಜಾತಿಗಿಂತ ನೀತಿಗೆ ಹೆಚ್ಚಿನ ಯೋಗ್ಯತೆ ಕೊಟ್ಟ ಸಂಗತಿ ಇವುಗಳು ತಿಳಿದುಬರುತ್ತವೆ. ಈ ಘಟನೆಯನ್ನು ಹಿಂದಿನ ಹಾಗೂ ಇಂದಿನ ಮಹಾತ್ಮರ ಜೀವನದೊಡನೆ ಹೋಲಿಸಿ ನೋಡಬಹುದು. ಹದಿಮೂರನೆಯ ಸ್ಥಲದಲ್ಲಿ ಲೆಂಕಣ್ಣನು ಬಸವನ ಪತ್ನಿಯ ಓಲೆಯನ್ನು ಅಪಹರಿಸಲು ಬಂದ ಸಂಗತಿಯು ನಿರೂಪಿಸಲ್ಪಟ್ಟಿದೆ. ಆಗ ಬಸವನು ತನ್ನ ಪತ್ನಿಗೆ,

> .......ಎಲೆಲೆ ಸಂಗನ ಕರಂ ನೊಂದುದೇ
> ಬೆಸುಸುವಲ್ಲಿಂ ಮುನ್ನವೆ ಕೊಡದೆ ನಿಲ್ವುದೇ,

ಎಂದು ಹೇಳುತ್ತಾನೆ. ಪತ್ನಿಯ ಮೈಮೇಲಿನ ಆಭರಣಗಳನ್ನು ಅಪಹರಿಸಲು ಬಂದವನ ಕರಗಳು ನೊಯ್ಯಬಹುದು, ಆಭರಣಗಳನ್ನು ಬೇಗ ಬಿಚ್ಚಿ ಕೊಡಬೇಕು, ಎಂದು ಪತ್ನಿಗೆ ಹೇಳುವಲ್ಲಿ ಸರ್ವಾರ್ಪಣಭಾವದ 'ಅಹಿಂಸಾ ತತ್ತ್ವ'ದ ಕಲ್ಪನೆ ಇದೆ. ಇಂತಹ 'ಅಹಿಂಸೆ' ಮಹಾತ್ಮರಿಗೆ ಮಾತ್ರ ಸಾಧ್ಯ.

ಕೊನೆಯದಾಗಿ ಈ ರಗಳೆಯಲ್ಲಿ ನನ್ನ ದೃಷ್ಟಿಯಿಂದ ಒಂದು ಒಳ್ಳೆಯ ಸ್ವಾರಸ್ಯಕರವಾದ ಹಾಗೂ ಅಪೂರ್ವವಾದ ಸಂಗತಿಯೊಂದಿದೆ. ಹದಿಮೂರನೆಯ ಸ್ಥಲದಲ್ಲಿ ಬಸವನ ಸರ್ವಾರ್ಪಣಭಾವಕ್ಕೆ ಮೆಚ್ಚಿ ಆತನನ್ನು ಕೈಲಾಸಕ್ಕೆ ಕರೆದೊಯ್ಯಲು ದೇವನು ಬಂದು,[1]

> ಸಂಗಂ ಜಂಗಮಾಕಾರದೊಳ್ ನಿಂದು
> ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ
> ಪೊಡವಿಯೊಳಗಿರಲು ಸಾಲ್ವುದು ಬಾ ಮಗನೆ ನಿನಗೆ

ಎಂದು ಕರೆಯುತ್ತಿದ್ದರೆ, ಬಸವನು,

> ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ
> ಶರಣಸಂಗದ ಸುಖಂ ಕೈಲಾಸದೊಳಗುಂಟೆ
> ಇಲ್ಲಿಯ ಸುಖಂ ಕೈಲಾಸದೊಳಗುಂಟೆ,

ಎಂದು ಕೇಳುತ್ತಾನೆ. ಇದು ಯಾವುದೇ ಸಾಹಿತ್ಯದಲ್ಲಿಯಾಗಲಿ, ಮಹಾತ್ಮನ ಜೀವನದಲ್ಲಿಯಾಗಲಿ ಅತ್ಯಪೂರ್ವವೆಂದು ಹೇಳಬೇಕಾಗುತ್ತದೆ. 'ಸ್ವರ್ಗಲೋಕದಲ್ಲಿ ಭೂಲೋಕದ ಸುಖವು ಉಂಟೇ' ಎಂದು ದೇವನಿಗೆ 'ಸವಾಲು' ಹಾಕುವ ರೀತಿ

---

೧. ಬಸವರಾಜದೇವನ ರಗಳೆ ಪುಟ ೯೦.

ಯನ್ನು ಲಕ್ಷಿಸಬೇಕು. ವೈಯುಕ್ತಿಕ ಆತ್ಮೋನ್ನತಿಯನ್ನು ಮಾಡಿಕೊಂಡ ಮಹಾತ್ಮ ರಿದ್ದಾರೆ. ಸಿರಿಯಾಳನಂತಹರು ಕಂಚಿಪಟ್ಟಣದ ಎಲ್ಲರನ್ನೂ ಕೈಲಾಸಕ್ಕೆ ಕರೆದು ಕೊಂಡು ಹೋದರೆಂಬ ಸಂಗತಿಯನ್ನು ಓದಿದ್ದೇವೆ. ದೇವನ ರಾಜ್ಯವನ್ನು ಭೂಲೋಕದಲ್ಲಿ ತರಲು ಯತ್ನಿಸಿದ ಮಹಾತ್ಮಾ ಯೇಸೂ ಕ್ರಿಸ್ತನ ಕಥೆಯನ್ನು ಕೇಳಿದ್ದೆವು. ಆದರೆ " ಭೂಲೋಕದ ಸುಖವು ಸ್ವರ್ಗಲೋಕಕ್ಕಿಂತಲೂ ಮಿಗಿಲು, ಆದ್ದರಿಂದ ಇಲ್ಲಿಯ ಸುಖವು ಅಲ್ಲಿ ದೊರೆಯುವಂತಿದ್ದರೆ ಮಾತ್ರ ಅಲ್ಲಿಗೆ ನಾನು ಬರುವೆ " ಎಂದು ದೇವನಿಗೆ ಹೇಳಿದ ಮಹಾತ್ಮಾ ಬಸವೇಶ್ವರನೂ ಧನ್ಯನು; ಅವನಿಂದ ಈ ಮಾತನ್ನು ಹೇಳಿಸಿದ ಕವಿಯೂ ಧನ್ಯನು.

# ಚಿಕದೇವರಾಯ ವಂಶಾವಳಿಯಲ್ಲಿ ಚರಿತ್ರಾಂಶಗಳು

ತಿರುಮಲಾರ್ಯ (೧೭ನೆಯ ಶತಮಾನ) ನ "ಚಿಕದೇವರಾಯ ವಂಶಾವಳಿ" ಎಂಬ ಗ್ರಂಥದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು ಮೂರು:— ೧. ಚರಿತ್ರಾಂಶಗಳು, ೨. ವೈಷ್ಣವ ಮತತತ್ತ್ವ, ೩. ಕಾವ್ಯ-ಶೈಲಿ. ಇವುಗಳಲ್ಲಿ ಚರಿತ್ರಾಂಶಗಳನ್ನು ಕುರಿತು ಕೆಲವೊಂದು ವಿವೇಚನೆಯನ್ನು ಕೆಳಗೆ ಕೊಟ್ಟಿದೆ.

ತಿರುಮಲಾರ್ಯನ ಗ್ರಂಥವು 'ಚಿಕದೇವರಾಯ ವಂಶಾವಳಿ ಎಂಬ ಗದ್ಯ ಕಾವ್ಯಂ' ಎಂಬುದಾಗಿ ಕರೆಯಲ್ಪಟ್ಟಿದೆ. ಇದು ಸಂಪೂರ್ಣವಾಗಿ ಗದ್ಯದಲ್ಲಿದ್ದರೂ ಕಾವ್ಯಮಯವಾಗಿದೆ. ಆದುದರಿಂದ 'ಗದ್ಯಕಾವ್ಯಂ' ಎಂಬ ಹೆಸರು ಉಚಿತವಾಗಿಯೇ ಇದೆ. ಆದರೆ ಚಿಕದೇವರಾಯ ವಂಶಾವಳಿ ಎಂಬ ಹೆಸರಿರುವುದರಿಂದ ವಂಶಾವಳಿಗೂ ಕಾವ್ಯಕ್ಕೂ ತೊಡಕು ಹಾಕಬಹುದೇ ಎಂಬ ಸಮರ್ಪಕ ಸಂದೇಹವು ನಮ್ಮಲ್ಲೆದು ರಿಸುತ್ತಿದೆ. ಇದಲ್ಲದೆ ಹೆಸರಿನಲ್ಲಿ ಸೂಚಿತವಾಗದಿದ್ದರೂ ಕೂಡ, ಗ್ರಂಥದ ಕೆಲವು ಭಾಗವನ್ನು ವ್ಯಾಪಿಸಿದ ಮತತತ್ತ್ವವು ಈ ತೊಡಕನ್ನು ಇನ್ನೂ ಹೆಚ್ಚಿಸುತ್ತಿದೆ. ಅಂತು, ಈ ಗ್ರಂಥದಲ್ಲಿ ಇತಿಹಾಸ, ಮತತತ್ತ್ವ, ಕಾವ್ಯ ಇವುಗಳು ಮುಪ್ಪುರಿ ಗೊಂಡಿವೆ. ಸಕೃದ್ದರ್ಶನಕ್ಕೆ ಇದೋಂದು ಐತಿಹಾಸಿಕ ಗ್ರಂಥವೆಂದೆನಿಸಿದರೂ ಕೂಡ ಇದರಲ್ಲಿ ಐತಿಹಾಸಿಕ ವಿಭಾಗಕ್ಕೆ ಹೆಚ್ಚಿನ ಮಹತ್ವವಿಲ್ಲವೆಂದು ಗ್ರಂಥಾವಲೋಕನ ದಿಂದ ತಿಳಿದುಬರುತ್ತದೆ. ಇನ್ನುಳಿದ ಕರ್ನಾಟಕದ ಇತಿಹಾಸದಂತೆ ಮೈಸೂರಿನ ಇತಿಹಾಸವಾದರೂ ಸಂಪೂರ್ಣವಾಗಿ, ಸಿದ್ಧಾಂತವಾಗಿ ಬರೆಯಲ್ಪಟ್ಟಿಲ್ಲವಾದರೂ ಚಿಕ ದೇವರಾಯ ವಂಶಾವಳಿಯಲ್ಲಿಯ ಇತಿಹಾಸವನ್ನು ಅವಲೋಕಿಸುವುದು ಉಪಯುಕ್ತ ವೆಂದು ತೋರಬಹುದು.

ಗ್ರಂಥದ ಹೆಸರೇ ಸೂಚಿಸುವಂತೆ ಮೈಸೂರಿನ ಅರಸರ, ತಿರುಮಲಾರ್ಯನ ಪೋಷಕನಾದ ಚಿಕದೇವರಾಯನ 'ವಂಶಾವಳಿ'ಯು ಇಲ್ಲಿ ವರ್ಣಿಸಲ್ಪಟ್ಟಿದೆ. ಮೈಸೂರಿನ ನಿಜವಾದ ನಿರ್ಮಾಣಕರ್ತನೆಂದು ಕರೆಯಿಸಿಕೊಳ್ಳಲ್ಪಡುವ ರಾಜವಡೆಯ (೧೫೭೮–೧೬೧೭) ನಿಂದ ಆರಂಭವಾಗಿ ೧೬೭೩ ರಿಂದ ೧೭೦೪ ರ ವರೆಗೆ ಆಳಿದ ಚಿಕದೇವರಾಯನ ವರೆಗಿನ ಅರಸರ 'ಇತಿಹಾಸ'ವು ಇಲ್ಲಿ ನಿರೂಪಿಸಲ್ಪಟ್ಟಿದೆ. ಕವಿಯು ಚಿಕದೇವನ ಕಾಲದಲ್ಲಿಯೇ ಇದ್ದವನಾದುದರಿಂದಲೂ ಗ್ರಂಥವು ನಮಗೆ ಸಂಪೂರ್ಣ ಉಪಲಬ್ಧವಿಲ್ಲದ್ದರಿಂದಲೂ ಚಿಕದೇವರಾಯನ ಚರಿತ್ರೆಯು ಹೆಚ್ಚಾಗಿ ಈ ಗ್ರಂಥದಲ್ಲಿ ಬಂದಿಲ್ಲ. ಆತನ ಪೂರ್ವಜರ ಬಗೆಗೆ ಮಾತ್ರ ಕೆಲವು ಸಂಗತಿಗಳು ತಿಳಿದು ಬರುತ್ತವೆ.

ಮೈಸೂರಿನ ಅರಸರ ಇತಿಹಾಸ ಸು. ೧೩೯೯ ರಿಂದ ಮೊದಲಾಗುತ್ತದೆ. ಆ ವರುಷ ಉತ್ತರದಿಂದ ಬಂದ ಯದುರಾಯನು ಕಾರುಗಹಳ್ಳಿಯ ಪಾಳೆಯಗಾರನಾದ ಮಾರನಾಯಕನನ್ನು ಕೊಂದು ಪದಿನಾಡಿನ ರಾಜಪುತ್ರಿಯ ವಿಪತ್ತನ್ನು ಪರಿಹರಿಸಿದನು. ಹಾಗೂ ಆಕೆಯನ್ನು ಮದುವೆಯಾಗಿ ರಾಜ್ಯವನ್ನು ಪಡೆದನು. ಈ ಯದುರಾಯನೆ ಮೈಸೂರ ಅರಸರ ವಂಶಕ್ಕೆ ಮೂಲಪುರುಷನು. ಆದರೂ ರಾಜವಡೆಯನು ಶ್ರೀರಂಗಪಟ್ಟಣವನ್ನು ತೆಗೆದುಕೊಳ್ಳುವ ವರೆಗೆ ಮೈಸೂರಿಗೆ ಒಂದು ಸ್ವತಂತ್ರ ಅಸ್ತಿತ್ವ ಕಂಡುಬರುವುದಿಲ್ಲ. ಅದುವರೆಗೆ ಮೈಸೂರು ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದಿತು. ವಿಜಯನಗರದ ಪತನದ ನಂತರ ಕೂಡ (೧೫೬೫) ವಿಜಯನಗರದ ಪ್ರತಿನಿಧಿಗೆ ಅಂಕಿತವಾಗಿತ್ತು. ಆದರೆ ಸು. ೧೬೧೦ ರಲ್ಲಿ ರಾಜವಡೆಯನು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡ ಮೇಲೆ ಮಾತ್ರ ನಿಜವಾದ ಮೈಸೂರಿನ ಇತಿಹಾಸ ಪ್ರಾರಂಭವಾಗುತ್ತದೆ. ಅಂತೆಯೆ ರಾಜವಡೆಯನಿಗೆ ಮೈಸೂರ ನಿರ್ಮಾಣಕರ್ತನೆಂಬ ಬಿರುದೂ ಸಾರ್ಥಕವಾಗಿದೆ. ಆದುದರಿಂದ ತಿರುಮಲಾರ್ಯನು ವಂಶಾವಳಿಯನ್ನು ರಾಜವಡೆಯ (ರಾಜನೃಪ) ನಿಂದ ಪ್ರಾರಂಭಿಸಿದುದು ಉಚಿತವಾಗಿದೆ.

ಈ ಗ್ರಂಥದ ಚಾರಿತ್ರಕ ಸತ್ಯವನ್ನು ಅಳೆಯುವುದಕ್ಕೆ ಮೊದಲು ಸಂಪಾದಕರಾದ ಕೀರ್ತಿಶೇಷ ರಾಮಾನುಜಯ್ಯಂಗಾರರ ಉಪೋದ್ಘಾತದಲ್ಲಿಯ ಉಕ್ತಿಗಳನ್ನು ನಿರೀಕ್ಷಿಸಬೇಕಾಗಿದೆ. ಅವರು "ಇದರಲ್ಲಿಯ ಕಾವ್ಯ ಪರಿಪಾಟಿಯ ವರ್ಣನೆಯ ಭಾಗಗಳನ್ನು ಬಿಟ್ಟರೆ ಉಳಿದ ಭಾಗಗಳೆಲ್ಲವೂ ನಿಜವಾದ ಚರಿತ್ರ ವೃತ್ತಾಂತಗಳೇ ಆಗಿವೆ. ಪ್ರಸಿದ್ಧವಾಗಿರುವ ಹಲವು ಮೈಸೂರು ದೊರೆಗಳ ಚರಿತ್ರಗಳಲ್ಲಿ ಹೇಳಿರುವ ಚರಿತ್ರಾಂಶಗಳಿಗೂ ಈ ಗ್ರಂಥದಲ್ಲಿ ಹೇಳಿರುವುವುಗಳಿಗೂ ವ್ಯತ್ಯಾಸಗಳಿವೆ............

...........ಈ ಗ್ರಂಥದಲ್ಲಿ ಹೇಳಿರುವುದೇ ನಂಬಿಕೆಗೆ ಅರ್ಹವಾದುದೆಂದೂ ಸಮಂಜಸ ವೆಂದೂ ಸ್ಥಿರಪಡಿಸಬಹುದು" ( ಚಿಕದೇವರಾಯ ವಂಶಾವಳಿ ತೃತೀಯ ಮುದ್ರಣ ೧೯೩೩ ಉಪೋದ್ಘಾತ. ಪು. ii ) ಎಂದು ಬರೆಯುತ್ತಾರೆ. ಈ ಮಾತನ್ನು ಪುಷ್ಟೀಕರಿಸು ವುದು ಸ್ವಲ್ಪ ಕಠಿಣವಾದ ಕೆಲಸ. ಏಕೆಂದರೆ ಮೈಸೂರ ಗೆಜಿಟೀಯರ, ಶ್ಯಾಮರಾಯರ ಇತಿಹಾಸ, ಕನ್ನಡ ಕೈಪಿಡಿಯಲ್ಲಿಯ ಇತಿಹಾಸಭಾಗ ಇವುಗಳಿಗೆ ಭಿನ್ನವಾದ ಕೆಲವು ಸಂಗತಿಗಳು ಚಿಕದೇವರಾಯ ವಂಶಾವಳಿಯಲ್ಲಿ ಬಂದಿರುವಾಗ ಇಲ್ಲಿಯ ಅಭಿಪ್ರಾ ಯವೇ ಸತ್ಯವಾದುದು ಎಂದು ನಿರ್ಧರಿಸುವುದು ಕಠಿಣವಾಗುತ್ತದೆ. ತಿರುಮಲಾರ್ಯ ನಲ್ಲಿ ಶುದ್ಧ ಐತಿಹಾಸಿಕ ದೃಷ್ಟಿ ಇದ್ದಿಲ್ಲವೆಂದು ನಮಗೆ ಗ್ರಂಥದಿಂದ ತಿಳಿದುಬರುತ್ತದೆ. ಏಕೆಂದರೆ ಇಡೀ ಗ್ರಂಥವು ಉಪಮೆ, ಉತ್ಪ್ರೇಕ್ಷೆ, ಅತ್ಯುಕ್ತಿ, ಪೌರಾಣಿಕ ಸಂದರ್ಭ ಗಳಿಂದ ಕೂಡಿದೆ. ಅಲ್ಲದೆ ಸ್ವಕೀಯರ ಹೊಗಳಿಕೆ, ಪರಕೀಯರ ತಿರಸ್ಕಾರ ಇವು ಗಳಲ್ಲಿ ಅತಿರೇಕವು ಕಂಡುಬರುತ್ತದೆ. ಶ್ರೀರಂಗಪಟ್ಟಣದ ತಿರುಮಲರಾಯನ ಕಡೆಯ ವೃತ್ತಾಂತವನ್ನು ರಾಜನೃಪನ ಬೇಹಿಗನು ವರ್ಣಿಸುವ ರೀತಿಯನ್ನು ನೋಡಬೇಕು. ಆ ತೆಲುಗ (?) ಅರಸನ ಅಡಿಗೆಯ ಮನೆಯ ಬೀಭತ್ಸವರ್ಣನೆಯು ಅಸಹ್ಯವೆಂದು ತೋರದೆ ಇರಲಾರದು. (ಚಿ. ವ. ಪು. ೫-೮). ಈ ಭಾಗವೆಲ್ಲ ಪಟಿಗಂಡ, ಬಿಸಿನೆತ್ತರು, ಬಾಡು, ಕೋಟು, ತಗರು ಇವುಗಳಿಂದ ತುಂಬಿದೆ. ಅವರು ಇಲಿಗಳನ್ನೂ ಊರ್ವಂದಿ ಗಳನ್ನೂ ತಿನ್ನುತ್ತಿದ್ದರೆಂದು ಹೇಳಿದೆ. ಅವರ ಅಂಗಳವು ಪಸಿದೊವಲು, ಪಟಿಯೆಲವು, ಗಿಳಿಯ ತುಪ್ಪುಳ, ಹಂದಿಯ ಮೆಯ್ಮನಿರ್ಗಳ್ ಇತ್ಯಾದಿಗಳ ರಂಗವಲ್ಲಿಗಳಿಂದ, ಕೆಂಗಂಡದ ಚಿಗುರ್ದೋರಣದಿಂದ, ಜೋಲ್ವೆಳಮೀನ್ಗಳ ಸರದ ಮುತ್ತಿನ ಲಂಬಣ ಗಳಿಂದ........ ಅಲಂಕಾರ (?) ಪಡೆದಿತ್ತೆಂದು ವರ್ಣಿಸಲ್ಪಟ್ಟಿದೆ. ಪರಕೀಯರ ಈ ವರ್ಣನೆಯನ್ನು ಪುಟ ೧ಳರಲ್ಲಿ ಬರುವ ಸ್ವಕೀಯ ಅರಸನ ಅತಿಮಾನುಷ ಶಕ್ತಿಯ ವರ್ಣನೆಯೊಡನೆ ಹೋಲಿಸಿ ನೋಡಬೇಕು. ಈ ಗ್ರಂಥದಲ್ಲಿಯ ವರ್ಣನೆ ಹಾಗೂ ಅಪ್ರತಿಮ ವೀರ ಚರಿತೆಯ ಲಕ್ಷ್ಯಗಳಲ್ಲಿ ಬರುವ ವರ್ಣನೆಗಳಿಂದ ಈ ಕವಿಗೆ ಪರಕೀಯರ ವಿಷಯವಾಗಿ ಸಹನಶೀಲತೆ ಇದ್ದಿಲ್ಲವೆಂದು ಕಂಡುಬರುತ್ತದೆ. ಇನ್ನು ಈ ಕಾವ್ಯದಲ್ಲಿ ಬರುವ-ಹೇಗೋ ಎಳೆದು ತಂದ-ಲಂಬಾಯಮಾನವಾದ ವರ್ಣನೆಗಳಲ್ಲಿ ಔಚಿತ್ಯದ ಅಭಾವವು ಒಡೆದು ತೋರುತ್ತದೆ. ಗ್ರಂಥಾವಲೋಕನ ದಿಂದ ಈ ಕವಿಯು ಐತಿಹಾಸಿಕ ಸತ್ಯಕ್ಕೆ ಸಾಕಷ್ಟು ಲಕ್ಷಗೊಟ್ಟಿಲ್ಲವೆಂದು ತಿಳಿದು ಬರುತ್ತದೆ. ವಿಜಯನಗರ ಸಾಮ್ರಾಜ್ಯದ ಪತನದ ಸಂಗತಿಯು ಸುಪ್ರಸಿದ್ಧವಾದ ಐತಿಹಾಸಿಕ ಘಟನೆಯಾಗಿದೆ. ರಾಮರಾಜನು ರಕ್ಕಸ ತಂಗಡಗಿ ( ತಾಳಿಕೋಟೆ) ಯಲ್ಲಿ ಹತನಾದುದು ಸರ್ವಶ್ರುತವಷ್ಟೇ. ಆದರೆ ತಿರುಮಲಾರ್ಯನು ಈ ಘಟನೆಗೆ

ವ್ಯತಿರಿಕ್ತವಾದ ಸಂಗತಿಯನ್ನು ನಿರೂಪಿಸುತ್ತಾನೆ. "ಆಂಧ್ರಕುಲದ ರಾಮರಾಜಂ ನಿಜರಾಜಂಗೆ ದ್ರವಿಡಾನ್ಧ್ರ ಕರ್ಣಾಟ ಸಾಮ್ರಾಜ್ಯಮಂ ಸಾರ್ಜಿ ಪತಿಕಾರ್ಯ ದೊಳರ್ಪಿತಪ್ರಾಣನೆನಿಸಿ ಒರ್ಮೆಯುತ್ತರ ದಿಗ್ವಿಜಯದೊಳುದ್ವೃತ್ತಯವನ ಸೇನಾ ಚಕ್ರವನೊಕ್ಕಲಿಕ್ಕಿ ಯಶಶ್ಶೇಷನಪ್ಪಿನಂ" ಎಂದು ವಂಶಾವಳಿಯಲ್ಲಿ ಹೇಳಿದೆ (ಪು. ೧). ಇದರಿಂದ ಈಗ ಪ್ರಚಾರದಲ್ಲಿರುವ ರಾಮರಾಜನ ಐತಿಹ್ಯಕ್ಕೂ ಇದಕ್ಕೂ ಇರುವ ಮಹದಂತರವು ಕಂಡುಬರುವುದು. ಅಂತೆಯೆ ನಾವು ತಿರುಮಲಾ ರ್ಯನ ಗ್ರಂಥವನ್ನು ಶುದ್ಧ ಐತಿಹಾಸಿಕ ದೃಷ್ಟಿಯಿಂದ ಅವಲೋಕಿಸುವುದು ಸರಿ ಯಾಗುವುದಿಲ್ಲ. ಈ ಗ್ರಂಥದ ರಮಣೀಯತೆಯು ಕವಿಯ ಸುಂದರವಾದ ವರ್ಣನೆ ಗಳು, ನಿರರ್ಗಳವಾದ ಅಪಾರವಾದ ಶಬ್ದಪ್ರವಾಹ, ಬಹುಶ್ರುತತ್ವ, ಅಲಂಕಾರ ಹಾಗೂ ಉಕ್ತಿವೈಚಿತ್ರ್ಯ ಇವುಗಳಲ್ಲಿದೆಯೆಂದು ಹೇಳಬೇಕಾಗುತ್ತದೆ. ಈ ಮಾತನ್ನು ಒಪ್ಪಿಯೇ ನಾವು ಇದರಲ್ಲಿಯ ಚರಿತ್ರಾಂಶಗಳನ್ನು ಅವಲೋಕಿಸಬೇಕಾ ಗುತ್ತದೆ.

ಈ ಗ್ರಂಥದಲ್ಲಿ ಹೇಳಿದ ವಂಶಾವಳಿಯು ಹೀಗಿದೆ:—

ರಾಜನೃಪ– ಚಾಮರಾಜ– ಇಮ್ಮಡಿರಾಜರಸ–ಕಂಠೀರವನರಸರಾಜ– ದೊಡದೇವರಾಜ– ದೇವರಾಜ– ಚಿಕದೇವರಾಯ.

ಈ ವಂಶಾವಳಿಯು ಮೈಸೂರ ಅರಮನೆಯ ವಂಶಾವಳಿಗೆ ಬಹುಮಟ್ಟಿಗೆ ಸರಿ ಹೋಲುತ್ತಿದೆ. ಆದರೆ ಒಂದು ವ್ಯತ್ಯಾಸ ಮಾತ್ರ ಇದೆ. ದೊಡದೇವರಾಜನ ನಂತರ ಚಿಕದೇವರಾಯನೇ ಪಟ್ಟವೇರಿದಂತೆ ಮೈಸೂರ ಗೆಜಿಟೀಯರ, ಬಿ. ಎಲ್. ರಾಯಿಸ್, ಹಾಗು ಎಂ. ಶ್ಯಾಮರಾಯರ ಇತಿಹಾಸಗಳಲ್ಲಿ ಹೇಳಿದೆ.*

ತಿರುಮಲಾರ್ಯನು 'ಚಾಮರಾಜನ ನಾಲ್ವರ್ ಕುವರರೊಳಂ ಪಿರಿಯಂ ರಾಜ ನೃಪಂ' ಎಂದು ಹೇಳುತ್ತಾನೆ. ಈ 'ಚಾಮರಾಜ'ನು ಬೋಳ ಚಾಮರಾಜನೇ ಆಗಿರ ಬೇಕೆಂದು ಉಳಿದ ಇತಿಹಾಸಗಳಿಂದ ತಿಳಿದು ಬರುತ್ತದೆ. ಆದರೆ ಮೈಸೂರ ಗೆಜಿಟೀ ಯರದಲ್ಲಿ ಕೊಟ್ಟಿರುವ ವಂಶಾವಳಿಯಲ್ಲಿ ಬೋಳಚಾಮರಾಜನ ನಂತರ ಬೆಟ್ಟದ ಚಾಮರಾಜನೂ ನಂತರ ರಾಜವಡೆಯನೂ ಪಟ್ಟಕ್ಕೆ ಬಂದಂತೆ ಹೇಳಿದೆ. ಈ ರಾಜ ನೃಪನ ಆಳಿಕೆಯಲ್ಲಿಯ ಮಹತ್ವದ ಘಟನೆಯೆಂದರೆ, ಶ್ರೀರಂಗಪಟ್ಟಣವು ರಾಜನೃಪನ

*(1) Mysore Gazetteer Vol. VII Part IV P. 2434
(2) Mysore and Coorg from Inscriptions by. B.L. Rice, P.126
(3) ಎಂ. ಶ್ಯಾಮರಾಯರ ಮೈಸೂರ ಸಂಸ್ಥಾನದ ಚರಿತ್ರಸಾರ. ಪು. ೩೧

ಕೈವಶವಾದುದು. ಈ ಘಟನೆಯನ್ನೇ ತಿರುಮಲಾರ್ಯನು ವಿಶದವಾಗಿ ವರ್ಣಿಸಿದ್ದಾನೆ. ಅವನ್ನು ಹೀಗೆ ಸಂಗ್ರಹಿಸಬಹುದು. ತಿರುಮಲನೆಂಬುವನು? ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಪ್ರತಿನಿಧಿಯಾಗಿದ್ದನು. ಆತನು ಅಯೋಗ್ಯನಾಗಿದ್ದನು. ರಾಜನೃಪನನ್ನು ಶ್ರೀರಂಗಪಟ್ಟಣಕ್ಕೆ ಕರೆಯಿಸಿ ಮೋಸದಿಂದ ಸೆರೆ ಹಿಡಿಯಬೇಕೆಂದು ಒಳಸಾಡ ಪ್ರಭುಗಳು ಆತನನ್ನು ಉತ್ತೇಜಿಸಲು, ತಿರುಮಲನು ಸ್ನೇಹ ಬೆಳಿಸುವ ನೆವದಿಂದ ರಾಜನೃಪನನ್ನು ಶ್ರೀರಂಗಪಟ್ಟಣಕ್ಕೆ ಕರೆಯಿಸಿದನು. ಮುಂದೆ ಆತನನ್ನು ಸೆರೆ ಹಿಡಿಯಲು ಯತ್ನಿಸುವಾಗ ರಾಜನೃಪನಿಗೆ ಈ ಒಳಸಂಚು ಗೊತ್ತಾಗಿ ಆತನು ಪಾರಾಗಿ ಹೋಗುತ್ತಾನೆ. ತಿರುಮಲನು ಕೆಸರೆಯ ಕಾಳಗದಲ್ಲಿ ಸೋಲುತ್ತಾನೆ. ನಂತರ ಆತನು ಹೆದರಿಕೆಯಿಂದ ಶ್ರೀರಂಗಪಟ್ಟಣವನ್ನು ಬಿಟ್ಟು ಮಾಲಂಗಿಯ ಮಡುವಿನಲ್ಲಿ ಪ್ರಾಣ ಬಿಟ್ಟನೆಂತಲೂ, ಹೀಗೆ ಅನಪೇಕ್ಷಿತವಾಗಿ ಅನ್ಯಾಯವೇನೂ ಇಲ್ಲದೆ ಶ್ರೀರಂಗಪಟ್ಟಣವು ರಾಜನೃಪನ ಕೈವಶವಾಯಿತೆಂತಲೂ ತಿರುಮಲಾರ್ಯನು ಹೇಳುತ್ತಾನೆ (ಚಿ. ವ. ಪು. ೮-೫೩). ರಾಜನೃಪನಿಗೆ ಶ್ರೀರಂಗಪಟ್ಟಣವು ವಶವಾದ ಸಂಗತಿಯು ಇತಿಹಾಸದಲ್ಲಿ ಅನೇಕ ಭಿನ್ನಾಭಿಪ್ರಾಯಗಳಿಗೆ ಎಡೆಗೊಟ್ಟಿದೆ. ತಿರುಮಲಾರ್ಯನು ಹೇಳುವಂತೆ ಅನಪೇಕ್ಷಿತವಾದ, ನ್ಯಾಯವಾದ ರೀತಿಯಲ್ಲಿಯೇ ಅದು ಕೈವಶವಾಯಿತೆಂದು ಇನ್ನುಳಿದ ಇತಿಹಾಸಗಳಿಂದ ತಿಳಿದು ಬರುವುದಿಲ್ಲ. ರಾ. ಬ. ಎಮ್. ಶ್ಯಾಮರಾಯರು "೧೬೧೦ನೆಯ ಇಸವಿಯಲ್ಲಿ ಶ್ರೀರಂಗಪಟ್ಟಣದಲ್ಲಿಯ ವಿಜಯನಗರದ ಅಧಿಕಾರಿ ಶ್ರೀರಂಗರಾಯನಿಗೆ .... ರೋಗವುಂಟಾಗಲು.... ತನ್ನ ದೇಶಕೋಶಗಳನ್ನು ತನ್ನ ಜ್ಞಾತಿಯಾದ ಉಮ್ಮತ್ತೂರ ಪಾಳೆಯಗಾರನಿಗೆ ಕೊಡಬೇಕೆಂದು ಮಾಡಿದ್ದನು. ಆದರೆ ರಾಜವಡೆಯರು ಪ್ರಬಲರಾದುದರಿಂದ ಕಡೆಗೆ ಎಲ್ಲವನ್ನೂ ಅವರಿಗೇ ಕೊಡಬೇಕಾಗಿ ಬಂದಿತು ಎಂದು ಬರೆಯುತ್ತಾರೆ[೧]. ಸಿ. ಹಯವದನರಾಯರು ಇದೇ ಮಾತನ್ನು ಪುಷ್ಟೀಕರಿಸುತ್ತಾರೆ[೨]. ಕರ್ನಾಟಕ ಕೈಪಿಡಿಯ ಇತಿಹಾಸದ ಭಾಗದಲ್ಲಿ ಮೈಸೂರ ರಾಜ್ಯವನ್ನು ಕಟ್ಟಲು ಕಂಕಣಬದ್ಧನಾದ ರಾಜವಡೆಯನು ಸಮಯ ಸಾಧಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡನೆಂದು ಹೇಳಿದೆ[೩]. ಹೀಗೆ ಭಿನ್ನವಾದ ಹೇಳಿಕೆಗಳಿರುವುದರಿಂದಲೇ ಸಿ. ಹಯವದನರಾಯರು "There is a halo of mystery surrounding this transaction" ಎಂದು ಅಭಿಪ್ರಾಯಪಡುತ್ತಾರೆ[೪]. ಅಂತು ಶ್ರೀರಂಗಪಟ್ಟಣವು ಅನಪೇಕ್ಷಿತವಾಗಿ ರಾಜನೃಪನಿಗೆ ದೊರೆ

(೧) ಮೈಸೂರು ಸಂಸ್ಥಾನದ ಚರಿತ್ರಸಾರ (೧೯೧೯) ಪು. ೧೮

(2) Mysore Gazetteer Vol. V. P. 808

(೩) ಕರ್ನಾಟಕ ಕೈಪಿಡಿ ಪು. ೧೫೮.

(4) Mysore Gazetteer P. 808.

ಯಿತೆಂಬ ಹೇಳಿಕೆಗೆ ಆಧಾರಗಳು ಕಂಡುಬರುವುದಿಲ್ಲ. ತನ್ನ ಅರಸರ ಸದ್ಗುಣಗಳನ್ನೇ ಹೇಳಲು ಹೊರಟ ತಿರುಮಲಾರ್ಯನು ಮಾತ್ರ ಹಾಗೆ ಹೇಳಿದ್ದಾನೆ. ಶ್ರೀರಂಗಪಟ್ಟಣವು ವಶವಾದ ಮೇಲೆ ರಾಜನೃಪನು ಅಲ್ಲಿಯ ರಾಣಿಯಾದ ರಂಗಮ್ಮನನ್ನು ಗೌರವದಿಂದ ಕಳಿಸಿಕೊಟ್ಟನೆಂದು ಇಲ್ಲಿದೆ. ಆದರೆ ಶ್ಯಾಮರಾಯರ ಇತಿಹಾಸದಲ್ಲಿ ಆಕೆಯು ಸಿಟ್ಟಿನಿಂದ ಶಾಪ ಕೊಟ್ಟು ಹೋದಳೆಂದು ಇದೆ.

ರಾಜನೃಪನ ಆಳಿಕೆಯ ಮತ್ತೊಂದು ಘಟನೆಯೆಂದರೆ ಪದಿನಾಡಿನ ನಂಜರಾಯನು ರಾಜನೃಪನೊಡನೆ ಸೆಣಸಿ ಸೋತುಹೋದುದು. ರಾಜನೃಪನ ನಂತರ ಚಾಮರಾಜನು ಪಟ್ಟಕ್ಕೆ ಬಂದನು. ಆತನ ಆಳಿಕೆಯಲ್ಲಿ ಜಗದೇವರಾಯನು ಸೋತು ಹೋದುದರ ಪ್ರಸ್ತಾಪವಿದೆ. ಚಾಮರಾಜನ ನಂತರ ಪಟ್ಟಕ್ಕೆ ಬಂದವನು ಇಮ್ಮಡಿ ರಾಜವಡೆಯನು. ಆತನು ಒಂದು ವರುಷ ಮಾತ್ರ ರಾಜ್ಯವಾಳಿದನು. ಆತನನ್ನು ದಳವಾಯಿ ವಿಕ್ರಮನು ವಿಷ ಹಾಕಿ ಕೊಂದನೆಂದು ಉಳಿದ ಇತಿಹಾಸಗಳು ಹೇಳುತ್ತಿದ್ದರೂ ತಿರುಮಲಾರ್ಯನು ಮಾತ್ರ ಈ ವಿಷಯವನ್ನು ಹೇಳಿಲ್ಲ. ವಿಕ್ರಮನ ಹಾವಳಿಯ ಪ್ರಸ್ತಾಪವನ್ನೇ ತಿರುಮಲಾರ್ಯನು ಎತ್ತಿಲ್ಲ.

ಇಮ್ಮಡಿ ರಾಜರಸನ ನಂತರ ಪಟ್ಟಕ್ಕೆ ಬಂದವನು ಕಂಠೀರವ ನರಸರಾಜನು (೧೬೩೮-೧೬೫೯). ಮೈಸೂರಿನ ಇತಿಹಾಸದಲ್ಲಿ ರಾಜವಡೆಯನ ನಂತರ ಹೆಚ್ಚು ಖ್ಯಾತಿಪಡೆದವನು ಈತನೇ ಸರಿ. ಈತನು ತ್ರಿಚನಾಪಳ್ಳಿಯ ಮಲ್ಲಯುದ್ಧದಲ್ಲಿ ಜಯ ಪಡೆದನೆಂದೂ[೫] ದಳವಾಯಿ ವಿಕ್ರಮನನ್ನು ಕೊಲ್ಲಿಸಿದನೆಂದೂ ಶ್ರೀರಂಗಪಟ್ಟಣದಲ್ಲಿ ಸ್ವತಂತ್ರ ಟಂಕಸಾಲೆಯನ್ನು ಕಟ್ಟಿಸಿದನೆಂದೂ[೬] ಉಳಿದ ಇತಿಹಾಸಕಾರರು ಹೇಳುವ ಮಾತುಗಳನ್ನು ತಿರುಮಲಾರ್ಯನು ಹೇಳಿಲ್ಲ. ಆದರೆ ರಣದುಲ್ಲಾಖಾನನ ಸೊಕ್ಕನ್ನು ಇಳಿಸಿದ್ದನ್ನೂ ಮಧುರೆಯ ತಿರುಮಲೆನಾಯಕನ ಕೆಳಲೆಯ ಮಲ್ಲರಾಜ, ಬಡಗಲದಲ್ಲಿಯ ಮಲ್ಲುಕ ಇವರನ್ನು ಸೋಲಿಸಿದ್ದನ್ನೂ ಹೇಳುತ್ತಾನೆ. ( ಚಿ. ವ. ಪು. ೫೨ ) ಹೀಗಿದ್ದರೂ ಕೂಡ ಕಂಠೀರವ ನರಸರಾಜನ ಚರಿತ್ರೆಯು ವಂಶಾವಳಿಯಲ್ಲಿ ಹೆಚ್ಚು ವಿಸ್ತೃತವಾಗಿ ಬಂದಿಲ್ಲ.

ಆಮೇಲೆ ಬರುವುದು ದೊಡದೇವರಾಜ ( ೧೬೫೯-೧೬೭೨ ) ನ ಚರಿತ್ರೆಯು. ಚಿಕದೇವರಾಯ ವಂಶಾವಳಿ ಗ್ರಂಥದ ೧೫೪ ಪುಟಗಳಲ್ಲಿ ಸುಮಾರು ನೂರು ಪುಟಗಳು ದೊಡದೇವರಾಯನ ಚರಿತ್ರೆಗಾಗಿ ಉಪಯೋಗಿಸಲ್ಪಟ್ಟಿವೆ. ಆದರೆ ಆ ನೂರು ಪುಟಗಳಲ್ಲಿ ಐತಿಹಾಸಿಕ ಸಂಗತಿಗಳು ತೀರ ಕಡಮೆಯೆಂದೇ ಹೇಳಬೇಕು. ತಿರುಮ

(5) Mysore Gazetteer P. 2439
(6) „ „ „ 2440

ಲಾರ್ಯನ ಉದ್ದೇಶವು ಕೇವಲ 'ವಂಶಾವಳಿ' ಯನ್ನು ಮಾತ್ರ ಹೇಳುವುದು ಇದ್ದಿಲ್ಲವೆಂದು ಈ ಭಾಗದಲ್ಲಿ ಸ್ಪಷ್ಟವಾಗಿ ಒಡೆದು ಕಾಣುತ್ತದೆ. ಚರಿತ್ರ, ಮತತತ್ತ್ವ ಕಾವ್ಯ ಇವುಗಳ ಮುಪ್ಪುರಿಯೇ ಚಿಕದೇವರಾಯ ವಂಶಾವಳಿ ಎಂದು ಹೇಳುವುದಕ್ಕೆ ಈ ಭಾಗವು ಬಲವಾದ ಪ್ರಮಾಣವಾಗಿದೆ. ತಿರುಮಲಾರ್ಯನ ವರ್ಣನಾ ವೈಖರಿಯನ್ನು, ಮತಶ್ರದ್ಧೆಯನ್ನು, ಬಹುಶ್ರುತತ್ವವನ್ನು ನಾವು ಮೆಚ್ಚಬಹುದು. ಆದರೆ ವಿಷಯಗಳ ಹೊಂದಿಕೆಯು ಮಾತ್ರ ಸುವ್ಯವಸ್ಥಿತವೆಂದು ನಮಗೆ ಅನಿಸುವದಿಲ್ಲ. ಚರಿತ್ರೆಯು ಎತ್ತಲೋ ಉಳಿದು, ವರ್ಣನೆಗಳು ಬೆಳೆದು ವರ್ಣ್ಯವಿಷಯಗಳ ಸೂತ್ರಬದ್ಧತೆಯು ತಪ್ಪಿ ಹೋಗಿದೆ. ಇಲ್ಲಿ ಬರುವ ಶ್ರೀಕೃಷ್ಣನ ಬಾಲಲೀಲೆಯು ಸುಂದರವಾಗಿದ್ದರೂ ವಂಶಾವಳಿಯಲ್ಲಿ ಅದಕ್ಕೆ ಸ್ಥಾನವಿರಬೇಕೇ ಎಂಬ ಸಂದೇಹ ಉಂಟಾಗುತ್ತದೆ. ಆಮೇಲೆ ಬರುವ ಅಳಹಿಯ ಸಿಂಗರಾರ್ಯರ ವರ್ಣನೆಯಲ್ಲಿಯಂತೂ ಔಚಿತ್ಯಜ್ಞಾನದ ಅಭಾವ ಒಡೆದು ಕಾಣುತ್ತಿದೆ. ಗ್ರಂಥಕರ್ತನು ತನ್ನ ತಂದೆಯನ್ನು ಮನದಣಿಯುವಂತೆ ಉತ್ಪ್ರೇಕ್ಷೆಗಳಿಂದ ಹೊಗಳಿಕೊಳ್ಳುತ್ತಾನೆ (ಪು. ೬೬-೬೮). ಈ ಭಾಗದಲ್ಲಿ ಗ್ರಂಥವು ತಿರುಮಲಾರ್ಯ ವಂಶಾವಳಿಯಾಗಿ ಪರಿಣಮಿಸುತ್ತದೆ (ಪು. ೬೮). ಮುಂದೆ ಬರುವ ಭಾಗವು (ಪು. ೭೧-೧೨೭) ಭಕ್ತರಿಗೂ ಮತತತ್ತ್ವ ಜಿಜ್ಞಾಸುಗಳಿಗೂ ರುಚಿಸುತ್ತಿವೆಯಾದರೂ ಇಲ್ಲಿ ವಿಷಯಾಂತರವಾಗಿದೆಯೆಂದು ಹೇಳಬೇಕಾಗುತ್ತದೆ. ವಿಶಿಷ್ಟಾದ್ವೈತ ಮತದ ತತ್ತ್ವ ನಿರೂಪಣೆ, ಗೀತೆಯ ಅರ್ಥ, ವೈಷ್ಣವ ತೀರ್ಥ ಕ್ಷೇತ್ರಗಳು, ಆಚಾರ್ಯರು ಇವರ ವರ್ಣನೆಗಳು ಹೃದ್ಯವಾಗಿಯೇ ನಿರೂಪಿಸಲ್ಪಟ್ಟಿವೆ. ಆದರೆ ದೊಡದೇವರಾಜನ ಚರಿತ್ರೆ ಮಾತ್ರ ಮುಂದುವರಿದಿಲ್ಲ. ಅವನ ರಾಣಿಯ ಪುತ್ರದೋಹಳದ ನೆವ ಮಾಡಿಕೊಂಡು ಕವಿಯು ಭೂಲೋಕದ ವೈಕುಂಠವಾದ ಮೇಲ್ಕೋಟೆಯ ಸಂದರ್ಶನವನ್ನು ವರ್ಣಿಸುತ್ತಾನೆ. ಶ್ರೀಮನ್ನಾರಾಯಣನು ದೊಡದೇವರಾಜನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ 'ಎಲೆಯರಸ, ನಿನ್ನ ಭಕ್ತಿಗೆ ಮೆಚ್ಚಿ ದಶರಥನಂತೆಯುಂ ವಸುದೇವನಂತೆಯುಂ ನಿನ್ನಂ ತಂದೆಗೆತ್ತು ನಿನ್ನೆರ್ದೆಯೊಳ್ ನೆಲಸಿದೆಂ. ನಿನಗೌರಸ ಪುತ್ರನಾಗಿ ಜನಿಸುವೆಂ'(ಪು. ೧೧೬) ಎಂದು ಹೇಳುತ್ತಾನೆ. ಈ ವರದ ಪ್ರಕಾರ ಶ್ರೀಮನ್ನಾರಾಯಣನು ದೊಡದೇವರಾಜನಿಗೆ ಮಗನಾಗಿ ಹುಟ್ಟುತ್ತಾನೆ. ಅವನೇ ಚಿಕದೇವರಾಯನು.

ಅಮೃತಾಂಬೆಯ ಪುತ್ರದೋಹಳ, ಅರಸನ ಪುತ್ರೋತ್ಸವ, ಅದೇ ಕಾಲಕ್ಕೆ ಅಳಹಿಯ ಸಿಂಗರಾರ್ಯನಿಗೂ ಪುತ್ರೋತ್ಸವವಾಗುವುದು- ಇವು ಬಾಣ ಕಾದಂಬರಿಯ ಭಾಗವನ್ನು ಅನುಸರಿಸಿವೆ. ಚಿಕದೇವರಾಯನ ಜನನ, ಆತನು ನಾನಾ

ರೀತಿಯ ವಿದ್ಯಾಭ್ಯಾಸ ಮಾಡಿದುದು, ಇವುಗಳನ್ನಲ್ಲದೆ ಕವಿಯು ದೊಡದೇವರಾಜನ ಕಾಲದ ಇತಿಹಾಸವನ್ನು ಏನನ್ನೂ ಹೇಳಿಲ್ಲ. ಈ ದೊಡದೇವರಾಜನ ಆಳಿಕೆಯಲ್ಲಿ ವಿಜಯನಗರದ ಪಕ್ಷವಹಿಸಿ ಶಿವಪ್ಪನಾಯಕನು ಶ್ರೀರಂಗಪಟ್ಟಣವನ್ನು ಮುತ್ತಿ ಸೋತುದೂ ಹಾಗು ಮಧುರೆಯ ನಾಯಕನು ಮೈಸೂರನ್ನು ಮುತ್ತಿದುದೂ ಮಹತ್ವದ ಐತಿಹಾಸಿಕ ಘಟನೆಗಳಾಗಿವೆ. ಈ ಕಾಲಕ್ಕೆ ಸಕ್ಕರೆಪಟ್ಟಣ, ಹಾಸನ, ಚಿಕ್ಕನಾಯಕನಹಳ್ಳಿ, ಈರೋಡು, ಧಾರಾಪುರ ಇವುಗಳು ಮೈಸೂರ ರಾಜ್ಯಕ್ಕೆ ಸೇರಿದವು. ಇವುಗಳ ಉಲ್ಲೇಖವು ಚಿಕದೇವರಾಯ ವಂಶಾವಳಿಯಲ್ಲಿ ಬಂದಿಲ್ಲ. ಆದರೆ ದೇವರಾಜನ ಆಳಿಕೆಯಲ್ಲಿ ಚಿಕದೇವರಾಯನು ಯುವರಾಜನಾಗಿರುವಾಗ, ಶಿವಪ್ಪನಾಯಕನ ಗಲಭೆಯ ವಿಚಾರವು ಹೇಳಲ್ಪಡುತ್ತಿರುವಾಗಲೇ ಗ್ರಂಥವು ಅಪೂರ್ಣವಾಗಿ ಮುಗಿದಿದೆ.

ವಿದ್ಯಾಪಕ್ಷಪಾತಿಯಾದ, ಮೈಸೂರಿನ ಇತಿಹಾಸದಲ್ಲಿ ಸುವಿಖ್ಯಾತನಾದ ಚಿಕದೇವರಾಯನ ವಿವಿಧ ವಿದ್ಯಾಭ್ಯಾಸಗಳ ವರ್ಣನೆಯನ್ನು, ಆತನ ತೀಕ್ಷ್ಣವಾದ ಬುದ್ಧಿಯನ್ನು ಕವಿಯು ಚೆನ್ನಾಗಿಯೇ ವರ್ಣಿಸಿದ್ದಾನೆ (ಪು. ೧೩೮-೧೪೮).

ದೊಡದೇವರಾಯನು ಕೆಲವು ವರುಷ ರಾಜ್ಯವಾಳಿದ ಮೇಲೆ ತನ್ನ ತಮ್ಮನಾದ ದೇವರಾಜನಿಗೆ ಅರಸೊತ್ತಿಗೆಯನ್ನು ಒಪ್ಪಿಸಿದನೆಂದು ತಿರುಮಲಾರ್ಯನು ಹೇಳುತ್ತಾನೆ (ಚಿ. ವ. ಪು. ೧೪೯-೧೫೦). ಆದರೆ ಈ ಮೊದಲೇ ಸೂಚಿಸಿದಂತೆ (ಪು. ೧೩೨) ದೊಡದೇವರಾಯನ ನಂತರ ಚಿಕದೇವರಾಯನೇ ಪಟ್ಟವೇರಿದಂತೆ ತಿಳಿದುಬರುತ್ತದೆ. ದೇವರಾಜನ ಪ್ರಸ್ತಾಪವು ಹಿಂದೆ ಸೂಚಿಸಿದ ಇತಿಹಾಸಗಳಲ್ಲಿ ಇಲ್ಲ.

ದೇವರಾಜನು ಪುರಾಣಪ್ರಸಿದ್ಧ ರಾಜನಂತೆ ಇದ್ದನೆಂದು ವರ್ಣಿಸಿ, 'ಇಂತಿರ್ಪ ಮಹಾರಾಯಂ ಧರೆಯಂ ಧರ್ಮದೊಳ್ ಪಾಲಿಪುದರ್ಕಂ, ಎಣ್ದೆಸೆಗಳಂ ಗೆಲ್ದುದರ್ಕಂ, ನೆರವಾಗಿ ಮುಂ ಪಿರಿಯಣ್ಣಂ ಪೇಳ್ದಂತೆ ಚಿಕದೇವರಾಯನಂ ಯೌವರಾಜ್ಯದೊಳಲಂಕರಿಸಿದಂ' (ಪು: ೧೫೩) ಎಂದು ತಿರುಮಲಾರ್ಯನು ಹೇಳಿ, ಆಮೇಲೆ ಯುವರಾಜ ಚಿಕದೇವರಾಯನ ವಿಜಯಯಾತ್ರೆಯನ್ನು ವರ್ಣಿಸುತ್ತಿರುವಾಗಲೇ ಗ್ರಂಥವು ಅಪೂರ್ಣವಾಗಿ ಕೊನೆಗಾಣುತ್ತದೆ. (ಅಷ್ಟೇ ಉಪಲಬ್ಧವಿದೆ.)

ಈ ತುಲನಾತ್ಮಕ ಚರಿತ್ರದ ಅವಲೋಕನದಿಂದ ತಿರುಮಲಾರ್ಯನ ದೃಷ್ಟಿಯು ಶುದ್ಧ ಇತಿಹಾಸದ ನಿರೂಪಣೆಯ ಕಡೆಗೆ ಇದ್ದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ತನ್ನ ಪೋಷಕ ಪ್ರಭುವಾದ ಚಿಕದೇವನ ವಂಶದವರು ದೇವಾಂಶ ಸಂಭೂತರಾದ ವಿಶಿಷ್ಟಗುಣಯುಕ್ತರಾದ ಅರಸರೆಂದೂ ಪರಮ ವೈಷ್ಣವಭಕ್ತರೆಂದೂ ಚಿತ್ರಿಸುವುದೇ

ಆವನ ಉದ್ದೇಶವಾಗಿದ್ದಿತು. ಈ ಉದ್ದೇಶದಿಂದಲೇ ಚರಿತ್ರೆಯಲ್ಲಿ ಕೆಲವು ಮಾರ್ಪಾಡುಗಳು ಬಂದಿವೆ. ಹೀಗೆ ಶುದ್ಧ ಐತಿಹಾಸಿಕ ದೃಷ್ಟಿಯನ್ನು ಬಿಟ್ಟು, ಕಾವ್ಯದೃಷ್ಟಿಯಿಂದ ತಿರುಮಲಾರ್ಯನು ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡದ್ದು ಒಂದು ದೃಷ್ಟಿಯಿಂದ ಈ ಗ್ರಂಥದ ಸೌಂದರ್ಯವನ್ನು ಹೆಚ್ಚಿಸಿದೆ. ಅದು ಹೇಗಂದರೆ ಭಾರತೀಯರ ಆದರ್ಶರಾಜರ ಕಲ್ಪನೆಯನ್ನು ಆದರಿಸಿ ತಿರುಮಲಾರ್ಯನು ತನ್ನ ಅರಸರನ್ನು ಬಣ್ಣಿಸಿದ್ದಾನೆ. ದೊಡದೇವರಾಜನ ಮೂಲಕ ಹೇಳಿಸಿದ ಉಪದೇಶವನ್ನು ನೋಡಬೇಕು:-"ಪಟ್ಟವಣೆಯೇಱುದುದರ್ಕೆ ಪುರುಳ್ಗೊಂ ಬುದುಂ ಭೋಗಿಪುದುಮೇ ಫಲಮೆಂದೆಣಿಸದೆ ದೇವರಂ ಪಾರ್ವರಂ ಪೊರೆದವರ ಸೇವೆಗೆಯ್ವುದುಂ ಮಕ್ಕಳ ವೋಲ್ ಮಱುಕದಿಂ ಪ್ರಜೆಯಂ ಕಾಪಿಡಿವುದಮುದಱಿಂಬರ್ಪ ಪುರುಳುಂ ಬಲ್ಪುಂ ಗೆಲ್ಲಮುಮುದಱಿಂ ಬಳೆದ ದೇಶಕೋಶಂಗಳುಮುದಱಿಂ ಬರ್ಪ ಕೀರ್ತಿ ಸುಕೃತಂಗಳುಮೇ ಫಲಮೆಂದೆಣಿಸುವುದು' (ಪು. ೧೫೧). ಈ ಆದರ್ಶವನ್ನು ಮುಂದಿಟ್ಟುಕೊಂಡೇ ಇಲ್ಲಿಯ ಅರಸರನ್ನು ವರ್ಣಿಸುವ ಪ್ರಯತ್ನವಿರುವುದರಿಂದ ಕಾವ್ಯಕ್ಕೆ ಆದರ್ಶರಾದ ಅರಸರು ಇದ್ದಿರುವುದು ಅನುಕೂಲವೇ ಆಗಿದೆ. ಹಾಗೂ ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗಿ "ಆನುಂ . . . . ಪಲವುಂ ದಿವ್ಯಾದ್ಭುತ ಚರಿತಂಗಳನೆಸಗಿ ದುಷ್ಟರನಿಬರಂ ಮೆಟ್ಟಿ ಶಿಷ್ಟರಂ ನಟ್ಟು ನೆಲೆಗೊಳಿಸಿ ಸಾತ್ವಿಕ ಧರ್ಮಂಗಳಂ ಸ್ಥಾಪಿಸುವೆಂ. ಕಲಿದೋಷಮುಂ ಕಳೆದು ಕೃತಯುಗದೊಳೆಂತಂತಂ ಸಕಲ ವರ್ಣಾಶ್ರಮ ಧರ್ಮಂಗಳಂ ಸಂಗತಿಗೊಳಿಸುವೆಂ" ಎಂದು ಹೇಳಿರುವುದರಿಂದ ಅದಕ್ಕೆ ಅನ್ವಯಿಸುವಂತೆಯೇ ಚರಿತ್ರೆ ಬಳೆದು ಬಂದಿದೆ. ಪು. ೧೨೭ರಲ್ಲಿ ಬರುವ ದೊಡದೇವರಾಜನ ಆಳಿಕೆಯ ವರ್ಣನೆ, ಪು. ೧೫೧ರಲ್ಲಿ ಬರುವ ದೇವರಾಜನ ವರ್ಣನೆ ಇಂತಹವುಗಳಲ್ಲಿ ಕಾವ್ಯವೇ ಹೆಚ್ಚಾಗಿದೆ. ಐತಿಹಾಸಿಕ ದೃಷ್ಟಿ ಕಡಮೆಯಾಗಿರುವುದರಿಂದಲೆ ಅನೇಕ ಸುಂದರವಾದ ಅಲಂಕಾರಗಳು, ವರ್ಣನೆಗಳು ಈ ವಂಶಾವಳಿಯಲ್ಲಿ ನುಸುಳಿಕೊಂಡಿವೆ. ಕಾವ್ಯ ಶಕ್ತಿಯನ್ನು ತೋರಿಸುವ ಚಪಲತೆಯ ಮೂಲಕ ಬರುವ, ಸುಸಂಬದ್ಧವಾಗದಿದ್ದರೂ ಸುದೀರ್ಘ ಹಾಗೂ ಸುಂದರವಾಗಿರುವ ವರ್ಣನೆಗಳು, ಹಾಗೂ ಭಗವದ್ಗೀತೆಯ ಮೇಲಿನ ವಿಶಿಷ್ಟಾದ್ವೈತ ಮತದ ಭಾಷ್ಯ, ವೈಷ್ಣವ ಕ್ಷೇತ್ರ-ತೀರ್ಥಗಳು, ಸಾಧುಗಳು ಈ ವರ್ಣನೆಗಳಿಗೆ 'ವಂಶಾವಳಿ'ಯಲ್ಲಿ ಬೇರೊಂದು ವಿಭಾಗವನ್ನೇ ಕಲ್ಪಿಸಬೇಕಾಗುತ್ತದೆ. ಕವಿಯು ತನ್ನ ತಂದೆಯನ್ನು ಅತಿಶಯವಾಗಿ ಸ್ತುತಿಸಿ ವರ್ಣಿಸಿರುವುದು, ವರ್ಣಿಸುವ ಚಪಲತೆಗಾಗಿ ಹೇಗೋ ವರ್ಣ್ಯ ವಿಷಯಗಳನ್ನು ಎಳೆದು ತರುವುದು ಮಾತ್ರ ಉಚಿತವೆಂದು ಅನಿಸುವದಿಲ್ಲ.

ಆದರೂ ಕೂಡ, ಬಹುಶ್ರುತಪಂಡಿತನ ಸಂಪೂರ್ಣ ಗದ್ಯ ಗ್ರಂಥ, ನಿರರ್ಗಳ ಶೈಲಿಯ ಅಪಾರ ಶಬ್ದಭಾಂಡಾರದ ಸುಂದರ ಕಾವ್ಯಪರಿಪಾಟಿಯಿಂದ ಕೂಡಿದ ಗದ್ಯ ಕಾವ್ಯ, ಕರ್ನಾಟಕದ ಚರಿತ್ರೆಯನ್ನು ನಿರೂಪಿಸಲು ಪ್ರಯತ್ನಿಸಿದ 'ವಂಶಾವಳಿ', ವಿಶಿಷ್ಟಾದ್ವೈತ ಮತದ ತತ್ತ್ವನಿರೂಪಣೆ, ಕ್ಷೇತ್ರಗಳ ವರ್ಣನೆಯನ್ನು ಒಳಗೊಂಡ ಧಾರ್ಮಿಕ ಗ್ರಂಥ ಈ ಎಲ್ಲ ದೃಷ್ಟಿಯಿಂದ 'ಚಿಕದೇವರಾಯ' ವಂಶಾವಳಿ'ಗೆ ಕನ್ನಡ ಸಾಹಿತ್ಯದಲ್ಲಿ ಒಂದು ಮಹತ್ವದ ಸ್ಥಾನ ದೊರೆಯುತ್ತಿದೆ. ಇದಲ್ಲದೆ ಗದ್ಯ ಗ್ರಂಥಗಳು ಬಹಳೇ ವಿರಳವಾಗಿರುವ ಪ್ರಾಚೀನ ಕನ್ನಡ ವಾಙ್ಮಯದಲ್ಲಿ ಇದೊಂದು ಉಪಯುಕ್ತ ಗ್ರಂಥವಾಗಿದೆ.

# ಕೋಡಿಯ ಮಠ

ಹನ್ನೆರಡನೆಯ ಶತಮಾನದ ಮಧ್ಯದಲ್ಲಿ, ಕರ್ನಾಟಕದಲ್ಲಿ ನಡೆದ ಮಹತ್ವದ ಧಾರ್ಮಿಕ ಕ್ರಾಂತಿಯು ಇತಿಹಾಸ ಸಂಶೋಧಕರಿಗೆ ಇನ್ನೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಯಾಕಂದರೆ ಆ ಕಾಲದ ಹಾಗೂ ತದನಂತರದ ಐತಿಹಾಸಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಘನತರವಾದ ಪರಿಣಾಮವನ್ನುಂಟುಮಾಡಿದ ಈ ಮಹಾಕ್ರಾಂತಿಗೆ ಕಾರಣವಾಗಿರುವ ಶಕ್ತಿವಿಶೇಷಗಳು ಯಾವುವೆಂಬುದು ತಿಳಿಯುವುದು ಸಾಧ್ಯವಿಲ್ಲದಾಗಿದೆ. ಇಂತಹ ಮಹಾಕ್ರಾಂತಿಗೆ ಮಹಾಶಕ್ತಿವಿಶೇಷಗಳೇ ಕಾರಣವಾಗಿರಬೇಕು. ಆದರೆ ಅವು ಒಳ್ಳೇ ಗೂಢವಾಗಿವೆ. ಈ ವಿಷಯವನ್ನು ಹೆಚ್ಚು ಅಭ್ಯಾಸ ಮಾಡುವವರಿಗೆ ಲಿಂಗವಂತ ಮಠಗಳು ಕೆಲಮಟ್ಟಿಗೆ ಸಹಾಯಕಾರಿಯಾಗುವುವು. ಮಠಗಳಲ್ಲಿ ಮೊದಲಿನಿಂದಲೂ ಕಾಗದ-ಪತ್ರಗಳನ್ನು ಇಡುವ ರೂಢಿಯಿದೆ. ಹಾಗೂ ಮಠಗಳಿಗೆ ಆಗಿನ ಕಾಲದ ರಾಜರು, ಅಧಿಕಾರಿಗಳು ಕಾಣಿಕೆ ಕೊಟ್ಟು ಶಿಲಾಲೇಖಗಳನ್ನು ಬರೆಯಿಸುವುದು ವಾಡಿಕೆಯಾಗಿತ್ತು. ಇದು ಇತಿಹಾಸದ ಅಭ್ಯಾಸಕ್ಕೆ ಅನುಕೂಲವಾದ ಸಾಧನವಾಗಿದೆ. ಆ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಷಯಗಳನ್ನು ನಾವು ಕಂಡುಕೊಳ್ಳಬಹುದು.

ಈ ಮಠಗಳ ವಿಷಯವನ್ನು ಅರಿತುಕೊಳ್ಳುವ ಕುತೂಹಲವುಳ್ಳವರಿಗೆ "ಕಾಳಾಮುಖ" ಶಬ್ದವು ಹೆಚ್ಚಾಗಿ ಕಂಡುಬರುತ್ತದೆ. ಈ ಕಾಳಾಮುಖರು ಆ ಕಾಲದ ಪ್ರಮುಖ ಸ್ಥಾನಾಚಾರ್ಯರಾಗಿದ್ದರೆಂಬುದು ಚರಿತ್ರೆಯಿಂದ ತಿಳಿಯುತ್ತದೆ. ಆ ಕಾಲಕ್ಕೆ ಇವರು ಒಳ್ಳೆಯ ವರ್ಚಸ್ಸುಳ್ಳವರಾಗಿದ್ದರೆಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಇತಿಹಾಸ ಸಂಶೋಧಕರಿಗೆ ಕಾಳಾಮುಖರ ವಿಷಯವನ್ನು ಅರಿಯುವುದು ಆವಶ್ಯಕವಾದ ಮಾತು. ಶೈವಮತದ ಹುಟ್ಟು, ಬೆಳವಣಿಗೆ, ತತ್ತ್ವಗಳು, ಪೂಜಾಪದ್ಧತಿ,

ಇವುಗಳನ್ನು ವಿಶದವಾಗಿ ಡಾ. ಭಾಂಡಾರಕರರು ಚರ್ಚಿಸಿರುತ್ತಾರೆ. ( Oriental series Vol. IV. Shaivism ) ಅಲ್ಲಿ ಕಾಳಾಮುಖರ ಪ್ರಸ್ತಾಪವೂ ಬಂದಿದೆ. ಆದರೆ ಕಾಳಾಮುಖರ ಹಾಗೂ ಕರ್ನಾಟಕದ ನಿಕಟ ಸಂಬಂಧದ ಕಲ್ಪನೆಯು ಬರಬೇಕಾದರೆ ಕರ್ನಾಟಕದ ಶಿಲಾಲೇಖಗಳನ್ನು ಪರಿಶೀಲಿಸಬೇಕು. ಕಾಳಾಮುಖರು ಯಾರು ಎಂಬ ಉತ್ಸುಕತೆಯು ಕನ್ನಡಿಗರಲ್ಲಿ ಉಂಟಾಗದೆ ಇಲ್ಲ. ಆದರೂ ಅವರ ವಿಷಯವಾಗಿ ನಮಗೆ ಇದು ವರೆಗೆ ತಿಳಿದ ಸಂಗತಿಗಳು ತೀರ ಸ್ವಲ್ಪ. ಕರ್ನಾಟಕದ ಇತಿಹಾಸ, ಲಿಂಗವಂತಮತ ಇವುಗಳಲ್ಲಿ ಆಸ್ಥೆಯುಳ್ಳವರು ಈ ಕಾಳಾಮುಖರ ವಿಷಯವನ್ನು ಹೆಚ್ಚಾಗಿ ಅಭ್ಯಾಸ ಮಾಡಬೇಕು.

ಕಾಳಾಮುಖರು ಒಳ್ಳೇ ನಿಷ್ಠಾವಂತರಾದ ಶೈವರು; ಕಡ್ಡಿನ ಶೈವೋಪಾಸಕರು. ಆದುದರಿಂದ ಲಿಂಗವಂತ ಧರ್ಮದ ಇತಿಹಾಸಕ್ಕೆ ಇವರ ನಿಕಟವಾದ ಸಂಬಂಧವಿದೆ. ಲಿಂಗವಂತರಲ್ಲದ ವೀರಶೈವರು ಆಗ ಇದ್ದರೆಂದು ಪಂಡಿತರು ಒಪ್ಪುತ್ತಾರೆ. ಇಷ್ಟಲ್ಲದೆ ಆಗ ಅಸ್ತಿತ್ವದಲ್ಲಿದ್ದ ಪ್ರಮುಖ ಮಠಗಳಲ್ಲೆಲ್ಲ ಕಾಳಾಮುಖರು ಸ್ಥಾನಾಚಾರ್ಯರಾಗಿದ್ದರು. ಈಗಿನ ಲಿಂಗವಂತ ಮಠಗಳಲ್ಲಿ ಕೂಡ ಕಾಳಾಮುಖರು ಆಗ ಅಧಿಕಾರಾರೂಢರಾಗಿದ್ದರೆಂದು ತಿಳಿಯುತ್ತದೆ. ಆದರೆ ಕಾಳಾಮುಖರ ಮಠಗಳು ಲಿಂಗವಂತರವುಗಳಾಗಿ ಹೇಗೆ ಮಾರ್ಪಟ್ಟವೆಂಬ ಪ್ರಶ್ನೆಯು ನಮ್ಮನ್ನೆದುರಿಸುತ್ತಿದೆ. ಇದಕ್ಕೆ ಸಮಾಧಾನಕರ ಉತ್ತರವು ನಮಗಿನ್ನೂ ದೊರೆತಿಲ್ಲ. ಆದುದರಿಂದ ಇತಿಹಾಸ ಸಂಶೋಧಕರು ಈ ಮಾರ್ಗದಿಂದ ಮುಂದೆ ಹೋಗಬೇಕಾಗಿದೆ. ಕಾಳಾಮುಖರದೇ ಆದ ಇನ್ನೊಂದು ಶಾಖೆಯ ವಿಷಯವಾಗಿಯೂ ಅವರ ಮುಖ್ಯ ಮಠದ ವಿಷಯವಾಗಿಯೂ ಈ ಬರೆಹದಲ್ಲಿ ಕೆಲವು ಮಾತುಗಳನ್ನು ಹೇಳಬೇಕೆಂದಿದ್ದೇನೆ.

ಮೈಸೂರು ಪ್ರಾಂತದ ಬಳ್ಳಿಗಾವಿ ಪಟ್ಟಣವು ಒಳ್ಳೇ ಇತಿಹಾಸ ಪ್ರಸಿದ್ಧವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಅದು ರಾಜಕೀಯ, ಧಾರ್ಮಿಕ ಕೇಂದ್ರವಾಗಿತ್ತು. ಇದು ಶಿಲಾಲೇಖಗಳಲ್ಲಿ ಬಳ್ಳಿಪುರ, ಬಳಿಪುರ, ಬಲಿಪುರ, ಬಳ್ಳಿಗ್ರಾಮ ಮುಂತಾದ ಹೆಸರುಗಳಿಂದ ಉಕ್ತವಾಗಿದೆ. ಇದು ಒಂದು ಉತ್ತಮ ಕ್ಷೇತ್ರವಾಗಿದ್ದುರಿಂದಲೂ ಸುಂದರ ರಾಜಧಾನಿಯಾಗಿದ್ದುದರಿಂದಲೂ ಒಳ್ಳೇ ಪ್ರಸಿದ್ಧವಾಗಿತ್ತು. ಮೈಸೂರು ಪ್ರಾಂತದ ಶಿಕಾರಿಪುರದ ೧೦೩, ೧೦೨, ೯೨, ೯೬, ೧೧೭ ಮುಂತಾದ ಶಾಸನಗಳಲ್ಲಿಯೂ ಸೊರಬದ ೨೭೭, ೧೮೫ನೆಯ ಶಾಸನಗಳಲ್ಲಿಯೂ ಬಳ್ಳಿಗಾವಿಯ ಉಲ್ಲೇಖವಿದೆ. ಕಲಚೂರ್ಯ, ಬಿಜ್ಜಳ ಮೊದಲಾದ ಅರಸರು ದಂಡಯಾತ್ರೆಯ ಕಾಲಕ್ಕೆ ಈ ಊರಿನಲ್ಲಿ ಬೀಡು ಬಿಡುತ್ತಿದ್ದರು ಹಾಗೂ ಅಲ್ಲಿಯ ಮಠಗಳನ್ನು ಕಂಡು ಅವುಗಳ ವಿಷಯವಾಗಿ ತಮ್ಮ ಆಸಕ್ತಿಯನ್ನೂ, ಗೌರವವನ್ನೂ ವ್ಯಕ್ತಪಡಿಸುತ್ತಿದ್ದರು.

ಶಿಕಾರಿಪುರದ ೧೦೨ನೆಯ ಶಾಸನದಲ್ಲಿ ಹೀಗಿದೆ:— ಕ್ರಿ. ಶ. ೧೧೬೨ನೆಯ ವರುಷದಲ್ಲಿ ಕಲಚೂರ್ಯ ಬಿಜ್ಜಳನು ದಂಡಯಾತ್ರೆಗೆ ಬಂದು ಬಲಿಪುರದಲ್ಲಿ ಬೀಡು ಬಿಟ್ಟಿದ್ದನು. ಆಗ ಕಸಪಯ್ಯನಾಯಕನು ಆತನಿಗೆ ಅಲ್ಲಿರುವ ಕೋಡಿಯ ಮಠದ ಘನತೆಯನ್ನು ವಿವರಿಸಿದನು. ಅಲ್ಲಿ ಒಂದು ಧರ್ಮಕಾರ್ಯವನ್ನು ಮಾಡುವಂತೆ ಬಿನ್ನವಿಸಿದನು. ಆ ಪ್ರಾರ್ಥನೆಯನ್ನು ಮನ್ನಿಸಿ ಬಿಜ್ಜಳನು ಅನೇಕ ಊರುಗಳನ್ನು ದಾನವಾಗಿ ಕೊಟ್ಟನು. ಸೊರಬದ ೨೭೭ ನೆಯ ಶಾಸನ ಹಾಗೂ ಶಿಕಾರಿಪುರದ ೧೦೮ ನೆಯ ಶಾಸನಗಳಲ್ಲಿ ಮಹದೇವ ದಂಡನಾಯಕನ ಪ್ರಸ್ತಾಪ ಬಂದಿದೆ. ಆತನು ಬನವಾಸೆ ಪ್ರಾಂತವನ್ನು ಆಳುತ್ತಿದ್ದನು. ಬಲಿಪುರವು ರಾಜಧಾನಿ. ಅಲ್ಲಿಯ ಕೋಡಿಯ ಮಠದ ಆಚಾರ್ಯನಾದ ವಾಮಶಕ್ತಿಯನ್ನು ಮಹಾದೇವನಾಯಕನು ಪೂಜಿಸುತ್ತಿದ್ದನು. ಈ ಬಲಿಪುರದ ನೆರೆಯಲ್ಲಿಯೇ ಬಿಜ್ಜಳನ ದಂಡನಾಯಕನಾದ ಕೇಶವನು (ಕೇಶಿರಾಜನು) ಈ ಸ್ಥಳದ ಮಹತ್ವವನ್ನರಿತು ಕೇಶವಪುರವನ್ನು ಕಟ್ಟಿಸಿದನೆಂದು ಶಿಕಾರಿಪುರದ ೧೨೩ ನೆಯ ಶಾಸನದಲ್ಲಿ ಉಕ್ತವಾಗಿದೆ. ಆದೇ ಶಾಸನದಲ್ಲಿ ಬಂದಿರುವ ವರ್ಣನೆಯನ್ನು ಹೀಗೆ ಸಂಗ್ರಹಿಸಬಹುದು:— ಬಲಿಪುರವು ಬನವಾಸೆ ಪ್ರಾಂತದ ರಾಜಧಾನಿಯಾಗಿತ್ತು. ಇಲ್ಲಿ ಕೇಶಿರಾಜನು ರಾಜ್ಯಭಾರ ಮಾಡುತ್ತಿದ್ದನು. ಪೂರ್ವದ ದಂಡನಾಯಕರು ಅಲ್ಲಿ ಸತ್ರ, ವಿಹಾರೋದ್ಯಾನ, ಗುಡಿ, ಕೆರೆ-ಕಾಲುವೆಗಳನ್ನು ನಿರ್ಮಿಸಿದ್ದರು. ಅದು ಜಗತ್ತಿನಲ್ಲಿ ಪ್ರಸಿದ್ಧವಾದ ಪಟ್ಟಣವಾಗಿತ್ತು. ಬಹುಕಾಲದಿಂದ ಪ್ರಗತಿಪರವಾಗಿತ್ತು. ಇದು ಪಾಂಡವರಿಂದ ಸ್ಥಾಪಿಸಲ್ಪಟ್ಟ ಸುಪ್ರಸಿದ್ಧ ಪಂಚಲಿಂಗಗಳ ಸ್ಥಾನವಾಗಿತ್ತು. ಈ ಊರು ಪ್ರಸಿದ್ಧ ನಾಗರಿಕರಿಂದಲೂ ಸೆಟ್ಟಿ-ಸಾಹುಕಾರರಿಂದಲೂ ತುಂಬಿತ್ತು. ಇಲ್ಲಿ ಪಂಚಮಠ, ಹಿರಿಯಮಠ, ಪಂಚಲಿಂಗಮಠ, ತ್ರಿಪುರಾಂತಕಮಠ, ಕೋಡಿಯ ಮಠಗಳಿದ್ದವು. ಆ ಮಠಗಳಿಗೆಲ್ಲ ನಿಷ್ಠಾವಂತರೂ ಪಂಡಿತರೂ ಆದ ಆಚಾರ್ಯರಿದ್ದರು. ಅವರು ರಾಜನಿಂದ ಗೌರವ ಹೊಂದುತ್ತಿದ್ದರು. ಅವರಲ್ಲಿ ಸರ್ವೇಶ್ವರ ಪಂಡಿತದೇವನು ಪಂಚಲಿಂಗಕ್ಕೆ, ಮೂಲಿಗ ಮಧುಕೇಶ್ವರ ಪಂಡಿತನು ಹಿರಿಯ ಮಠಕ್ಕೆ, ಜ್ಞಾನಶಕ್ತಿಪಂಡಿತದೇವನು ತ್ರಿಪುರಾಂತಕ ಮಠಕ್ಕೆ, ಹಾಗೂ ವಾಮ ಶಕ್ತಿ ದೇವನು ಕೋಡಿಯ ಮಠಕ್ಕೆ ಸ್ಥಾನಾಚಾರ್ಯರಾಗಿದ್ದರು.

ಸೊರಬದ ೨೭೭ ನೆಯ ಶಾಸನದಲ್ಲಿ " ಕಲಹಂಸಗತಿಯ ಬಳ್ಳಿಪುರದೊಳ್.... ............ಎನಿಪ ಬಳಿಪುರದೊಳು " ಎಂಬುದಾಗಿ ಬಳ್ಳಿಗಾವಿಯು ವರ್ಣಿಸಲ್ಪಟ್ಟಿದೆ. ಅದು ಬನವಾಸೆ ನಾಡಿಗೆ ಅಲಂಕಾರ ಪ್ರಾಯವಾಗಿತ್ತು. ಅದು ಐದು ಮಠಗಳಿಂದ ಶೋಭಿಸುತ್ತಿದ್ದಿತು. ಅಲ್ಲಿ ಸ್ವಧರ್ಮದ ಆಚರಣೆಗಳು ಸರಿಯಾಗಿ ನಡೆಯುತ್ತಿದ್ದವು. ಮೋಸ, ವಂಚನೆಗಳು ಅಲ್ಲಿ ಇರಲೇ ಇಲ್ಲ. ಅಲ್ಲಿ ಮೂರು ಔಷಧಾಲಯಗಳಿದ್ದವು.

ಧರ್ಮರಕ್ಷಣೆಯು ಚೆನ್ನಾಗಿ ನಡೆದಿತ್ತು. ಶಿಕಾರಿಪುರದ ೧೦೪ ನೆಯ ಶಾಸನವು "ಬಲಿಪುರ...........ಪಲವುಂ ಪುರ ಪಂಚಮಠ...........ಪಲವು ಬ್ರಹ್ಮಪುರಿಗಳ್" ಎಂಬದಾಗಿ ಬ್ರಹ್ಮಪುರಿ, ಪಂಚಮಠಗಳ ವಿಷಯವನ್ನು ಹೇಳುತ್ತದೆ. ಕೋಡಿಯ ಮಠವು ಅವುಗಳಲ್ಲಿ ಪ್ರಸಿದ್ಧವಾದದ್ದು.

ಸಾರಾಂಶ, ಬಲಿಪುರವು ಆ ಕಾಲಕ್ಕೆ ಸುಪ್ರಸಿದ್ಧ ಪಟ್ಟಣವಾಗಿತ್ತೆಂಬುದಕ್ಕೆ ಸಾಕಷ್ಟು ನಿದರ್ಶನಗಳು ಇವೆ. ಪ್ರಕೃತ ನಮಗೆ ಸಂಬಂಧವಿರುವ ಕೋಡಿಯ ಮಠದ ಸಲುವಾಗಿಯೂ ಎಷ್ಟೋ ಸಂಗತಿಗಳು ಶಿಲಾಲೇಖಗಳಿಂದ ತಿಳಿದುಬರುತ್ತವೆ.

ಬಳ್ಳಿಗಾವೆಯ ದಕ್ಷಿಣಭಾಗದಲ್ಲಿ ತಾವರಗೆರೆ ಎಂಬ ದೊಡ್ಡ ಕೆರೆಯಿದ್ದಿತು. ಆ ಕೆರೆಗೆ ಒಂದು ಕಡೆಗೆ ದೊಡ್ಡ ಕೋಡಿ [outlet] ಯುಂಟಾಗಿದ್ದಿತು. ಆ ಕೋಡಿಯ ನೆರೆಯಲ್ಲಿಯೇ ಈ ಮಠವಿದ್ದುದರಿಂದ ಅದಕ್ಕೆ ಕೋಡಿಯ ಮಠವೆಂಬ ಹೆಸರು ಬಂದಿ ತೆಂದು ತಿಳಿಯುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಇದು ಒಂದು ಪ್ರತಿಷ್ಠಿತ ಮಠವಾಗಿತ್ತು. ಆದರೆ ಇದು ಹೆಸರಿಗೆ ತಕ್ಕಂತೆ ಬರಿಯ ಮಠವಾಗಿರದೆ ಅನೇಕ ವಿದ್ಯೆಗಳ, ಕಲೆಗಳ ತವರುಮನೆಯಾಗಿತ್ತು; ಧಾರ್ಮಿಕ ಸಂಸ್ಥೆಯಾಗಿತ್ತು. ಜನತೆಗೆ ಸುಖ, ಅನುಕೂಲತೆಗಳನ್ನು ಒದಗಿಸಿ ಕೊಡುವ ಮಂದಿರವಾಗಿತ್ತು. ಇಲ್ಲಿ ಔಷಧಾಲಯಗಳೂ ವಿದ್ಯಾಲಯಗಳೂ ನಡೆಯುತ್ತಿದ್ದವು. ಇದು ಸುಜ್ಞಾನಿಗಳಿಗೂ ಸುನೀತಿವಂತರಿಗೂ, ನೈಷ್ಠಿಕ ಬ್ರಹ್ಮಚಾರಿಗಳಿಗೂ ಆಗರವಾಗಿತ್ತು. ಮಠದ ಆಚಾರ್ಯರು ಘನಪಂಡಿತರೂ ಶುದ್ಧ ಚಾರಿತ್ರರೂ ಆಗಿ ರಾಜಮನ್ನಣೆ ಪಡೆದು ವರ್ಚಸ್ಸುಳ್ಳವರಾಗಿದ್ದರು. ಶಿಕಾರಿಪುರದ ೧೨೩ ನೆಯ ಶಾಸನದಲ್ಲಿ ವಾಮಶಕ್ತಿದೇವನು ರಾಜಗುರು ಎಂದೇ ಉಕ್ತನಾಗಿದ್ದಾನೆ. ದಂಡನಾಯಕ ಕೇಶಿರಾಜನು ಕೇಶವಪುರದ ಆಡಳಿತವನ್ನು ಇವನಿಗೆ ಒಪ್ಪಿಸಿದನು. ಈ ವಾಮಶಕ್ತಿಯೇ ಕೋಡಿಯ ಮಠದ ಸ್ಥಾನಾಚಾರ್ಯನು. ೧೦೪ ನೆಯ ಶಾಶನದಲ್ಲಿ ಈ ಮಠದ ವರ್ಣನೆಯು ಬರುತ್ತದೆ. ಈ ಭಾಗವು ಶ್ಲೇಷಯುಕ್ತವಾದ ಕಾವ್ಯವಾಗಿದೆ. ಆ ಮಠವು ಪುರಾಣ ಕಮಠದಂತೆ ಸಕಲ ಲೋಕಕ್ಕೆ ಆಧಾರವಾಗಿತ್ತು. ಕ್ಷೀರಸಮುದ್ರದಲ್ಲಿ ಲಕ್ಷ್ಮಿಯಿಂದ ಪರಿಷೋಷಿಸಲ್ಪಟ್ಟ ಪುರಾಣಪುರುಷನಂತಿತ್ತು. ಬ್ರಹ್ಮಚಾರಿಗಳ ಸಂಚಾರದಿಂದ ಭವಾನೀ ಭವನದಂತಿತ್ತು. ಅದು 'ಸರಸ್ವತೀ ವಿಳಸಿತಮುಂ' ಆಗಿತ್ತು. ಖಚರ ಲೋಕದಂತೆ ವಿದ್ಯಾಧರೀಶ್ವರರಿಂದ ತುಂಬಿತ್ತು. ವಾಮಶಕ್ತಿದೇವನಿಂದ ಪರಿಪಾಲಿತವಾಗಿ ಕೈಲಾಸದಂತಿತ್ತು. ಶಿಕಾರಿಪುರದ ೧೦೨ ನೆಯ ಶಾಸನದಲ್ಲಿ ಈ ಮಠದ ಪ್ರಸ್ತಾಪ ಬಂದಿದೆ. ಕ್ರಿ. ಶ. ೧೧೬೨ ರ ಸುಮಾರಿಗೆ ಕಸಪಯ್ಯನಾಯಕನು ಕಲಚೂರ್ಯ ಬಿಜ್ಜಳನ ಪಾದಪದ್ಮೋಪಜೀವಿಯಾಗಿದ್ದನು. ಆತನ ಅನುಮತಿಯಿಂದ ಬಮ್ಮರಸನು

ಬನವಾಸೆನಾಡನ್ನಾಳುತ್ತಿದ್ದನು. ಆ ಬನವಾಸೆ ನಾಡಿನಲ್ಲಿ ಬಳ್ಳಿಗಾವೆ ಇದ್ದಿತು. ಅಲ್ಲಿಯ ದಕ್ಷಿಣ ಕೇದಾರೇಶ್ವರ ದೇವರ ಸ್ಥಾನವೇ ಕೋಡಿಯ ಮಠ. ಅದು ಆಗ ಶಿವಲಿಂಗ ಪೂಜೆಯ ನಿಲಯವಾಗಿತ್ತು. ವೇದ ವೇದಾಂಗಗಳ ಅಭ್ಯಾಸಕ್ಕೂ, ಕೌಮಾರ, ಪಾಣನೀಯ, ಶಬ್ದಾನುಶಾಸನ ಮುಂತಾದ ವ್ಯಾಕರಣಗಳ ಭಾಷ್ಯಗಳಿಗೂ ನೆಲೆಯಾಗಿತ್ತು. ನ್ಯಾಯ, ವೈಶೇಷಿಕ, ಮಿಮಾಂಸ, ಸಾಂಖ್ಯ, ಬುದ್ಧ ಮೊದಲಾದ ದರ್ಶನಗಳಿಗೆ ಆವಾಸಸ್ಥಾನವಾಗಿತ್ತು. ಲಾಕುಲ, ಸಿದ್ಧಾಂತ, ಪತಂಜಲಿ, ಯೋಗ ಶಾಸ್ತ್ರಗಳ ಬೀಡಾಗಿದ್ದಿತು. ಹದಿನೆಂಟು ಪುರಾಣಗಳಿಗೂ, ಧರ್ಮಶಾಸ್ತ್ರಗಳಿಗೂ, ಕಾವ್ಯ, ನಾಟಕ, ನಾಟಿಕಾ (Comedy)ಗಳಿಗೂ ನಿವಾಸವಾಗಿತ್ತು. ಅಲ್ಲಿ ನಿರ್ಗತಿಕರಿಗೆ ಯಥೇಚ್ಛವಾಗಿ ಅನ್ನವು ಕೊಡಲ್ಪಡುತ್ತಿತ್ತು. ಕತೆಗಾರರೂ, ಸಂಗೀತಗಾರರೂ ಅಲ್ಲಿ ಪ್ರೋತ್ಸಾಹನವನ್ನು ಪಡೆಯುತ್ತಿದ್ದರು. ವಿವಿಧ ಪಂಥದ ಸನ್ಯಾಸಿಗಳು ಅಲ್ಲಿರುತ್ತಿದ್ದರು. ಕ್ಷಪಣಕ ( Jain Mendicant ) ರಿಗೂ, ಏಕದಂಡಿ, ತ್ರಿದಂಡಿ ಹಂಸ, ಪರಮಹಂಸ ಮೊದಲಾದವರಿಗೂ ಅಲ್ಲಿ ಆಶ್ರಯವಿತ್ತು. ರೋಗಿಗಳ ಆರೈಕೆಯು ನಡೆಯುತ್ತಿತ್ತು. ಮುಂದೆ ಒಂದು ಶ್ಲೇಷಯುಕ್ತವಾದ ಕವಿತೆಯಲ್ಲಿ ಈ ಮಠದ ಘನತೆಯು ಅಚ್ಚುಕಟ್ಟಾಗಿ ವರ್ಣಿಸಲ್ಪಟ್ಟಿದೆ :—

ಮಠವು ಹಿರಣ್ಯಕಶ್ಯಪ ಸಂಹಾರದಿಂದ (ಸುವರ್ಣದಾನಾದಿಗಳಿಂದ) ಪುರುಷ ಸಿಂಹನಂತೆಯೂ, ಎಲ್ಲ ಕಡೆಗೂ ಅತ್ಯುತ್ತಮವಿದ್ದುದರಿಂದ ಮಂದಾರ ಪರ್ವತದಂತೆಯೂ, ಅಕ್ರೂರನ ಶಬ್ದಗಳಿಂದ (ಸೌಮ್ಯವಚನಗಳಿಂದ) ಸಂತೋಷಪಡೆಯುವುದರಿಂದ ವಾಸುದೇವನಂತೆಯೂ ಇದ್ದಿತು.

ಇಲ್ಲಿ ಬರುವ ಕವಿಕಲ್ಪನೆಯನ್ನು ನಾವು ಬಿಟ್ಟುಗೊಟ್ಟರೂ ಕೂಡ ಕೋಡಿಯ ಮಠದ ಘನತೆಗೆ ಯಾವ ರೀತಿಯಿಂದಲೂ ಕುಂದಿಲ್ಲ. ಮೇಲಿನ ವಿವರಣೆಯಿಂದ ಆ ಮಠದ ವರ್ಚಸ್ಸು ಆಗಿನ ಕಾಲಕ್ಕೆ ಎಷ್ಟಿತ್ತೆಂಬುದನ್ನು ಊಹಿಸಬಹುದು. ಇದಕ್ಕೆ ಪೋಷಕವಾಗುವಂತಹ ಬೇರೆ ನಿದರ್ಶನಗಳನ್ನು ಸಂಶೋಧಕರು ಹುಡುಕಬೇಕು. ಈಗಿರುವ ಸಾಧನೆಯಿಂದಲೇ ಊಹಿಸುವುದಾದರೆ ಕೋಡಿಯ ಮಠವು ಆಗ ಜ್ಞಾನದ, ದಾನದ, ಧರ್ಮದ, ಕರ್ಮದ, ಸಚ್ಚಾರಿತ್ರದ, ಸಚ್ಛೀಲದ ತವರುಮನೆಯಾಗಿದ್ದು ಒಂದು ಘನವಾದ ಸಂಸ್ಥೆಯಾಗಿತ್ತೆಂದು ಹೇಳಬಹುದು. ಮಾನವನ ಸುಖ-ಸೌಕರ್ಯಕ್ಕೆ, ಮನೋವಿಕಾಸಕ್ಕೆ ಎಲ್ಲ ರೀತಿಯಿಂದಲೂ ಅನುಕೂಲತೆಗಳನ್ನು ಒದಗಿಸಿ ಕೊಡುವುದನ್ನು ಹಾಗೂ ವಿವಿಧಮುಖವಾದ ಕಾರ್ಯಗಳನ್ನು ಒಂದೇ ಒಂದು ಸಂಸ್ಥೆಯು ಕೈಕೊಂಡಿರುವುದನ್ನು ಇದೀಗ ಕಲ್ಪಿಸುವುದೂ ಕೂಡ ನಮಗೆ ಸಾಧ್ಯವಿಲ್ಲದಾಗಿದೆ. ಇದು ಆಗಿನ ಕಾಲದ ನಮ್ಮ ಜನರ ಹೆಚ್ಚಳದ ದ್ಯೋತಕವಲ್ಲವೇ ?

ಇದು ಆ ಸಂಸ್ಥೆಯ ವಿಷಯ. ಇನ್ನು ಅದನ್ನು ಅಲಂಕರಿಸಿದವರೂ ಶ್ರೇಷ್ಠರೇ ಆಗಿರಬೇಕಷ್ಟೇ. ನಾವು ಪರಿಶೀಲಿಸುವ ಬಿಜ್ಜಳನ ಕಾಲದಲ್ಲಿ ವಾಮಶಕ್ತಿದೇವನು ಕೋಡಿಯ ಮಠದ ಸ್ಥಾನಾಚಾರ್ಯನಾಗಿದ್ದನು. ಈ ಮೊದಲೇ ಆತನ ವಿಷಯವಾಗಿ ಕೆಲವು ಮಾತುಗಳನ್ನು ಹೇಳಿದ್ದಾಗಿದೆ. ಆತನ ಘನತೆಯು ಅಸಾಮಾನ್ಯವಾಗಿತ್ತೆಂಬುದನ್ನು ನಾವು ಈಗ ಕಂಡುಕೊಳ್ಳಬಹುದು. ಶಿಕಾರಿಪುರದ ೧೦೩ ನೆಯ ಶಾಸನದಲ್ಲಿ ಆತನ ವರ್ಣನೆಯು ಹೀಗಿದೆ:—

"ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಅನುಷ್ಠಾನ ಜಪಸಮಾಧಿ ಗುಣ ಸಂಪನ್ನರುಂ, ವಿಬುಧಜನ ಪ್ರಸನ್ನರುಂ, ಅನ್ನದಾನ, ಸುವರ್ಣದಾನ, ಕನ್ಯಾದಾನ, ಗೋದಾನ, ಭೂದಾನಾಭಯ ಭೈಷಜ್ಯಾನೇಕದಾನವಿನೋದರುಂ ಲಾಕುಳಾಗಮಾಭರಣರುಂ, ಸಮಸ್ತ ಶಾಸ್ತ್ರಾಗಮ ವಿಚಾರಚಾರಚತುರರುಂ ಗೌತಮ ಮುನಿನಂದನರುಂ, ಬಲಿಪುರದ ದಕ್ಷಿಣ ಕೇದಾರೇಶ್ವರ ದೇವರ ದಿವ್ಯ ಪಾದಪದ್ಮಾರಾಧಕರಪ್ಪ ಶ್ರೀ ಮದ್ರಾಜಗುರು ವಾಮಶಕ್ತಿದೇವ............"

ಮೇಲಿನ ವರ್ಣನೆಯಿಂದ ವಾಮಶಕ್ತಿದೇವನ ಘನತೆಯ ಬಗೆಗೆ ಯೋಗ್ಯ ಕಲ್ಪನೆ ಬರದೇ ಇರಲಾರದು. ಶಿಕಾರಿಪುರದ ೧೦೪ನೆಯ ಶಾಸನದಲ್ಲಿಯೂ "ಯಮ ನಿಯಮ............ ಶೀಳಗುಣ ಸಂಪನ್ನ............ ದಕ್ಷಿಣ ಕೇದಾರೇಶ್ವರ ದೇವರ ಸ್ಥಾನದಾಚಾರ್ಯ............" ಎಂಬುದಾಗಿ ಆತನ ವರ್ಣನೆಯಿದೆ. ಶಿಕಾರಿಪುರದ ೧೦೭ ನೆಯ ಶಾಸನದಿಂದ ಇನ್ನೂ ಕೆಲವು ಸಂಗತಿಗಳನ್ನು ಇಲ್ಲಿ ಸಂಗ್ರಹಿಸುತ್ತೇನೆ. ಕವಿಕಲ್ಪನೆಯು ಒಂದು ಭವ್ಯ ರೂಪವನ್ನು ಕೊಟ್ಟಿದ್ದರೂ ಅದು ಸತ್ಯಾಂಶವನ್ನು ಮರೆಮಾಡಲಾರದು. ವಾಮಶಕ್ತಿದೇವನು ಚಂದ್ರನಷ್ಟು ಪ್ರಭೆಯುಳ್ಳ ಮಣಿದೀಪವಾಗಿದ್ದನು. ಜಗತ್ತೆಲ್ಲ ಆತನನ್ನು "ಜೀಯಾ" ಎಂದು ಸಂಬೋಧಿಸುತ್ತಿತ್ತು. ಆತನ ಮುಖವು ಸರಸ್ವತಿಯ ನೃತ್ಯಶಾಲೆಯಾಗಿತ್ತು. ಆತನ ಹೃದಯವು ಕಾಮಧ್ವಂಸಿಯ ಬೀಡಾಗಿತ್ತು. ಆತನ ಕೀರ್ತಿಯು ಜಗತ್ತಿನಲ್ಲೆಲ್ಲ ಪಸರಿಸಿತ್ತು. ಅವನ ತಪಸ್ಸಿನ ಉಗ್ರದೇವತೆಗೆ ಕಾಮನು ಬೆದರಿಹೋಗಿದ್ದನು. ಹೀಗೆ ಆತನ ವರ್ಣನೆ ಬರುತ್ತದೆ.

ಇನ್ನು ಈ ವಾಮಶಕ್ತಿಯ ವಂಶದವರ ವಿಚಾರ. ಶಿಕಾರಪುರದ ೯೩, ೯೯, ೧೦೩ ನೆಯ ಶಾಸನಗಳಲ್ಲಿ ಕೋಡಿಯ ಮಠದ ಗುರುಗಳ ವಂಶಾವಳಿಯೂ ಅವರ ಘನತೆಯೂ, ವಿದ್ಯೆಯೂ ಸಚ್ಚಾರಿತ್ರವೂ ವರ್ಣಿಸಲ್ಪಟ್ಟಿವೆ. ವಿಸ್ತಾರ ಭಯದಿಂದ ಅವುಗಳನ್ನಿಲ್ಲಿ ಕೊಡಲಾಗುವುದಿಲ್ಲ. ಅವರ ವಂಶವು "ಮೂವರ ಕೋಣೆಯ ಸಂತತಿ" ಎಂಬುದಾಗಿ ಉಕ್ತವಾಗಿದೆ. "ಮೂವರ ಕೋಣೆಯ ಸಂತತಿ ಶಕ್ತಿ ಪರಿಷೆಯೋಳ್ (ಶಿ. ೯೯)............" ಹಾಗೂ "ಪರ್ವತಾವಳಿಯೊಳ್ತಾನಾವಿರ್ಭವಿ

ಸಿದ ( ಷಿ. ೧೦೦ )............ " ಮತ್ತೂ " ಪರ್ವತಾವಳಿಯ ಮೂವರ ಕೋಣೆಯ ಸಂತತಿ ( ಷಿ. ೧೦೪ )............ " ಇತ್ಯಾದಿ ವರ್ಣನೆಯು ಶಿಲಾಲೇಖಗಳಲ್ಲಿ ಕಂಡು ಬರುತ್ತದೆ. ಅವರೂ ಕಾಳಾಮುಖರೇ ಹೌದು. ಇದು ಕಾಳಾಮುಖರೆನಿಸಿದ ಕಾಳಾ ಮುಖರೋಳ್ ( ಷಿ. ೯೯ )........ " ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಆದರೆ ಈ ಮೂವರ ಕೋಣೆಯ ಸಂತತಿಯು ಕಾಳಾಮುಖರ ಬೇರೊಂದು ಶಾಖೆಯು. ಕಾಳಾ ಮುಖರಲ್ಲಿ ಕೆಲವು ಭೇದಗಳುಂಟು. ಅದರಲ್ಲಿ ಇವರು " ಶಕ್ತಿ ಪರಿಷೆಗೆ ಸೇರಿದವರಾಗಿ ದ್ದರು—" ಧರೆಗೆಸೆವ ಶಕ್ತಿ ಪರಿಷೆಗೆ ( ಷಿ. ೯೪ ಹಾಗೂ ೯೮ )........ " ಎಂಬುದಾಗಿ ಇವರ ಪ್ರಸ್ತಾಪವು ಶಾಸನಗಳಲ್ಲಿ ಬರುತ್ತದೆ. ಇವರ ಮುಖ್ಯ ಮಠವೇ ಕೋಡಿಯ ಮಠವು. ಅದುವೇ ಇವರ ವಿದ್ಯಾಲಯವಾಗಿತ್ತು. ಇವರಿಗೆ "ಲಾಕುಳಾಗಮಾಭರಣರು" ಎಂಬುದಾಗಿ ವಿಶೇಷಣವಿದೆ. ಆದರೆ ಇವರು ಲಾಕುಲೀಶ ಪಂಥವನ್ನು ಅನುಸರಿಸಿ ದವರೇನೂ ಅಲ್ಲ. ಆ ಪಂಥದ ತತ್ತ್ವಗಳನ್ನು ಅರಿತವರೆಂದು ಮಾತ್ರ ಅರ್ಥ ಮಾಡಿ ಕೊಳ್ಳಬೇಕು. ಹೀಗೆ ಉಕ್ತವಾದ ಮೂವರ ಕೋಣೆಯ ಸಂತತಿಯ ವಿಷಯವಾಗಿ ಹೆಚ್ಚಿನ ಸಂಗತಿಗಳೇನಾದರೂ ತಿಳಿಯುವವೋ ಎಂಬುದನ್ನು ನೋಡಬೇಕಾಗಿದೆ.

ಎಪಿಗ್ರಾಫಿಕಾ ಇಂಡಿಕಾದ ೧ನೆಯ ಸಂಪುಟದಲ್ಲಿ ಅಬಲೂರ ಶಾಸನದ ವಿಸ್ತ್ರತ ವಿವರಣೆಯು ಬಂದಿದೆ. ಆ ಲೇಖದಲ್ಲಿ ಈ ಮೂವರ ಕೋಣೆಯ ಸಂತತಿಯ ಸಂಬಂಧ ದಲ್ಲಿ ಕೆಲವು ವಿಷಯಗಳು ಸಂಗ್ರಹಿಸಲ್ಪಟ್ಟಿವೆ :— ಮೂವರ ಕೋಣೆಯ ಸಂತತಿಯು ಕಾಳಾಮುಖರಿಗೆ ಸಂಬಂಧಿಸಿದ್ದಾಗಿದೆ. ಸ್ಥೂಲವಾಗಿ ಅವೆರಡೂ ಒಂದೇ ಎಂದು ಕಂಡು ಬರುತ್ತದೆ. ಆದರೆ ಸೂಕ್ಷ್ಮ ನಿರೀಕ್ಷಣೆಯಿಂದ ಅದು ಹಾಗಲ್ಲವೆಂದು ತಿಳಿಯುತ್ತದೆ. ಯಾಕಂದರೆ ಕಾಳಾಮುಖರ ವಿದ್ಯಾಲಯವು ಪಂಚಲಿಂಗ ಮಠವೆಂದು ಉಕ್ತವಾಗಿದೆ. ( ಬಳ್ಳಿಗಾವೆ ೧೦೫ ನೆಯ ಶಾಸನ ) ಆದರೆ ಮೂವರ ಕೋಣೆಯ ಸಂತತಿಯವರ ವಿದ್ಯಾಲಯವು ಕೇದಾರ ಸ್ಥಾನ ಅಥವಾ ಕೇದಾರ ಮಠವಾಗಿತ್ತು. ಕೇದಾರ ಮಠವು ಕನ್ನಡದಲ್ಲಿ ಕೋಡಿಯ ಮಠವಾಗಿರಬೇಕು. ( ಈ ಕೋಡಿಯ ಮಠವೇ ಮೂವರ ಕೋಣೆಯ ಸಂತತಿಯವರ ಸ್ಥಾನವಾಗಿತ್ತೆಂದು ಈ ಮೊದಲೇ ಹೇಳಿದೆ. ) ಮೂವರ ಕೋಣೆಯ ಸಂತತಿಯ ಸ್ಥಾಪಕನು ಮೊದಲು ಕಾಳಾಮುಖ ಸಂತತಿಯವನೇ ಆಗಿ ದ್ದರೂ ನಂತರ ಬೇರೆ ಪಂಥವನ್ನು ಸ್ಥಾಪಿಸಿರಬಹುದು. ಮೂಲ ಪುರುಷನ ಹೆಸರು ಕೇದಾರ ಶಕ್ತಿ; ಆತನ ಕಾಲವು ತಿಳಿದಿಲ್ಲ. ಕೇದಾರ ಶಕ್ತಿ, ಸೋಮೇಶ್ವರ, ಶ್ರೀಕಂಠ, ಸೋಮೇಶ್ವರ, ವಿದ್ಯಾಭರಣ, ವಾಮಶಕ್ತಿ, ಜ್ಞಾನಶಕ್ತಿ (೧೧೩೦) ಗೌತಮ, ಎರಡನೆಯ ವಾಮಶಕ್ತಿ (೧೧೯೩ ಕ್ರಿ. ಶ.)....ಈ ಪ್ರಕಾರ ಕ್ರಮವಾಗಿ ಹೆಸರುಗಳು ಬರುತ್ತವೆ. ಎರಡನೆಯ ವಾಮಶಕ್ತಿಯೇ ಈ ಮೊದಲು ವರ್ಣಿಸಲ್ಪಟ್ಟಿರುವನು.

ಇವರೆಲ್ಲರೂ ರಾಜಗುರುಗಳಾಗಿಯೂ ಆನುವಂಶಿಕವಾಗಿ ಕೋಡಿಯ ಮಠದ ಆಚಾರ್ಯರಾಗಿಯೂ ಇದ್ದರು. ಶಿಲಾಲೇಖಗಳಲ್ಲಿ ಇವರ ಘನತೆಯು ವರ್ಣಿಸಲ್ಪಟ್ಟಿದೆ.

ಇನ್ನು ಈ ಬರೆಹವನ್ನು ಮುಗಿಸುವುದಕ್ಕೆ ಮೊದಲು ಇನ್ನೊಂದು ಮಾತನ್ನು ಸೂಚಿಸಬೇಕಾಗಿದೆ. ಇತಿಹಾಸ ಸಂಶೋಧನ ಕಾರ್ಯದಲ್ಲಿ ಹೆಸರು ಪಡೆದ ಶ್ರೀಮಾನ್ ಹಲಸಂಗಿ ಚೆನ್ನಮಲ್ಲಪ್ಪನವರು ಶಿವಾನುಭವದ ೧೯೨೭ನೆಯ ವರುಷದ ಸಪ್ಟಂಬರದ ಸಂಚಿಕೆಯಲ್ಲಿ ಒಂದು ಮಹತ್ವದ ಲೇಖವನ್ನು ಪ್ರಕಟಿಸಿದ್ದಾರೆ. ಅದು ಬೆಳಗಾವಿ ಜಿಲ್ಹೆಯ ಹೂಲಿಯ ಪಂಚವಣ್ಣಿಗೆಯ ಮಠದ ವಿಷಯವಾಗಿ ಇದೆ. ಆ ಮಠದ ಕಾಗದ-ಪತ್ರಗಳನ್ನೆಲ್ಲ ಅವಲೋಕಿಸಿ ಬಹು ಕಾಲದಿಂದಲೂ ಆ ಮಠದ ಪಟ್ಟವನ್ನು ಅಲಂಕರಿಸಿದ್ದ ಸ್ವಾಮಿಗಳ ಹೆಸರುಗಳನ್ನು ಅನುಕ್ರಮವಾಗಿ ಕೊಟ್ಟಿದ್ದಾರೆ. ಆ ಹೆಸರುಗಳು ಶಿಲಾಲೇಖದ ಆಧಾರವನ್ನು ಅವಲಂಬಿಸಿವೆಯೆಂದು ಅವರು ಬರೆಯುತ್ತಾರೆ. ಅದರಲ್ಲಿ ಸ್ಥಿರಪಟ್ಟದ ೩೪ ನೆಯ ಸ್ವಾಮಿಗಳ ಹೆಸರು ವಾಮಶಕ್ತಿ ಎಂಬುದಾಗಿಯೂ ಅವರ ಕಾಲವು ೧೧೬೬-೧೧೮೪ ಎಂಬದಾಗಿಯೂ ಇದೆ. ಈ ಬರೆಹದಲ್ಲಿ ಮೇಲೆ ಉಕ್ತವಾದ ಕೋಡಿಯ ಮಠದ ವಾಮಶಕ್ತಿಯ ಕಾಲವಾದರೂ ಸುಮಾರಾಗಿ ಇದೇ. ಅಂದಮೇಲೆ ಸಮಕಾಲೀನರಾಗಿ ನಾಮಸಾದೃಶ್ಯವುಳ್ಳ ಈ ಎರಡೂ ವ್ಯಕ್ತಿಗಳೂ ಒಬ್ಬರೇ ಆಗಿರಲಿಕ್ಕಿಲ್ಲವಷ್ಟೇ? ಹಾಗಾದರೆ ಮೈಸೂರ ಪ್ರಾಂತದ ಬಳ್ಳಿಗಾವಿ ಮಠಕ್ಕೂ ಮುಂಬಯಿ ಪ್ರಾಂತದ ಬೆಳಗಾವಿ ಜಿಲ್ಹೆಯ ಹೂಲಿಯ ಮಠಕ್ಕೂ ತಳಕು ಹಾಕುವುದು ಹೇಗೆ? ಇದೊಂದು ಸ್ವಾರಸ್ಯಯುಕ್ತವಾದ ವಿಷಯ. ಈ ಸಂದರ್ಭದಲ್ಲಿ ಹೊಳೆಯುವ ಇನ್ನೊಂದು ವಿಷಯವೆಂದರೆ, ಹೂಲಿಯ ಪಂಚವಣ್ಣಿಗೆಯ ಮಠ ಈಗ ಲಿಂಗವಂತರದಾಗಿದೆ. ಆದರೆ ಪೂರ್ವಕಾಲದ ಅಲ್ಲಿಯ ಸ್ವಾಮಿಗಳ ಹೆಸರುಗಳೆಲ್ಲಾ ಕಾಳಾಮುಖರ ಹೆಸರುಗಳಾಗಿವೆ. ಹೂಲಿಯ ಮಠದ ೩೪ ನೆಯ ಸ್ಥಿರಪಟ್ಟಾಧಿಕಾರಿ ವಾಮಶಕ್ತಿಯೂ ಅದೇ ಹೆಸರಿನ,ಅದೇ ಕಾಲದ ಕೋಡಿಯ ಮಠದ ವಾಮಶಕ್ತಿಯೂ ಒಬ್ಬನೇ ಎಂದು ಊಹಿಸಬಹುದಾದರೆ ಹೂಲಿಯ ಪಂಚವಣ್ಣಿಗೆಯ ಮಠದಲ್ಲಿ ಆಗಿನ ಸ್ವಾಮಿಗಳು ಮೂವರ ಕೋಣೆಯವರೆಂದು ಕಲ್ಪಿಸಬೇಕಾಗುತ್ತದೆ. ಅರ್ಥಾತ್ ಈ ಮೂವರ ಕೋಣೆಯ ಸಂತತಿಯವರು ಬಸವನ ಕ್ರಾಂತಿಯಿಂದ ಲಿಂಗವಂತರಾಗಿರಬಹುದೋ? ಇದೊಂದು ಪ್ರಶ್ನೆಯು ಇತಿಹಾಸ ಸಂಶೋಧಕರನ್ನೆದುರಿಸುತ್ತಿದೆ.

ಇನ್ನು ಕೊನೆಯ ಮಾತು. ಈ ಬರೆಹದಲ್ಲಿ ನಾನು ಯಾವುದೊಂದು ನಿರ್ಧಾರ ಮಾಡಹೊರಟಿಲ್ಲ. ಕರ್ನಾಟಕದಲ್ಲಿ ೮೦೦ ವರುಷಗಳ ಹಿಂದೆ ಘನತೆಯುಳ್ಳ ಹಾಗೂ ವರ್ಚಸ್ಸುಳ್ಳದ್ದಾದ-ಈಗ ಮಾತ್ರ ಯಾರಿಗೂ ಹೆಸರು ಸಹ ಗೊತ್ತಿಲ್ಲದ-ಒಂದು

ದೊಡ್ಡ ಸಂಸ್ಥೆ (ಬರಿಯ ಮಠವಲ್ಲ) ಯ ವಿಷಯವಾಗಿ, ಬಿಜ್ಜಳನ ಕಾಲದ ಕೆಲವು ಶಿಲಾಲೇಖಗಳಲ್ಲಿ ಅಸ್ತವ್ಯಸ್ತವಾಗಿ ದೊರೆಯುವ ಸಂಗತಿಗಳನ್ನು ಕಲೆಹಾಕಿ, ಅವಕ್ಕೊಂದು ರೂಪು ಕೊಡುವ ಪ್ರಯತ್ನ ಮಾಡಿದ್ದೇನೆ. ಓದುಗರಲ್ಲಿ ಕುತೂಹಲವುಂಟಾಗಿ ಹೆಚ್ಚಿನ ಸಂಶೋಧನಕ್ಕಾಗಿ ಆಸಕ್ತಿಯುಂಟಾಗಬೇಕೆಂಬುದೇ ನನ್ನ ಉದ್ದೇಶ.

# ಬಳ್ಳಿಗಾವಿ

ಬನವಾಸೆ ನಾಡು ಪ್ರಾಚೀನ ಕರ್ನಾಟಕದ ಉದ್ಯಾನವಾಗಿತ್ತು. ಬನವಾಸೆ ನಾಡಿನ ರಾಜಧಾನಿಯಾದ ಬಳ್ಳಿಗಾವಿಯು ಕನ್ನಡ ನಾಡದೇವಿಯ ಕುಂಕುಮ ತಿಲಕದಂತಿತ್ತು. ಬಳ್ಳಿಗಾವಿಯು ಈಗ ಮೈಸೂರು ಸಂಸ್ಥಾನದ ಶಿವಮೊಗ್ಗೆ ಜಿಲ್ಲೆಯ ಶಿಕಾರಿಪುರ ತಾಲೂಕಿನಲ್ಲಿ ಒಂದು ಹಳ್ಳಿಯಾಗಿದೆ. ಅದು ಶಾಸನಗಳಲ್ಲಿ ಬಲಿಪುರ, ಬಳ್ಳಿಪುರ, ಬಳ್ಳಿಗ್ರಾಮ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ. ಬಲಿರಾಕ್ಷಸನ ಸಂಬಂಧದಿಂದ ಬಲಿಪುರವೆಂಬ ಹೆಸರು ಬಂದಿದೆಯೆಂದು ಹೇಳಲಾಗುತ್ತಿದೆ. ಆದರೆ ಉದ್ಯಾನಗಳ ತವರೂರಾದ ಬನವಾಸೆಯ ರಾಜಧಾನಿಯಾಗಿ, ಬಳ್ಳಿಗಳಿಂದ ತುಂಬಿದ್ದ ರಿಂದ ಅದನ್ನು ಬಳ್ಳಿಗಳ ಗ್ರಾಮವೆಂದೂ ಕರೆಯಬಹುದಾಗಿದೆ. ಇದು ಪ್ರಾಚೀನ ಕನ್ನಡನಾಡಿನ ಕೈಪಿಡಿಯಂತಿದ್ದು ಕನ್ನಡರ ಸಂಸ್ಕೃತಿಯ ವೈಶಿಷ್ಟ್ಯದ ಗುರುತುಗಳಾದ ಗುಡಿ, ಕೆರೆ, ಉದ್ಯಾನಗಳಿಂದ ಈ ರಾಜಧಾನಿಯು ಸಮೃದ್ಧಿಯಾಗಿತ್ತು. ಈಗಲೂ ಕೂಡ ನಾವು ಇಲ್ಲಿ ಆ ಅವಶೇಷಗಳನ್ನು ಕಾಣುತ್ತೇವೆ. ಬನವಾಸೆ ನಾಡು ಶಾಸನ ಗಳಲ್ಲಿ ಬಹುವಿಧವಾಗಿ ವರ್ಣಿಸಲ್ಪಟ್ಟಿದೆ. ಅವುಗಳಲ್ಲಿ ಒಂದೆರಡು ಅವತರಣಿಕೆಗಳನ್ನು ಉದ್ಧರಿಸದೆ ಮುಂದೆ ಸಾಗಲಾರೆ.

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರಮಾರಯ್ಯಲ್ ಸಮು ।
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ತಜನಿರ್ಕೆದಾಣಮು ॥
ನ್ಮದ ಯುವತೀ ಜನಂಗಳೆಱಿವಟ್ಟು ಬುಧಾಳಿಯ ಜನ್ಮಭೂಮಿಯೆಂ ।
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿ ಮಂಡಲಂ ॥

( ದಾವಣಗೆರೆ ಶಾಸನ ೩೫ )

ಫಲಭರದಿಂ ಮಸಂಗೊಳಿಪ ಪೂಗವನಂ ವನದೊಳ್ ಸರೋಜಲಂ ।
ಜಲಪ ಪೊಸಲ್ಗಳಿಂ ಬೆಳೆದು ಕತ್ತಲಿಸಿರ್ಪೆಲೆವಳ್ಳಿ ಬಳ್ಳಿಗೊಂ ॥
ಝಲಿವ ಪಿಕಂ ಪಿಕಧ್ವನಿಗಳಿಂ ನಲಿದಾಡುವನಂಗನಂಗನಾ ।
ಕುಲಮುವೆ ಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆ ದೇಶದೊಳ್ ॥

( ಸೊರಬದ ಶಾಸನ ೨೭೭ )

ಇಂತಹ ನಾಡಿನ ರಾಜಧಾನಿಯು ರಸಿಕತೆಯ, ಸಂಪತ್ತಿನ, ವೈದುಷ್ಯದ, ಸದ್ಗುಣಗಳ ತವರೂರಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ.

ಬಳ್ಳಿಗಾವಿಯು ಅತಿ ಪ್ರಾಚೀನ ರಾಜಧಾನಿಯಾಗಿದೆ. ಇಲ್ಲಿ ಪಾಂಡವರಿಂದ ಪಂಚಲಿಂಗಗಳು ಸ್ಥಾಪಿಸಲ್ಪಟ್ಟಿವೆಂದು ಶಿಕಾರಿಪುರದ ೧೫೩ ನೆಯ ಶಾಸನದಲ್ಲಿ ಉಕ್ತವಾಗಿದೆ. ಹನ್ನೆರಡನೆಯ ಶತಮಾನದಲ್ಲಿಯಂತೂ ಈ ಪಟ್ಟಣವು ವಿಶೇಷವಾದ ಘನತೆಯನ್ನು ಪಡೆಯಿತು. ಆದರೆ ಅದಕ್ಕೆ ಮೊದಲು ಬಹುಕಾಲದಿಂದ ಸುಪ್ರಸಿದ್ಧ ರಾಜಧಾನಿಯಾಗಿರಬೇಕು. ಏಕೆಂದರೆ ಅದು ಹನ್ನೆರಡನೆಯ ಶತಮಾನದಲ್ಲಿ ಕೂಡ ಅನಾದಿ ರಾಜಧಾನಿಯೆಂದು ವರ್ಣಿಸಲ್ಪಟ್ಟಿದೆ. ಅಲ್ಲದೆ ಅದು ಪಟ್ಟಣಗಳ ತವರುಮನೆಯೆಂದೂ ಕರೆಯಲ್ಪಟ್ಟಿದೆ. ಇದು ರಾಜಧಾನಿಯಾಗಿರುವಂತೆ ಪ್ರಸಿದ್ಧ ಕ್ಷೇತ್ರವೂ ಅಹುದು. ಇದು ಪುರಿ, ಬ್ರಹ್ಮಪುರಿ ಮಠಗಳಿಂದ ತುಂಬಿಕೊಂಡು ಒಂದು ಪ್ರಸಿದ್ಧ ಧಾರ್ಮಿಕ ಕೇಂದ್ರವಾಗಿತ್ತೆಂದು ಶಿಲಾಶಾಸನಗಳಲ್ಲಿ ಉಕ್ತವಾಗಿದೆ. ಅತಿ ಪ್ರಾಚೀನವಾದ ರಾಜಧಾನಿ, ಧಾರ್ಮಿಕ ಕೇಂದ್ರ, ಕೆರೆ, ಉದ್ಯಾನಗಳ ನಿಸರ್ಗ ರಮಣೀಯತೆ ಇವುಗಳ ಮೂಲಕ ಬಳ್ಳಿಗಾವಿಯು ಕನ್ನಡಿಗರ ಅಭಿಮಾನದ ಸೊತ್ತಾಗಿದೆಯೆಂದು ಹೇಳಬಹುದು.

ಹನ್ನೆರಡನೆಯ ಶತಮಾನವು ಕರ್ನಾಟಕದ ಚರಿತ್ರೆಯಲ್ಲಿ ಒಂದು ವಿಪ್ಲವದ ಕಾಲ. ಧಾರ್ಮಿಕ, ರಾಜಕೀಯ ಚಟುವಟಿಕೆಗಳ ಕಾಲ. ಅಂತಹ ಕಾಲಕ್ಕೆ ಬಳ್ಳಿಗಾವಿಯು ಒಂದು ಪ್ರಸಿದ್ಧ ಕೇಂದ್ರವಾಗಿತ್ತು. ಆಗ ನಡೆದ ವೀರಶೈವ ಧಾರ್ಮಿಕ ಕ್ರಾಂತಿಯಲ್ಲಿ ಮೂರು ಕೇಂದ್ರಗಳು ಜನತೆಯನ್ನು ಆಕರ್ಷಿಸಿದವು. ಕರ್ಮಯೋಗಿಯಾದ ಸಿದ್ಧರಾಮನ ಸೊನ್ನಲಿಗೆ, ಭಕ್ತಿಯೋಗಿ ಬಸವಣ್ಣನ ಕಲ್ಯಾಣ, ಜ್ಞಾನಯೋಗಿ ಪ್ರಭುದೇವರ ಬಳ್ಳಿಗಾವಿ ಇವೇ ಆ ಮೂರು ಕೇಂದ್ರಗಳು. ವೀರಶೈವ ವಿಭೂತಿಗಳಲ್ಲಿ ಮಹಾತೇಜಸ್ವಿಯಾದ ಪ್ರಭುದೇವನು ಬಳ್ಳಿಗಾವಿಯವನೆಂದು ಹೇಳಲಾಗುತ್ತದೆ. ಈ ಮಾತಿಗೆ ಪುಷ್ಟಿ ದೊರೆಯುವಂತೆ ಈಗ ಬಳ್ಳಿಗಾವಿಯಲ್ಲಿ ಪ್ರಭುದೇವರ ಗುಡಿಯೊಂದು ತೋರಿಸಲ್ಪಡುತ್ತದೆ. ಇಲ್ಲಿಂದ ಸ್ವಲ್ಪು ಅಂತರದಲ್ಲಿ ಅನಿಮಿಷಯ್ಯನ ಕೊಪ್ಪಳು ಇದೆ. ( ಈ ಅನಿಮಿಷಯ್ಯನು ಪ್ರಭುದೇವನ ಗುರುವೆಂದು ನಂಬ

ಲಾಗುತ್ತದೆ. ) ಹಾಗೂ ಸಮೀಪದಲ್ಲಿಯೇ ಗೊಗ್ಗಯ್ಯನ ಚೌಕಿ, ಏಕಾಂತದ ರಾಮಯ್ಯನ ಗುಡ್ಡ ಇವುಗಳು ಇವೆ. ಇವೆಲ್ಲವುಗಳಿಂದ ಈ ಭಾಗವು ವೀರಶೈವ ಧಾರ್ಮಿಕ ಕ್ರಾಂತಿಯ ಕಾರ್ಯಕ್ಷೇತ್ರವಾಗಿತ್ತೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ನಾಡಿನಲ್ಲಿ ಆಗ ವೀರಶೈವರ ಪ್ರಭಾವವು ಹೆಚ್ಚಾಗಿತ್ತೆಂದು ತಿಳಿಯಲಿಕ್ಕೆ ಅಡ್ಡಿ ಇಲ್ಲ. ಹದಿನಾಲ್ಕನೆಯ ಶತಮಾನದಲ್ಲಿ ಒಬ್ಬ ವೀರಶೈವನು ಲಿಂಗವಂತ ಧರ್ಮಪ್ರಸಾರಕ್ಕಾಗಿ ಮಕ್ಕಾದವರೆಗೆ ಹೋಗಿದ್ದನೆಂದೂ ಅವನ ಹೆಸರಿನಿಂದಲೇ ಇಲ್ಲಿ ಮಲೆಯ ಮಲ್ಲೇಶ್ವರಲಿಂಗ ಸ್ಥಾಪನೆಯಾಗಿದೆಯೆಂದೂ ಒಂದು ಆಖ್ಯಾಯಿಕೆ ಇದೆ. ಈ ಮಾತನ್ನು ಮ| ರಾ| ಶ್ರೀ. ಸಿ. ಹಯವದನರಾಯರು ತಮ್ಮ ಮೈಸೂರ ಗ್ಯಾಜಿಟೀಯರದಲ್ಲಿ ಹೇಳಿದ್ದಾರೆ. ಮಹಾತೇಜಸ್ವಿ ವಿಭೂತಿಯಾದ ಪ್ರಭುದೇವನ ಸಂಬಂಧದಿಂದ ಈ ಪಟ್ಟಣವು ಕೀರ್ತಿಶಾಲಿಯಾಗಿದೆ. ಅಲ್ಲದೆ ವೀರ ವಿರಕ್ತೆಯೂ, ಮಹಿಳಾಪ್ರಪಂಚದ ಆದರ್ಶಳೂ ಆದ ಅಕ್ಕ ಮಹಾದೇವಿಯ ಸಂಬಂಧವೂ ಕೂಡ ಈ ಊರಿಗೆ ಇದೆ. ಈಗ ಬಳ್ಳಿಗಾವಿಯ ದೊಡ್ಡದಾರಿಯ ಮೇಲೆ ಕಮಲಗಂಗವ್ವನ ಗುಡಿಯೊಂದು ತೋರಿಸಲ್ಪಡುತ್ತದೆ. ಅಕ್ಕ ಮಹಾದೇವಿಯ ನಾಮಾಂತರವೇ ಕಮಲಗಂಗವ್ವನೆಂದು ಹೇಳುತ್ತಾರೆ. ಹಾಗೂ ಅಕ್ಕ ಮಹಾದೇವಿಯ ಊರೆಂದು ನಂಬಲಾದ ಉಡುತಡಿ ಗ್ರಾಮವಾದರೂ ಇಲ್ಲಿಗೆ ಸಮೀಪದಲ್ಲಿ ಇದೆ. ಹೀಗೆ ವೀರಶೈವ ಶರಣ-ಶರಣೆಯರ ಸ್ಥಳಗಳು ಈ ಬಳ್ಳಿಗಾವಿಯ ನೆರೆಯಲ್ಲಿಯೇ ಇರುವುದರಿಂದ ಈ ಊರಿನ ಮಹತ್ವವು ಇನ್ನೂ ಹೆಚ್ಚುತ್ತದೆ. ಬಳ್ಳಿಗಾವಿ ಹಾಗೂ ಅದರಿಂದ ಸ್ವಲ್ಪ ಅಂತರದ ಮೇಲೆ ಇರುವ ಸ್ಥಳಗಳು ಅಲ್ಲಮಪ್ರಭು, ಅನಿಮಿಷಯ್ಯ, ಗೊಗ್ಗಯ್ಯ, ಏಕಾಂತ ರಾಮಯ್ಯ ಹಾಗೂ ಅಕ್ಕ ಮಹಾದೇವಿ ಈ ಉದಾತ್ತ ಜೀವಿಗಳ ಕಾರ್ಯರಂಗಗಳಾಗಿವೆ.

ಈ ಬಳ್ಳಿಗಾವಿಯು ಚಾರಿತ್ರ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಈ ಊರು ಶಿಲಾಶಾಸನ, ಮಾಸ್ತಿಕಲ್ಲು, ವೀರಗಲ್ಲು, ನಿಸದಿಗೆ ಕಲ್ಲು ಇವುಗಳ ಭಾಂಡಾರವಾಗಿದ್ದು ಚರಿತ್ರ ಸಂಶೋಧಕರಿಗೆ ವಿಪುಲ ಕ್ಷೇತ್ರವನ್ನು ಒದವಿಸಿಕೊಡುತ್ತದೆ. ಶಿಕಾರಿಪುರದ ೯೨, ೯೬, ೯೮, ೧೦೨, ೧೦೬, ೧೧೭, ಮತ್ತು ೧೫೩ ನೆಯ ಶಿಲಾಶಾಸನಗಳಲ್ಲಿಯೂ ಸೊರಬದ ೧೭೪, ೨೭೭ ನೆಯ ಶಾಸನ ಮುಂತಾದವುಗಳಲ್ಲಿಯೂ ಈ ಪಟ್ಟಣದ ಘನತೆಯು ಸುಂದರವಾಗಿ ವರ್ಣಿಸಲ್ಪಟ್ಟಿದೆ. ಶಾಸನಗಳ ವರ್ಣನೆಗಳಿಂದ ಇದು ಬಹು ಮುಂದುವರಿದ ಪಟ್ಟಣವಾಗಿತ್ತೆಂದು ಕಂಡುಬರುತ್ತದೆ. ಶಿಕಾರಿಪುರದ ೧೫೩ ನೆಯ ಶಾಸನದಲ್ಲಿಯ ವರ್ಣನಾ ಭಾಗವು ಗಮನಾರ್ಹವಾಗಿರುವುದರಿಂದ ಅದನ್ನು ಕೆಳಗೆ ಸಂಗ್ರಹಿಸಿದೆ— " ಬಲಿಪುರವು ಬನವಾಸೆ ಪ್ರಾಂತದ ರಾಜಧಾನಿಯಾಗಿತ್ತು. ಪೂರ್ವದ ದಂಡನಾಯಕರು ಅಲ್ಲಿ ಸತ್ರ, ವಿಹಾರೋದ್ಯಾನ, ಗುಡಿ, ಕೆರೆ, ಕಾಲುವೆ

ಗಳನ್ನು ನಿರ್ಮಿಸಿದ್ದರು. ಅದು ಜಗತ್ತಿನಲ್ಲಿ ಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲದೆ ಅದು ಪ್ರಾಚೀನ ಕಾಲದಿಂದ ಪ್ರಗತಿಪರವಾಗಿತ್ತು. ಪಾಂಡವರು ಇಲ್ಲಿ ಪಂಚಲಿಂಗ ಗಳನ್ನು ಸ್ಥಾಪಿಸಿದರು. ಈ ಪಟ್ಟಣವು ಪ್ರತಿಷ್ಠ ನಾಗರಿಕರಿಂದಲೂ ಸೆಟ್ಟಿ-ಸಾಹುಕಾರ ರಿಂದಲೂ ತುಂಬಿತ್ತು. ಇಲ್ಲಿಯ ಹಿರಿಯಮಠ, ಪಂಚಲಿಂಗಮಠ, ತ್ರಿಪುರಾಂತಕ ಮಠ, ಕೋಡಿಯ ಮಠಗಳಲ್ಲಿ ನಿಷ್ಠಾವಂತರಾದ ಆಚಾರ್ಯರು ಇದ್ದರು. ಅವರು ರಾಜ ರಿಂದ ಗೌರವಿಸಲ್ಪಡುತ್ತಿದ್ದರು." ಸೊರಬದ ೨೭೭ನೆಯ ಶಾಸನದಿಂದ ಇಲ್ಲಿಯ ಪಂಚ ಮಠಗಳಿಂದ ಸ್ವಧರ್ಮರಕ್ಷಣೆಯು ಸರಿಯಾಗಿ ನಡೆಯುತ್ತಿತ್ತೆಂದೂ ಇಲ್ಲಿ ಮೂರು ಔಷಧಾಲಯಗಳಿದ್ದವೆಂದೂ ತಿಳಿಯುತ್ತದೆ. ಬಳ್ಳಿಗಾವಿಯಲ್ಲಿ ಆಗ ಇದ್ದ ಕೋಡಿಯ ಮಠದ ಘನತೆಯಂತೂ ಯಾರನ್ನಾದರೂ ಬೆರಗುಗೊಳಿಸದೆ ಬಿಡದು. ಕರ್ನಾಟಕದಲ್ಲಿ ಅದೊಂದು ವಿಶ್ವವಿದ್ಯಾಲಯವಾಗಿತ್ತು. ಅದು ಮಠವೆಂದು ಕರೆಯಲ್ಪಟ್ಟಿದ್ದರೂ ಕೂಡ ಮಾನವನ ಬಹುಮುಖ ಬೆಳವಣಿಗೆಗೆ ಅವಕಾಶವನ್ನೀಯುವ ಸಂಸ್ಥೆಯಾಗಿತ್ತು. ಘನಪಂಡಿತರೂ, ಉಜ್ವಲ ಧಾರ್ಮಿಕರೂ, ರಾಜಪೂಜಿತರೂ ಆದ ಮಠದ ಆಚಾರ್ಯರು ಅಲ್ಲಿದ್ದರೆಂದು ಅನೇಕ ಶಾಸನಗಳು ಹೇಳುತ್ತವೆ. ವೀರಶೈವ ಧರ್ಮದ ಇತಿಹಾಸದಲ್ಲಿ ಇನ್ನೂ ಒಂದು ಒಗಟವೇ ಆಗಿ ಉಳಿದಿರುವ ಕಾಳಾಮುಖರ ಒಂದು ಶಾಖೆಯವರು ಅಲ್ಲಿಯ ಮಠದಾಚಾರ್ಯರಾಗಿದ್ದರು. ಶಿಕಾರಿಪುರದ ಅನೇಕ ಶಾಸನ ಗಳಲ್ಲಿ ಈ ಮಠದ ಘನತೆಯು ಉಕ್ತವಾಗಿದೆ. ಅದು ಸಕಲ ವಿದ್ಯೆಗಳ ತವರುಮನೆ ಯಾಗಿತ್ತೆಂದು ತಿಳಿದುಬರುತ್ತದೆ. ಅದು ನಿರ್ಗತಿಕರ ಊಟದ ಮನೆಯಾಗಿ, ರೋಗಿ ಗಳ ಆರೈಕೆಯ ಮನೆಯಾಗಿ, ಭಿಕ್ಷುಕರಿಗೆ ಸಹಾಯವನ್ನು ನೀಡುವ ನಿವಾಸವಾಗಿ, ವಿವಿಧ ಕಲೆಗಾರರ ಬೀಡಾಗಿ, ಧಾರ್ಮಿಕ ಕ್ರಿಯೆಗಳ ಕೇಂದ್ರವಾಗಿ ಶೋಭಿಸುತ್ತಿ ತ್ತೆಂದು ತಿಳಿಯುತ್ತದೆ. ಇದರಿಂದ ಹಾಗೂ ಶಾಸನಗಳಲ್ಲಿ ಬರುವ ಇನ್ನುಳಿದ ವರ್ಣನೆ ಗಳಿಂದ ಈ ಮಠವು ಅದೆಷ್ಟು ಉಜ್ವಲವಾಗಿತ್ತೆಂಬುದನ್ನು ಊಹಿಸಬಹುದು. ಈ ಉಜ್ವಲ ಸಂಸ್ಥೆಯನ್ನೊಳಗೊಂಡ ಬಳ್ಳಿಗಾವಿಯು ಕೂಡ ಉಜ್ವಲವೇ ಸರಿ.

ಕಲಚೂರ್ಯ ಬಿಜ್ಜಳನ ಕಾಲದ ಶಾಸನಗಳಲ್ಲಿ ಈ ಊರು ಅನೇಕ ಸಲ ಉಕ್ತವಾಗಿದೆ. ದಂಡಯಾತ್ರೆಯ ಕಾಲಕ್ಕೆ ರಾಜರು ಅಲ್ಲಿ ಬೀಡು ಬಿಡುತ್ತಿದ್ದರೆಂದು ಹೇಳಿದೆ. ಅದರಂತೆ ಇಲ್ಲಿ ಬಿಜ್ಜಳ ಅರಸನು ಬೀಡು ಬಿಟ್ಟಾಗ ತನ್ನ ಅಧಿಕಾರಿಯ ಪ್ರಾರ್ಥನೆಯ ಮೇರೆಗೆ ಇಲ್ಲಿ ಧರ್ಮಕಾರ್ಯ ನಡೆಯಿಸಿದನೆಂದೂ ಕೋಡಿಯ ಮಠಕ್ಕಾಗಿ ಕೆಲವು ಊರುಗಳನ್ನು ದಾನವಾಗಿ ಕೊಟ್ಟನೆಂದೂ ಒಂದು ಶಾಸನದಲ್ಲಿ ಉಕ್ತವಾಗಿದೆ. ಶಿಕಾರಿಪುರದ ೧೨೩ ನೆಯ ಶಾಸನದಲ್ಲಿ ಕೇಶವಪುರವು ಹೀಗೆ ವರ್ಣಿಸಲ್ಪಟ್ಟಿದೆ:—

ಇದು ಕೃತಕಲ್ಪ ಜನ್ಮನಿಲಯಂ ದಿಟಮಿಂತಿದು ವಿಶ್ವವೇದದ ।
ಭ್ಯುದಯನಿವಾಸಮಿಂತಿದು ಪವಿತ್ರ ಚರಿತ್ರಗುಣಾಕರಂ ಸಮಂ ।
ತಿದು ಘನ ಪುಣ್ಯಸಂಪದನಿಕೇತನಮೆಂಬಿನಮೊಪ್ಪಿತೋ ।
ರ್ಪುದು ಸಲೆ ವೀರಕೇಶವಪುರಂ ಧರಣೀನವರತ್ನನೂಪುರಂ ॥

ಈ ಕೇಶವಪುರವು ಬಳ್ಳಿಗಾವಿಯ ಒಂದು ಭಾಗವೇ ಆಗಿರಬೇಕು.

ಬಳ್ಳಿಗಾವಿಯು ಶಾಸನಗಳಲ್ಲಿ ಅನಾದಿರಾಜಧಾನಿ, ಪಟ್ಟಣಗಳ ತವರುಮನೆ ಎಂದು ಉಕ್ತವಾಗಿದ್ದರೂ ಕೂಡ ಅದನ್ನು ನಾವು ಗುಡಿ-ಮಠಗಳ ಪಟ್ಟಣವೆಂದು ಯಥಾರ್ಥವಾಗಿ ಕರೆಯಬಹುದಾಗಿದೆ. ಈಗ ಈ ಹಳ್ಳಿಯಲ್ಲಿಯ ಜನರು ಪ್ರಾಚೀನ ಗುಡಿಗಳ ಕಲ್ಲುಗಳನ್ನೂ ಒಡೆದ ವಿಗ್ರಹಗಳನ್ನೂ ತಮ್ಮ ಮನೆಗಳಿಗಾಗಿ ಉಪಯೋಗಿಸಿ ಕೊಂಡಿದ್ದಾರೆ. ಈಗಲೂ ಕೂಡ ಬಳ್ಳಿಗಾವಿಯಲ್ಲಿ—

೧. ಕೇದಾರೇಶ್ವರ ಗುಡಿ
೨. ಪಂಚಲಿಂಗನ ಗುಡಿ
೩. ತ್ರಿಪುರಾಂತಕ ಗುಡಿ
೪. ಸೋಮೇಶ್ವರ ಗುಡಿ

ಎಂಬ ಮುಖ್ಯ ನಾಲ್ಕು ಗುಡಿಗಳೂ ಅವುಗಳಿಗೆ ಹೊಂದಿಕೊಂಡಿರುವ ಇನ್ನೂ ಎಷ್ಟೋ ಸಣ್ಣ ಗುಡಿಗಳೂ ಅಲ್ಲಲ್ಲಿ ಬಿದ್ದ ವಿಗ್ರಹಗಳೂ ಇವೆ. ಈ ಪಟ್ಟಣವು ವೀರ ಶೈವ ಧರ್ಮಜಾಗ್ರತಿಯ ಕೇಂದ್ರವಾಗಿತ್ತೆಂದು ಹಿಂದೆ ಹೇಳಿದೆಯಷ್ಟೇ. ಆದರೆ ಇದು ಜೈನ, ಬೌದ್ಧ ಧರ್ಮಗಳಿಗೂ ಕಾರ್ಯರಂಗವಾಗಿರಬೇಕು. ಇಲ್ಲಿ ಒಂದು ದೊಡ್ಡ ದಾದ ಜೈನ ಮೂರ್ತಿಯೂ, ಅಲ್ಲಲ್ಲಿ ಸಣ್ಣ ಜೈನ ವಿಗ್ರಹಗಳೂ ಕಂಡುಬರುತ್ತವೆ. ಹಾಗೂ ಇಲ್ಲಿ ಒಂದು ಜೈನ ಬಸದಿ ಇತ್ತೆಂದು ತಿಳಿದು ಬರುತ್ತದೆ. ಇದರಿಂದ ಜೈನ ಧರ್ಮದವರಿಗೂ ಇದು ಆವಾಸವಾಗಿತ್ತೆಂದು ಹೇಳಬಹುದು. ಮತ್ತು ಬಳ್ಳಿಗಾವಿಯು ಬೌದ್ಧ ಧರ್ಮಪ್ರಸಾರದ ಕೇಂದ್ರವು ಆಗಿತ್ತೆಂದು ಊಹಿಸಲಿಕ್ಕೆ ಆಸ್ಪದವಿದೆ. ನಾಗಿ ಯಕ್ಕನೆಂಬ ಬೌದ್ಧ ಭಿಕ್ಷುಕಳು ಇಲ್ಲಿ ತಾರಾದೇವಿಯ ಪ್ರತಿಷ್ಠಾಪನೆ ಮಾಡಿದಳೆಂದು ಶಾಸನಗಳಲ್ಲಿ ಉಕ್ತವಾಗಿದೆ. ಈಗ ಈ ಊರಿನ ಜಡ್ಡಿ ಕೆರೆಯ ಹತ್ತರ ತಾರಾಭಗ ವತಿಯ ಮೂರ್ತಿಯು ತೋರಿಸಲ್ಪಡುತ್ತದೆ. ಇಲ್ಲಿ ಒಂದು ಬೌದ್ಧಾಲಯವೂ ಇತ್ತೆಂದು ತಿಳಿಯುತ್ತಿದೆ.

ಬಳ್ಳಿಗಾವಿಯು ಕನ್ನಡಿಗರ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಅನೇಕ ದೃಷ್ಟಿ ಯಿಂದ ಸೂಚಿಸುವಂತಿದೆ. ಇಲ್ಲಿಯ ಶೈವ, ವೈಷ್ಣವ, ಜೈನ, ಬೌದ್ಧ ದೇವಸ್ಥಾನಗಳ ಮೂಲಕ ಕನ್ನಡಿಗರ ಧಾರ್ಮಿಕ ಸಹಿಷ್ಣುತೆಯ ಪರಿಚಯವಾಗುತ್ತದೆ. ಈ ಊರಿನಲ್ಲಿ

ಈಗಲೂ ನಯನಮನೋಹರವಾಗಿ, ವಿಸ್ತಾರವಾಗಿ, ತಾವರೆಗಳಿಂದ ತುಂಬಿ ಕಂಗೊಳಿಸುವ ತಾವರಗೆರೆಯು ಕನ್ನಡಿಗರ ರಸಿಕತೆಯ ಕೈಗನ್ನಡಿಯಂತಿದೆ. ಭೈರುಂಡೇಶ್ವರ ಸ್ತಂಭದ ಬಳಿಯಲ್ಲಿಯ ಶೂಲಬ್ರಹ್ಮದ ಕಲ್ಲು ತತ್ತ್ವಕ್ಕಾಗಿ, ಧ್ಯೇಯಕ್ಕಾಗಿ ಜೀವವನ್ನು ತೃಣೀಕರಿಸುವ ಕನ್ನಡಿಗರ ವೈಶಿಷ್ಟ್ಯದ ಗುರುತಾಗಿದೆ. ಕೋಡಿಯ ಮಠದಿಂದ ಧ್ವನಿತವಾಗುವ ಕನ್ನಡರ ವಿಶಾಲ ಹೃದಯ, ಅಪಾರ ಕರ್ತೃತ್ವ ಶಕ್ತಿ ಇವುಗಳ ನೆನಪೂ ಕೂಡ ರೋಮಾಂಚಕಾರಿಯಾಗಿದೆ. ಅಲ್ಲಿ ಇಂದು ಹಾಳು ಗೋಡೆಗಳಿಂದ ಕೂಡಿದ ಕೊಂಪೆಯನ್ನು ಕಂಡವರು ಕನ್ನಡನಾಡಿನ ಈಗಿನ ಹೀನ ಸ್ಥಿತಿಯ ಸ್ಮರಣದಿಂದ ಕಣ್ಣೀರು ಸುರಿಸದೆ ಇರಲಾರರು. ಭೈರವೇಶ್ವರ ಗರುಡ ಸ್ತಂಭದ ಮೊದಲಿನ ಮೂರ್ತಿ ಅಳಿದು ಹೋಗಿರಲು ಆಧುನಿಕರಾದ ಸಿದ್ಧಲಿಂಗ ಶಿಲ್ಪಿಗಳಿಂದ ರಚಿತವಾದ ಕಲಾಪೂರ್ಣ ಹೊಸ ಮೂರ್ತಿಯು ಕನ್ನಡಿಗರ ಪುನರುಜ್ಜೀವನದ ಪ್ರಭಾತ ಕಾಲವನ್ನು ಸೂಚಿಸುವಂತೆ ಇದೆ. ಇಲ್ಲಿಯ ಗುಡಿಗಳಲ್ಲಿಯ ಕೆತ್ತನೆಯ ಕೈವಾಡವು ಕನ್ನಡಿಗರ ಶಿಲ್ಪಕಲೆಯ ವೈಭವವನ್ನು ಸೂಚಿಸುತ್ತ ನಿಂತಿದೆ. ಬಳ್ಳಿಗಾವಿಯು ಇಂದು ಅಳಿದುಳಿದ ಊರಾದರೂ ಕೂಡ ಪ್ರಾಚೀನ ಕನ್ನಡನಾಡಿನ ಸಂಕ್ಷಿಪ್ತ ರೂಪದಂತಿದ್ದು ಕನ್ನಡಿಗರ ಸಂಸ್ಕೃತಿಯ ಕೈಗನ್ನಡಿಯಾಗಿ ಇಂದಿಗೂ ಉಳಿದು ನಿಂತಿದೆಯೆಂದು ಕಂಡುಬರುವಂತಿದೆ.

# ವಿಜಯನಗರ ಸಾಮ್ರಾಜ್ಯದಲ್ಲಿ ಸಂಸ್ಕೃತಿ ಸಂವರ್ಧನ

ಕನ್ನಡಿಗರ ಯಶೋದುಂದುಭಿಯನ್ನು ಮೊಳಗಿಸಿದ ಹೊಯ್ಸಳ ಸಾಮ್ರಾಜ್ಯದಿಂದಲೇ ಹೊರಹೊಮ್ಮಿ, ಕನ್ನಡಿಗರ ಅಭಿಮಾನಧನವಾದ ಮೈಸೂರು ರಾಜ್ಯದಲ್ಲಿ ಅಂತರ್ಗತವಾದ ವಿಜಯನಗರ ಸಾಮ್ರಾಜ್ಯವು ಕನ್ನಡಿಗರ ಹೆಮ್ಮೆಯ ಸೊತ್ತು. ವಿಜಯನಗರದವರು ಹೊಯ್ಸಳರ ಪರಂಪರೆಯನ್ನು ಕಾಯ್ದರು. ಮೈಸೂರ ಅರಸರು ವಿಜಯನಗರ ರಾಜ್ಯದ ಸಾಂಪ್ರದಾಯಗಳನ್ನು ಪಾಲಿಸುತ್ತಿರುವರು. ಆದುದರಿಂದ ಕನ್ನಡಿಗರ ಸಂಸ್ಕೃತಿಪ್ರವಾಹವು ಅವಿಚ್ಛಿನ್ನವಾಗಿ ಪ್ರವಹಿಸುವಂತೆ, ರಭಸದಿಂದ ಬೆಳವಣಿಗೆ ಪಡೆಯುವಂತೆ ಮಾಡಿದ ಶ್ರೇಯಸ್ಸು ವಿಜಯನಗರಕ್ಕೆ ಇದೆ. ವಿಜಯನಗರವು ಕನ್ನಡಿಗರ ಕೊನೆಯ ಸಾಮ್ರಾಜ್ಯ; ಹೆಚ್ಚು ಘನತೆವೆತ್ತ ಸಾಮ್ರಾಜ್ಯ; ಬಹುಕಾಲ ಬೆಳಗಿ ಬೆಳೆದು ಅಳಿದರೂ ಅಳಿಯದ, ಸ್ಮಾರಕವನ್ನು ಉಳಿಸಿದ ಸಾಮ್ರಾಜ್ಯ; ಕನ್ನಡಿಗರು ದಕ್ಷಿಣಭಾರತವನ್ನು ಉಳಿಸುವುದಕ್ಕಾಗಿ ಕಟ್ಟಿದ ರಾಜ್ಯ; ಹಿಂದೂ ಸಂಸ್ಕೃತಿಯನ್ನು ಉಳಿಸಲೆಂದು—ಬೆಳಿಸಲೆಂದು- ಹೊರಟ ಸಾಮ್ರಾಜ್ಯ; ಬರಿಯೆ ಕನ್ನಡಿಗರನ್ನಲ್ಲ, ತೆಲುಗುರನ್ನಲ್ಲ, ತಮಿಳು, ಮರಾಟಿಗರನ್ನು— ಇಡಿಯ ಭರತಖಂಡವನ್ನೇ— ಉಪಕೃತವನ್ನಾಗಿ ಮಾಡಿ ಮೆರೆದ, ಕನ್ನಡಿಗರ ಕೀರ್ತಿಧ್ವಜವನ್ನು ಮೆರೆಯಿಸಿದ "ಎಂದೂ ಮರೆಯದ" ಸಾಮ್ರಾಜ್ಯ; 'ಧರ್ಮರಕ್ಷಣೆಗಾಗಿ ರಾಜ್ಯ, ರಾಜ್ಯದ ರಕ್ಷಣೆಗಾಗಿ ತನು-ಮನ-ಧನ' ಎಂಬ ತತ್ತ್ವಗಳಿಂದಲೇ ಉದಯಿಸಿ, ಆ ತತ್ತ್ವಗಳಿಗಾಗಿಯೇ ಉಳಿದು ಬೆಳೆದು ಕೊನೆಗೆ ಅಳಿದರೂ ಅಳಿಯದ ಸ್ಮೃತಿಗಳನ್ನು ಬಿಟ್ಟು ಹೋದ ರಾಜ್ಯವದು.

ಸಂಸ್ಕೃತಿಸಂವರ್ಧನಕ್ಕೆ ಸಾಮ್ರಾಜ್ಯಬಲವು ಸುಭಗವಾದ ಸಾಧನವೆಂಬುದು ಎಲ್ಲರೂ ಒಪ್ಪತಕ್ಕ ಮಾತು. ಗ್ರೀಕ್, ರೋಮನ್ ರಾಷ್ಟ್ರಗಳು ಈ ಮಾತಿಗೆ ಸಾಕಷ್ಟು ಪುಷ್ಟಿಯನ್ನು ಕೊಡುತ್ತಲಿವೆ. ಮಾನವನ ಬಹುಮುಖ ಬೆಳವಣಿಗೆಗೆ ಅವಕಾಶ-ಅನುಕೂಲ-ಪೋಷಣೆಗಳು ಸಾಮ್ರಾಜ್ಯ ಬಲದಿಂದ ದೊರೆಯುತ್ತವೆ. ಸಾಹಿತ್ಯದ ಇತಿಹಾಸವನ್ನು ಓದುವವರಿಗೂ ಈ ಮಾತು ನಿದರ್ಶನಕ್ಕೆ ಬರುವಂತಿದೆ. ಜಾಗತಿಕ ಸಾಹಿತ್ಯದ ಇತಿಹಾಸದಲ್ಲಿ ಆಗಸ್ಟನ್ ಯುಗ, ಎಲಿಜಾಬೇಥ ಯುಗ, ಗುಪ್ತಯುಗ ಎಂಬ ಕಾಲವಿಭಾಗಗಳು ಸಾಹಿತ್ಯವು ಅರಸರಿಂದ ಪೋಷಣೆಪಡೆದು ಉನ್ನತ ಶಿಖರಕ್ಕೆ ಮುಟ್ಟಿದಾಗಿನ ಚಿನ್ಹಗಳಾಗಿ ಉಳಿದಿವೆ. ಮೇಲಿನ ಯುಗಗಳೊಡನೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯ ವಿಜಯನಗರ ಯುಗವನ್ನೂ ಹೋಲಿಸಿ ನೋಡಬಹುದು. ಕವಿಕಾವ್ಯಪಕ್ಷಪಾತಿಗಳೂ ಪಂಡಿತಪೋಷಕರೂ ಕಲೆಯ ಅಭಿಮಾನಿಗಳೂ ಆದ ವಿಜಯನಗರದ ರಾಯರುಗಳಿಂದ ಸಾಹಿತ್ಯಪೋಷಣೆ, ವಿದ್ಯಾವರ್ಧನ, ಕಲೆಯ ಬೆಳವಣಿಗೆ ಇವು ರಭಸದಿಂದ ನಡೆದುವೆಂದು ಹೇಳಬಹುದು. ಮಾನವನ ಚಿತ್ತ-ಬುದ್ಧಿ - ಮನಸ್ಸು - ಅಹಂಕಾರ ಇವುಗಳೆಲ್ಲ ವಿಕಾಸ ಪಡೆಯುತ್ತಿರಬೇಕು. ಅದುವೇ ಸಜೀವ ಸಂಸ್ಕೃತಿಯ ಲಕ್ಷಣ. ಈ ಕಾರ್ಯವು ವಿಜಯನಗರ ಸಾಮ್ರಾಜ್ಯದಲ್ಲಿ ಹೆಚ್ಚಾಗಿ ನೆರವೇರಿತು. ಅದುವೆ ವಿಜಯನಗರದ ಸಾಮ್ರಾಜ್ಯದ ಸಾರ್ಥಕ್ಯ; ಕನ್ನಡಿಗರ ಹೆಮ್ಮೆ; ಭಾರತೀಯರ ಪುಣ್ಯ.

ವಿಜಯನಗರದ ಕಾಲಕ್ಕೆ ಕನ್ನಡದ ಸಾಮ್ರಾಜ್ಯವು ವಿಶೇಷ ವಿಸ್ತಾರವನ್ನು ಪಡೆಯಿತು. ವಿಜಯನಗರದ ವಿಜಯಧ್ವಜವು ಬಹುದೂರ ಮೆರೆಯಿತು. ಪರಕೀಯ ಹಾಗೂ ನೆರೆಯ ಶತ್ರುಗಳಿಂದ ತನ್ನನ್ನು ತಾನು ರಕ್ಷಿಸಿಕೊಂಡು, ದುರ್ಭೇದ್ಯ ಕೋಟೆ-ಕೊತ್ತಲುಗಳನ್ನು ಕಟ್ಟಿಸಿಕೊಂಡಿತೆಂಬ ಮಾತು ಅಹಂಕಾರದ ಬೆಳವಣಿಗೆಯ ಗುರುತಾಗಿದೆ. ರಾಜ್ಯವಿಸ್ತರಣವು ಯಾವಾಗಲೂ ನಡೆಯಬಹುದಾದ ಕಾರ್ಯವೇನೋ ಸರಿ; ಅದರಂತೆ ವಿಜಯನಗರವು ತನ್ನ ಕಾರ್ಯವನ್ನು ನಡೆಯಿಸಿರಬೇಕು. ಆದರೆ ಇದರಲ್ಲಿ ಒಂದು ವೈಶಿಷ್ಟ್ಯವಿದೆ. ಅದುವೆ ಗಣನೀಯವಾದುದು. ವಿಜಯನಗರದ ರಾಜ್ಯಸ್ಥಾಪನೆಯಾದುದು, ಬೆಳೆದುದು, ಉಳಿದುದು—ಕೊನೆಗೆ ಅಳಿದುದು ಕೂಡ—ಒಂದು ಮಹೋನ್ನತ ಉದ್ದೇಶಕ್ಕಾಗಿ. ಅದುವೆಂದರೆ ಧರ್ಮರಕ್ಷಣೆ. ಭಾರತೀಯ ಹೃದಯರಂಗದಲ್ಲಿ ಧರ್ಮಕ್ಕೆ ಉನ್ನತವಾದ ಸ್ಥಾನವಿದೆ. ಆ ಉನ್ನತ ಫಲಪ್ರಾಪ್ತಿಗಾಗಿಯೇ ವಿಜಯನಗರವು ಹುಟ್ಟಿ ಉಳಿದು ಬೆಳೆದು ಅಳಿಯಿತು. ಪಾರಮಾರ್ಥಿಕ ವಿಚಾರಗಳಲ್ಲಿ ಮಗ್ನರಾದವರೂ ವಿದ್ಯಾರ್ಜನೆಗೆ ತಮ್ಮನ್ನು ಮಾರಿಕೊಂಡವರೂ ಧರ್ಮರಕ್ಷಣೆಯ ಆವಶ್ಯಕತೆ ಉಂಟಾದಾಗ,

ಏಳು ಸಾಯಣ ಕಟ್ಟು ಗ್ರಂಥವ
ನೇಳು ಪಂಪಾ ಕ್ಷೇತ್ರಕೆ ?
ಗಾಳಿಗಂಟುಗಳೋದಿದೇತಕೆ
ಏಳು ಈ ಕ್ಷಣ ಈ ಮಾತ್ರಕೆ !

ಎಂಬುದಾಗಿ ಹೇಳಬೇಕಾದ ಸಂದರ್ಭ ಒದಗಿರಬೇಕು.

"The Empire was founded for protection of Dharma. In the whole range of South Indian History an instance of an Empire founded with the purpose of giving protection to a religion irrespective of different sects has yet to be discovered. It is this aspect of the foundation that makes the history of Vijayanagar so unique." ( ಧರ್ಮರಕ್ಷಣೆಗಾಗಿಯೇ ಸಾಮ್ರಾಜ್ಯದ ಸ್ಥಾಪನೆಯಾಯಿತು. ದಕ್ಷಿಣಭಾರತದ ಇತಿಹಾಸದಲ್ಲಿ ಜಾತಿಪಂಥಗಳನ್ನುಳಿದು ಕೇವಲ ಧರ್ಮರಕ್ಷಣೆಯನ್ನೇ ಉದ್ದೇಶವಾಗಿಟ್ಟುಕೊಂಡ ಸಾಮ್ರಾಜ್ಯ ಬೇರೊಂದು ಇನ್ನೂ ಕಂಡುಬಂದಿಲ್ಲ. ಇದುವೇ ವಿಜಯನಗರ ಸ್ಥಾಪನೆಯ ವೈಶಿಷ್ಟ್ಯ. ) ಎಂಬುದಾಗಿ ಕೆಲವರು ಹೇಳಿದ್ದು ಯಥಾರ್ಥವಾಗಿದೆ. ೧೩೪೬ ರಲ್ಲಿ ವಿಜಯನಗರದ ಸ್ಮಾರಕವೆಂದು ಬುಕ್ಕರಾಯನು ಶೃಂಗೇರಿಯ ಪೀಠಕ್ಕೆ ದತ್ತಿ ಕೊಟ್ಟದ್ದು ಶೃಂಗೇರಿಯ ಶಾಸನದಿಂದ ತಿಳಿದುಬರುತ್ತದೆ. ಆ ಸ್ಮಾರಕದತ್ತಿಯು ಯುದ್ಧದ ವಿಜಯೋನ್ಮತ್ತತೆಯನ್ನು ಸೂಚಿಸುವುದಿಲ್ಲ; ಧರ್ಮರಾಜ್ಯವನ್ನು ಪಡೆದುದರ ಸಂತೋಷದ ಸ್ಮಾರಕವಾಗಿದೆ. ವಿಜಯನಗರದ ರಾಜರು ಧರ್ಮದ ಪ್ರತಿಪಾಲಕರೆಂದು ಹೇಳಿಕೊಳ್ಳುವುದರಲ್ಲಿ ಹೆಮ್ಮೆಯನ್ನೂ ಪ್ರೀತಿಯನ್ನೂ ತೋರಿಸಿದ್ದಾರೆ. 'ವೀರಕೃಷ್ಣರಾಯ ಚರಿತೆ'ಯ ಕೃಷ್ಣರಾಯನು ದಕ್ಷಿಣದ ಭಾಗಗಳನ್ನೆಲ್ಲ ಕೈವಶಮಾಡಿಕೊಂಡು ವಿಜಯನಗರವನ್ನು ವಿಸ್ತರಿಸಿದನು. ಆದರೆ ಅವನ ಕೀರ್ತಿ ಇಷ್ಟರ ಮೇಲೆಯೇ ಅವಲಂಬಿಸಿಲ್ಲ. ಮುಸಲ್ಮಾನರ ಕಾಲಕ್ಕೆ ನೆಲಕ್ಕುರುಳಿದ ಶ್ರೀರಂಗಮ್‌ದ ಹಾಗೂ ಮಧುರೆಯ ಗುಡಿಗಳ ಪುನರುಜ್ಜೀವನ ಮಾಡಿ ಕೃತಾರ್ಥನಾಗಿದ್ದಾನೆ. ಡಾ. ಕೃಷ್ಣಸ್ವಾಮಿ ಅಯ್ಯಂಗಾರರು ಈ ಸಂಬಂಧವಾಗಿ ಹೀಗೆ ಹೇಳುತ್ತಾರೆ:— "These events give unmistakable indication of the actual purpose of those who fought and fought hard for Cause and Country throughout." ( ಕೊನೆಯುವರೆಗೆ ದೇಶಕ್ಕಾಗಿ, ಧ್ಯೇಯಕ್ಕಾಗಿ ಕಡುತರವಾಗಿ ಹೆಣಗಾಡಿದವರ ನಿಜವಾದ ಉದ್ದೇಶವೇನಿರಬಹುದೆಂಬುದನ್ನು ಇಂತಹ ಘಟನೆಗಳಿಂದ ಅಸ್ಪಷ್ಟವಲ್ಲದ ರೀತಿಯಲ್ಲಿ ಕಂಡುಕೊಳ್ಳಬಹುದು. ) ಈ ಮಾತುಗಳಲ್ಲಿ ಧರ್ಮರಾಜ್ಯವಾದ ವಿಜಯನಗರದ ವೈಶಿಷ್ಟ್ಯವು ಕಂಡುಬರುತ್ತದೆ.

ತನ್ನ ರಾಜ್ಯದಲ್ಲಿ ನಡೆದ ಜೈನ-ವೈಷ್ಣವರ ಜಗಳಗಳನ್ನು ಬುಕ್ಕರಾಜನು

ವಿಶೇಷ ಕೌಶಲ್ಯದಿಂದ ತೀರಿಸಿದ ಸಂಗತಿಯು ಶ್ರವಣಬೆಳಗೊಳ ಶಾಸನದಲ್ಲಿ ಉಕ್ತ ವಾಗಿದೆ. (E. C. II S. B. 136 1368 A. D.). ಇದರಲ್ಲಿ ವಿಜಯನಗರದ ರಾಯರ ವಿಶಾಲಹೃದಯದ ಸಾಕ್ಷಿ ಇದೆ. ಮಾನವನ ಬೆಳವಣಿಗೆಗೆ ಬೇಕಾದ ಅವ ಕಾಶವನ್ನು ಕಲ್ಪಿಸಿಕೊಡುವ ಧರ್ಮಬುದ್ಧಿ ಇದೆ. ಕರ್ನಾಟಕದ ಕೆಲವು ಶಾಸನಗಳು ಕರ್ನಾಟಕ ಸಂಸ್ಕೃತಿಯ ಕೀರ್ತಿಧ್ವಜವನ್ನು ಎತ್ತಿ ಹಿಡಿಯುವಂತಿವೆ. ಅಂತಹ ಶಾಸನಗಳಲ್ಲಿ ಇದೂ ಒಂದು ಎಂದು ಹೇಳಬಹುದು. ಜೈನ-ಶ್ರೀವೈಷ್ಣವರ ವಾದವು ಸಂತೋಷಕರವಾಗಿ ಮುಗಿದ ನಂತರ ಬಸವಿಶೆಟ್ಟಿಯು ಬುಕ್ಕರಾಯನಿಗೆ ಬಿನ್ನಹ ಮಾಡಿಕೊಂಡು, ತಾತಯ್ಯನನ್ನು ಕರೆಯಿಸಿಕೊಂಡು "ಸಂಘನಾಯಕ" ಎಂಬ ಬಿರುದನ್ನು ಕೊಟ್ಟ ಸಂಗತಿಯು ತಿಳಿಯುತ್ತದೆ. ಧಾರ್ಮಿಕ ಸಹಿಷ್ಣುತೆಯು ಕನ್ನಡ ಅರಸರಲ್ಲಿ ವಿಶೇಷವಾಗಿ ಕಂಡುಬರುತ್ತದೆ. ವಿಜಯನಗರದ ರಾಜರು ಈ ವೈಶಿಷ್ಟ್ಯ ವನ್ನು ಸಾಕಷ್ಟು ಕಾಯ್ದಿದ್ದಾರೆ. ಎರಡನೆಯ ಹರಿಹರನು 'ವರ್ಣಾಶ್ರಮ ಪಾಲಕ' 'ವೇದನಿಯಮ ಪಾಲಕ' 'ವೇದಭಾಷ್ಯ ಪ್ರಕಾಶ' ಎಂಬ ಬಿರುದುಗಳನ್ನು ಹೆಮ್ಮೆಯಿಂದ ಧರಿಸಿಕೊಂಡು, ಬಿರುದುಗಳು ಸಾರ್ಥಕವಾಗುವಂತೆ ರಾಜ್ಯವಾಳಿದನು.

ಕೃಷ್ಣದೇವರಾಯನಂತೂ ವಿಜಯನಗರದ ಉತ್ತರಭಾಗದಲ್ಲಿ ಸಾಧ್ಯವಾದಲ್ಲೆಲ್ಲ –ಶಕ್ಯವಾದ ದೇವತೆಗಳಿಗೆಲ್ಲ–ಗುಡಿ ಕಟ್ಟಿಸಿದನೆಂಬ ಪ್ರತೀತಿ ಇದೆ. ಆತನು ಓರಿಸಾದ ಅಭಿಯೋಗದಿಂದ ಬಂದ ನಂತರ ಮುಸಲ್ಮಾನರ ಆಘಾತದಿಂದ ಉರುಳಿದ ದಕ್ಷಿಣ ಹಿಂದುಸ್ತಾನದ ಗುಡಿಗಳ ಉದ್ಧಾರಕ್ಕೆಂದೇ ಹತ್ತು ಸಾವಿರ ಹೊನ್ನಿನ ನಾಣ್ಯಗಳನ್ನು ತೆಗೆದಿಟ್ಟನು. ಉದಯಗಿರಿ ಕೋಟೆಯನ್ನು ತೆಗೆದುಕೊಂಡ ನಂತರ, ಬಾಲಕೃಷ್ಣನ ಮೂರ್ತಿಯನ್ನು ತಂದು ರಾಜಧಾನಿಯಲ್ಲಿ ಸ್ಥಾಪಿಸಿ ಗುಡಿಯನ್ನು ಕಟ್ಟಿಸಿದನು. ಪಂಢರ ಪುರದ ವಿಠ್ಠಲನಿಗಾಗಿ ಭವ್ಯ ದೇವಾಲಯವನ್ನು ಕಟ್ಟಿಸಿ, ತನ್ನ ಧರ್ಮದ ಆಳಿಕೆಯ ಧ್ವಜವನ್ನು ನೆಟ್ಟನು. ಗುಡಿಗಳೆಂದರೆ ಕನ್ನಡಿಗರಿಗೆ ಪಂಚಪ್ರಾಣ. ಗುಡಿ ಕಟ್ಟಿಸು ವುದು ಕನ್ನಡ ಸಂಸ್ಕೃತಿಯ ವಿಶಿಷ್ಟ ಹೆಗ್ಗುರುತಾಗಿದೆ. ದಕ್ಷಿಣ ಹಿಂದುಸ್ತಾನದ ಈ ಗುಡಿಗಳು ಹಿಂದೂ ಜೀವನದ ಬಹು ಮುಖ್ಯ ಭಾಗವಾದ ಸಜೀವ ಸಂಸ್ಥೆಗಳಾಗಿ ಪರಿಣ ಮಿಸಿದುವೆಂದು ಡಾ. ಕೃಷ್ಣಸ್ವಾಮಿ ಅಯ್ಯಂಗಾರರು ಹೇಳುವ ಮಾತು ಗಮನಾರ್ಹ ವಾಗಿದೆ. ಈ ಗುಡಿಗಳನ್ನು ಕಟ್ಟಿಸುವುದರಲ್ಲಿ ಒಂದು ಮಾನಸಿಕ ಔನ್ನತ್ಯವು ಕಂಡು ಬರುತ್ತದೆ. ಕನ್ನಡಿಗರ ಸಂಸ್ಕೃತಿಯ ಇತಿಹಾಸವನ್ನು ಅರಿಯುವುದಕ್ಕೆ, ಬಹು ಪ್ರಬಲ ಸಾಧನಗಳು ಈ ಗುಡಿಗಳೆಂದೇ ಹೇಳಬೇಕು. ವಿಜಯನಗರದ ಅರಸರನ್ನು ಅನುಸರಿಸಿ ಸಾಮಂತರು ಸರದಾರರು ಕೂಡ ಧರ್ಮಪೋಷಣೆಯನ್ನು ನಡೆಯಿಸಿದರು. ಲಕ್ಷ್ಮರಸ ನೆಂಬವನು ಹೊಳೆನರಸೀಪುರದ ಲಕ್ಷ್ಮೀ ನರಸಿಂಹನ ಅಭಿಷೇಕಕ್ಕೆ ತೆಪ್ಪೋತ್ಸವ-

ರಥೋತ್ಸವಗಳಿಗಾಗಿ ಮಂಟಪ ಕಟ್ಟಿಸಿದ್ದು ತಿಳಿಯಬರುತ್ತದೆ. ವಿಜಯನಗರದ ಕಾಲದ ಶಾಸನಗಳನ್ನು ನಿರೀಕ್ಷಿಸುವವರು ಇಂತಹ ಅನೇಕ ಸಂಗತಿಗಳನ್ನು ಕಾಣಬಹುದು. ಮಹಾನವಮಿ, ವಸಂತೋತ್ಸವ, ದೀಪೋತ್ಸವ, ರಥೋತ್ಸವ ಮುಂತಾದ ಉತ್ಸವಗಳು ವಿಜಯನಗರದ ರಾಜ್ಯದಲ್ಲಿ ವಿಜೃಂಭಣೆಯಿಂದ ನಡೆದು ಜನತೆಯ ಮನಸ್ಸಿಗೆ, ಆತ್ಮಕ್ಕೆ ಹಬ್ಬವನ್ನುಂಟು ಮಾಡುತ್ತಿದ್ದುವು. ಇಂತಹ ಉತ್ಸವಗಳಿಗಾಗಿ ರಾಜರೂ ಪ್ರಜರೂ ಉದಾರ ಹಸ್ತದಿಂದ ಸಹಾಯ ಮಾಡುತ್ತಿದ್ದರೆಂಬುದಕ್ಕೆ ಅನೇಕ ಶಾಸನಗಳೇ ಸಾಕ್ಷಿ. ೧೪೯೬ನೆಯ ವರುಷದ ಒಂದು ಶಾಸನದಿಂದ ನರಸಯ್ಯ ಮಹಾದೇವ ಅರಸರು ರಥೋತ್ಸವಕ್ಕೆ ೨೮ ಗದ್ಯಾಣಗಳ ವಂತಿಗೆ ಕೊಟ್ಟದ್ದು ಕಂಡುಬರುತ್ತದೆ. ಶ್ರೀರಂಗಪುರ ಶ್ರೀರಂಗನಾಥನ ವಸಂತೋತ್ಸವಕ್ಕೆ ಶ್ರೀವೈಷ್ಣವರು ಹೊನ್ನುಗಳನ್ನು ಸಂಗ್ರಹಿಸಿದ್ದು ೧೪೩೮ರ ಒಂದು ಶಾಸನದಲ್ಲಿ ಉಕ್ತವಾಗಿದೆ. ಇಳ್ಳಾಯತ್ತ ಕುಡಿಯ ವ್ಯಾಪಾರಸ್ಥರು ಪೆರಲ್ಲೂರು ಹಳ್ಳಿಯ ಉತ್ಪನ್ನವನ್ನು ವಾರ್ಷಿಕ ಉತ್ಸವಕ್ಕಾಗಿ ಕೊಟ್ಟಂತೆ ತಿಳಿಯುತ್ತದೆ.

೧೫೪೮ ರಲ್ಲಿ ಚಿಕ್ಕ ಸಿಂಗಪ್ಪನಾಯಕನು ಶಿವರಾತ್ರಿಯ ಉತ್ಸವಕ್ಕೆ ಚಿಕ್ಕನಾಡುವಳ್ಳಿ, ಗೋವಿಂದನ ಹಳ್ಳಿಗಳನ್ನು ದತ್ತಿಕೊಟ್ಟನು. ಜೈನರ ಗೊಮ್ಮಟಾಭಿಷೇಕವೂ ಉತ್ಸಾಹದಿಂದ ನಡೆಯುತ್ತಿತ್ತು ಈ ಕೆಲವು ನಿದರ್ಶನಗಳಿಂದ ಆ ಕಾಲದಲ್ಲಿ ಕಂಡುಬರುವ ಹೃದಯವೈಶಾಲ್ಯವು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಶ್ರೀವೈಷ್ಣವರು, ಶೈವರು, ಜೈನರು ತಮ್ಮ ತಮ್ಮ ಧಾರ್ಮಿಕ ಉತ್ಸವಗಳನ್ನು ಸರಿಯಾಗಿ ಸಾಗಿಸಿಕೊಂಡು, ಮನಸ್ಸಿಗೆ ನೆಮ್ಮದಿಯನ್ನು, ಆತ್ಮಕ್ಕೆ ಉನ್ನತಿಯನ್ನು ತಂದುಕೊಳ್ಳುತ್ತಿದ್ದರು. ಗುಡಿ ಕಟ್ಟಿಸುವುದರಲ್ಲಿ ಕಂಡುಬರುವ ವಿತರಣವೃತ್ತಿ, ಉತ್ಸವಗಳಿಗೆ ದತ್ತಿಕೊಡುವ ಸಾಂಪ್ರದಾಯದಲ್ಲಿ ಕಂಡುಬರುವ ಭೋಗಪ್ರವೃತ್ತಿ ಇವುಗಳ ಸಮನ್ವಯದ ಸುಂದರ ಚಿತ್ರವು ನಿಜವಾಗಿಯೂ ಗಮನಾರ್ಹವಾಗಿದೆ.

ವಿಜಯನಗರದ ರಾಯರ ವಿದ್ಯಾಪಕ್ಷಪಾತವು ಕನ್ನಡಿಗರ-ಅಲ್ಲ, ದಾಕ್ಷಿಣಾತ್ಯರ-ಮನೆಮಾತಾಗಿದೆ. ವಿಜಯನಗರಿಗೆ ವಿದ್ಯಾನಗರವೆಂಬ ಹೆಸರಿದ್ದುದು ಅಲಂಕಾರಿಕವಲ್ಲ; ಕೇವಲ ಯಥಾರ್ಥ. ವಿದ್ಯಾದೇವತೆಗೆ ನಿವಾಸವಾಗಿದ್ದ ಅನೇಕ ಆಚಾರ್ಯರು ವಿಜಯನಗರದ ಪೋಷಣೆಯಲ್ಲಿದ್ದರು. ಮಾಧವ, ಸಾಯಣ, ವಿದ್ಯಾರಣ್ಯರ ಹೆಸರುಗಳಂತೂ ನಮ್ಮೆಲ್ಲರಿಗೆ ಚಿರಪರಿಚಿತವಾಗಿವೆ. ರಾಯರ ಧಾರ್ಮಿಕ ವೃತ್ತಿಯು ವಿದ್ಯಾಪೋಷಣೆಯಾಗಿಯೂ ಪರಿಣಮಿಸಿತು. ಡಾ. ಕೃಷ್ಣಸ್ವಾಮಿ ಅಯ್ಯಂಗಾರರು "This religious patronage widened into patronage of learning and literature." ( ಈ ಧರ್ಮಪೋಷಣೆಯು ವಿದ್ಯಾಪೋಷಣೆ-ಸಾಹಿತ್ಯಪೋಷಣೆಗಳಲ್ಲಿ ಪರಿ

ಣಮಿಸಿತು.) ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಧರ್ಮವನ್ನು ರಕ್ಷಿಸುವುದು, ಜೊತೆಗೆ ಭಾರತೀಯ ಪ್ರಾಚೀನ ವಿದ್ಯೆಯನ್ನು ಪೋಷಿಸುವುದು ಈ ರಾಜ್ಯಸ್ಥಾಪಕರ ಉದ್ದೇಶವೇ ಆಗಿತ್ತು. ವಿವಿಧ ಭಾಗಗಳ ಪಂಡಿತರನ್ನೆಲ್ಲ ಸೇರಿಸಿ, ಅಳಿದು ಹೋಗುತ್ತಿದ್ದ ಭಾರತೀಯ ಪ್ರಾಚೀನ ವಿದ್ಯೆಯನ್ನು ಉಳಿಸುವುದಕ್ಕಾಗಿ ರಾಯರು ಪ್ರಯತ್ನಿಸಿದರು. ರಾಯರ ವಿದ್ಯಾಪೋಷಣೆಗೆ ನಿದರ್ಶನಗಳು ಬೇಕಿದ್ದರೆ ಕೆಳಗಿನ ಕೆಲವು ಸಂಗತಿಗಳನ್ನು ಗಮನಿಸಬೇಕು.

(*a*) ಎರಡನೆಯ ಹರಿಹರನಿಗೆ "ವಿದ್ಯಾವಿಲಾಸ" ಎಂಬ ಬಿರುದು ಇದ್ದಿತು. ಅದು ಯಥಾರ್ಥವಾದುದೇ ಆಗಿತ್ತು.

(*b*) ಸಾಳ್ವಾಭ್ಯುದಯದಲ್ಲಿ ಸಾಳುವ ನರಸಿಂಹನ ವಿಚಾರದಲ್ಲಿ ಹೀಗೆ ಹೇಳಲ್ಪಟ್ಟಿದೆ:—

"ರಾಶಿರಾಶಿಯಾಗಿ ಕಾಣಿಕೆಯ ರೂಪದಿಂದ ಬರುತ್ತಿದ್ದ ಹೊನ್ನನ್ನು ಶೇಖರಿಸಿ ಅವಲೋಕನ ಮಾತ್ರದಿಂದ ತೃಪ್ತಿಯನ್ನು ಪಡೆದು, ಅದನ್ನು ಕವಿಗಳ, ವಿದ್ವಾಂಸರ ಪೋಷಣೆಗಾಗಿ ಸಾಗಿಸುತ್ತಿದ್ದ ಧನ್ಯ ನರಪತಿಗಳು ವಿಜಯನಗರದಲ್ಲಿದ್ದರು."

(c) ಒಂದು ಶಾಸನದಲ್ಲಿ ಕೃಷ್ಣದೇವರಾಯನು ವಿದ್ವಾಂಸರಿಗೆ ದಾನ ಮಾಡುವುದರಲ್ಲಿಯೇ ಹೆಮ್ಮೆಪಡುತ್ತಿದ್ದನೆಂದು ಹೇಳಿದೆ.

(d) ಅಚ್ಯುತರಾಯನು ವಿದ್ವಾಂಸರಿಗೆ ನವಕೋಟಿ ನಾರಾಯಣನಾಗಿದ್ದನು.

(e) ರಾಮರಾಜನ ಸಂಬಂಧವಾಗಿ ಹೀಗೆ ಹೇಳಲ್ಪಟ್ಟಿದೆ:—

"ವಿಜಯೀಂದ್ರಯೋಗಿ ವಿದ್ಯಾಸುಹೃದ್ಯಸ್ವಕುಲ ಪ್ರಭಾವಃ ರತ್ನಾಭಿಷೇಕಂ ಕಿಲರಾಮರಾಜಾತ್."

(f) ತಿರುಮಲನು "ವಿದ್ಯಾಭೋಜ"ನಾಗಿದ್ದನು.

(g) 'ಕರ್ನಾಟಕ ಶಬ್ದಾನುಶಾಸನ'ವು ಶ್ರೀರಂಗ ನರಪತಿಯ ಪ್ರೇರಣೆಯಿಂದ ಬರೆಯಲ್ಪಟ್ಟಿತೆಂದು ಪ್ರತೀತಿ ಇದೆ. ಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜ ಪಂಡಿತರಿದ್ದರು.

(h) ವಲ್ಲಭಾಚಾರ್ಯ ಮುಂತಾದ ಪರನಾಡಿನ ಪಂಡಿತರು ವಿದ್ಯಾನಗರಿಗೆ ಆಕರ್ಷಿಸಲ್ಪಟ್ಟರು.

(i) ವಸಂತೋತ್ಸವದಲ್ಲಿ ಕೃಷ್ಣರಾಯನು ರಾಣಿಯರೊಡಗೂಡಿ ತನ್ನ ಕವಿಗಳ ಕಾವ್ಯಗಳನ್ನು ಕೇಳುತ್ತಿದ್ದನು.

(j) ಇಮ್ಮಡಿ ನರಸಿಂಹನ ಆಸ್ಥಾನಕ್ಕೆ ಒಮ್ಮೆ ನಾಲ್ವತ್ತು ಜನ ವಿದ್ವಾಂಸರು ಬಂದರು. ಆ ರಾಜನು ಅವರನ್ನು ಪರೀಕ್ಷಿಸಿ, ಅವರು ಅನೇಕ ವಿದ್ಯೆಗಳಲ್ಲಿ

ರಾಗಿರುವುದನ್ನು ನೋಡಿ, ಅವರನ್ನು ಪೋಷಿಸುವುದು ತನ್ನ ಕರ್ತವ್ಯವೆಂಬುದನ್ನು ತಿಳಿದು, ಅವರಿಗೆ ಅಗ್ರಹಾರವನ್ನು ದಾನಮಾಡಿದನು.

ಈ ವಿದ್ಯಾಪೋಷಣೆಯ ಫಲವಾಗಿಯೇ ವಿಜಯನಗರದ ಕಾಲಕ್ಕೆ ಕನ್ನಡ ಸಾಹಿತ್ಯವು ಘನತೆಯನ್ನು ಪಡೆಯಿತು. ಆಂಧ್ರ, ಸಂಸ್ಕೃತ, ತಮಿಳುಗಳೂ ರಾಯರಿಂದ ವೃದ್ಧಿಯನ್ನು ಪಡೆದುವು. ಅರಸು ಮನೆತನದ ಅನೇಕ ಸ್ತ್ರೀಯರು ಕೂಡ ಗ್ರಂಥ ರಚಿಸಿದರು. ಬುಕ್ಕರಾಯನ ಸೊಸೆ ಗಂಗಾದೇವಿಯ 'ವೀರಕಂಪಣರಾಯ ಚರಿತ'ವು ವಿಜಯನಗರದ ಕಾಲಕ್ಕೆ ಕನ್ನಡ ಮಹಿಳೆಯರು ಉನ್ನತ ಮಟ್ಟದಲ್ಲಿದ್ದರೆಂಬುದಕ್ಕೆ ನಿದರ್ಶನ. ತಿರುಮಲಾಂಬೆಯು 'ವರದಾಂಬಿಕಾ ಪರಿಣಯ' ಬರೆದಳು.

ಕನ್ನಡ ಸಾಹಿತ್ಯದ ಬೆಳವಣಿಗೆಯು ಹಿಂದಕ್ಕೆ ಬಹುಮಟ್ಟಿಗೆ ರಾಜಾಶ್ರಯವನ್ನವಲಂಬಿಸಿತ್ತು. ಒಂದು ಸಂದರ್ಭದಲ್ಲಿ ಜನ್ನನು "ಕಟ್ಟಿಯುಮೇನೊ ಮಾಲೆಗಾರನ್ ಪೊಸ ಬಾಸಿಗಮಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೆ" ಎಂದು ಸುಂದರವಾಗಿ ಹೇಳಿದ್ದಾನೆ. ಅಂತೂ ಕಾವ್ಯಾಸ್ವಾದವನ್ನು ಸವಿಯಲು ರಸಿಕತೆ, ಮಾಲೆಗಾರನ ಹೊಟ್ಟೆಗೆ ಹಾಕುವ ಉದಾರತೆ ಇದ್ದವರು ಬೇಕು. ಅಂತಹರು ವಿಜಯನಗರದ ರಾಜ್ಯದಲ್ಲಿದ್ದರು. ಪ್ರೌಢದೇವರಾಯ ಕೃಷ್ಣದೇವರಾಯ ಇವರ ಆಳಿಕೆಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಮೋಘವಾದ ಸ್ಥಾನವನ್ನು ಪಡೆಯುತ್ತವೆ. ಲಕ್ಕಣ್ಣದಂಡೇಶನ ಮೂಲಕ ಪ್ರೌಢದೇವರಾಯನು ಕನ್ನಡ ಸಾಹಿತ್ಯದ ಉನ್ನತಿಗೆ ಬಹುಮಟ್ಟಿಗೆ ಕಾರಣನಾದನು. ಕನ್ನಡದ ಉಪನಿಷತ್ತುಗಳೆಂದೂ, ಜಾಗತಿಕ ಸಾಹಿತ್ಯದಲ್ಲಿಯೇ ಒಂದು ವಿಶಿಷ್ಟಸ್ಥಾನಕ್ಕೆ ಅರ್ಹವಾದುವುಗಳೆಂದೂ ಅನ್ಯಾದೃಶಗಳೆಂದೂ ಹೊಗಳಿಸಿಕೊಳ್ಳಲ್ಪಡುವ ವಚನಗಳ ಸುಪ್ಪಾಣಿ ಮುತ್ತುಗಳನ್ನು ಆರಿಸಿ, ಅವುಗಳಿಗೊಂದು ವ್ಯವಸ್ಥಿತ ರೂಪು ಕೊಡುವ ಕಾರ್ಯವು ಈಗ ನಡೆಯಿತು. ಪ್ರಭುಲಿಂಗಲೀಲೆಯಂತಹ ಉದ್ಗ್ರಂಥ ಈಗ ಹುಟ್ಟಿತು. ಕೃಷ್ಣದೇವರಾಯನ ಕಾಲಕ್ಕೆ ವೈಷ್ಣವ ದಾಸಕೂಟದ ಸಾಹಿತ್ಯಕ್ಕೆ ಪೋಷಣೆ ದೊರೆಯಿತು. ದಾಸಕೂಟ ಸ್ಥಾಪಕ ವ್ಯಾಸರಾಯರು ಈ ಅರಸನಿಂದ ಉತ್ತೇಜನ ಪಡೆದರು. ಕೃಷ್ಣರಾಯನು "ಒಡ್ಡೋಲಗದೊಳಗಿರ್ದು ಭಾರತದ ಕಥೆಯ ಕೇಳಿ...........ತಿಮ್ಮಣ್ಣನಂ ಕರೆದು ವಸ್ತ್ರಭೂಷಣ ಕೊಟ್ಟು ಮನ್ನಿಸಿ ಉಳಿದ ಪರ್ವಗಳ ನೀ ಸಕಲ ಜನ ಮೆಚ್ಚುವಂತೆ ಪೇಳು!" ಎಂಬುದಾಗಿ ಹೇಳಿದನೆಂತಲೂ ಆಮೇಲೆ ತಿಮ್ಮಣ್ಣನು ಭಾರತವನ್ನು ಬರೆದನೆಂತಲೂ ತಿಳಿಯುತ್ತದೆ. ಜನ್ನನು ಹೇಳುವಂತೆ "ಮುಡಿವ ಭೋಗಿ"ಗಳಲ್ಲಿ ಕೃಷ್ಣರಾಜನು ಮೇಲುಪಂಕ್ತಿಯಲ್ಲಿದ್ದಾನೆಂದು ಹೇಳಬಹುದು. ಈತನ ವಿದ್ಯಾಪಕ್ಷಪಾತವನ್ನು ಆಂಧ್ರಕವಿಯೊಬ್ಬನು, "ಈ ಕವಿಯನ್ನು ಅರಸನು ತನ್ನ ಜೊತೆಗೆ

ಆನೆಯ ಮೇಲೆ ಕೂಡಿಸಿಕೊಳ್ಳುತ್ತಿದ್ದನು. ಹಾದಿಯಲ್ಲಿ ಹೋಗುತ್ತಿರುವಾಗ ನಡುವೆ ಕಂಡರೆ ಆತನನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಳ್ಳುತ್ತಿದ್ದನು.'' ಎಂದು ಹೇಳುತ್ತಾನೆ.

ವಿಜಯನಗರವು ಮಾನವನ ಸರ್ವತೋಮುಖವಾದ ಬೆಳವಣಿಗೆಗೆ ಅವಕಾಶವನ್ನು ಕಲ್ಪಿಸಿತೆಂದು ಹೇಳಬೇಕು. ಬೌದ್ಧಿಕ ಬಲದೊಡನೆ ಶಾರೀರಿಕ ಬಲದ ಸಂವರ್ಧನಕ್ಕೂ ಆಸ್ಪದವಿತ್ತು. ಆತ್ಮವಿಕಾಸದ ವಿಚಾರದೊಡನೆ ಮಾನಸಿಕ ವಿಹಾರದ ಪ್ರಶ್ನೆಯೂ ಬಿಡಿಸಲ್ಪಡುತ್ತಿತ್ತು. ಬುದ್ಧಿಯ ಸಂಸ್ಕಾರದೊಡನೆ ಚಿತ್ತ, ಮನಗಳ ಸಂಸ್ಕಾರವೂ ನಡೆಯಿತು. ರಾಜ್ಯವಿಸ್ತರಣ, ದುರ್ಭೇದ್ಯ ಕೋಟೆ-ಕೊತ್ತಲಗಳು, ಪರದೇಶದವರನ್ನು ಬೆಕ್ಕಸ ಬೆರಗುಗೊಳಿಸಿದ ಅತುಲವಾದ ಸಂಪತ್ತು, ಸೇನಾಬಲ ಇವುಗಳಂತೂ ಸರಿಯೇ; ಜೊತೆಗೆ ವಿಜಯನಗರದ ಕಾಲದ ಪ್ರಜರ ರಾಜನಿಷ್ಠೆ, ರಾಜರ ಪ್ರಜಾಪ್ರೇಮ ಇವುಗಳಿಂದ ಮಾನಸಿಕ ಔನ್ನತ್ಯವು ಧ್ವನಿತವಾಗುತ್ತದೆ. ಕಲೆಗಳ ಉಚ್ಚ ಬೆಳವಣಿಗೆಯು ಸಂಸ್ಕೃತಿ ಸಂವರ್ಧನದ ದ್ಯೋತಕವಾಗಿತ್ತು. ಆಡಳಿತದ ಸುವ್ಯವಸ್ಥೆಯು ಪ್ರಗತಿಯ ಚಿಹ್ನವಾಗಿತ್ತು.

ಶಕ್ತಿಯ ಬೆಳವಣಿಗೆಗೆ ಅನೇಕ ಅನುಕೂಲತೆಗಳು ವಿಜಯನಗರದಲ್ಲಿ ಕಲ್ಪಿಸಲ್ಪಟ್ಟಿದ್ದುವು. ಮಹಾನವಮಿಯ ಉತ್ಸವವನ್ನು ಪರದೇಶದ ಅನೇಕ ಪ್ರಯಾಣಿಕರು ಉತ್ಸಾಹದಿಂದ ವರ್ಣಿಸಿರುವರಷ್ಟೇ! ಅದರಲ್ಲಿ ನಡೆಯುವ ಅನೇಕ ಕಾರ್ಯಕ್ರಮಗಳಲ್ಲಿ ಕುಸ್ತಿಯ ಕಾರ್ಯಕ್ರಮವು ಬಹು ಜನರ ಮನವನ್ನು ಹೆಚ್ಚಾಗಿ ಸೆಳೆದಿದೆ. ಕುಸ್ತಿಯ ಪ್ರದರ್ಶನಕ್ಕೆ ಎಲ್ಲ ಅನುಕೂಲತೆಗಳೂ ಇದ್ದು ಪಾರಿತೋಷಕಗಳು ಕೊಡಲ್ಪಡುತ್ತಿದ್ದವು. ಸ್ವತಃ ರಾಜನು ಉತ್ಸಾಹದಿಂದ ಕುಸ್ತಿಯನ್ನು ನಿರೀಕ್ಷಿಸುತ್ತಿದ್ದನು. ಮಲ್ಲಯುದ್ಧದಲ್ಲಿ ಸತ್ತ ಮುದಿಗೌಡನ ಸ್ಮಾರಕಕ್ಕಾಗಿ, ಚೆನ್ನಪ್ಪನೆಂಬವನು ೧೪೬೬ ರಲ್ಲಿ ಒಂದು ವೀರಗಲ್ಲನ್ನು ನೆಟ್ಟನು. ಮಲ್ಲಯುದ್ಧವಾಡುವುದು, ಅದರಲ್ಲಿ ಮಡಿಯುವುದು ಧೀರತನವೆಂಬ ನಂಬಿಗೆ ಆಗ ಇದ್ದಿರಬೇಕು. ಪೇಜ, ನ್ಯೂನಿಜ ಮುಂತಾದ ಪರದೇಶದ ಪ್ರವಾಸಿಗಳು ವಿಜಯನಗರದ ಕುಸ್ತಿಯ ಆಟವನ್ನು ಸಾಕಷ್ಟು ಹೊಗಳಿದ್ದಾರೆ. ಪೇಜನು ವಿಜಯನಗರದಲ್ಲಿ ಹೆಂಗಸರೂ ಕುಸ್ತಿ ಹಿಡಿಯುತ್ತಿದ್ದರೆಂದು ಹೇಳುತ್ತಾನೆ. ತಮ್ಮ ಭಾವಭಂಗಿಗಳಿಂದ ಮಧುರ ವಿನ್ಯಾಸವನ್ನು ಪ್ರದರ್ಶಿಸಿರುವ ನೃತ್ಯದ ಹುಡುಗೆಯರೂ ಕುಸ್ತಿ ಹಿಡಿಯುತ್ತಿದ್ದರೆಂದು ಪೇಜನು ಹೇಳುತ್ತಾನೆ. ವಿಜಯನಗರದ ವೈಶಿಷ್ಟ್ಯವು ಅನೇಕ ರಂಗಗಳಲ್ಲಿ ಕಂಡುಬರುವಂತೆ ಇಲ್ಲಿಯೂ ಕಂಡುಬರುತ್ತದೆಂದು ನ್ಯೂನಿಜನು ಹೇಳುತ್ತಾನೆ– "The king has a thousand wrestlers not like others. They strike and wound." ಅರಸರಲ್ಲಿ ಸಾವಿರಾರು ಕುಸ್ತಿಯವರಿದ್ದರು. ಆದರೆ ಉಳಿದವರಂತೆ ಇದ್ದಿಲ್ಲ. ಬಲವಾದ ಪೆಟ್ಟುಗಳನ್ನು

ಕೊಟ್ಟು ಗಾಯಗಳನ್ನು ಉಂಟುಮಾಡುತ್ತಿದ್ದರು; ಅಳುಕದೆ ಅವುಗಳನ್ನು ಸಹಿಸಿಕೊಳ್ಳುತ್ತಿದ್ದರು. ಸಂಪತ್ತಿನಲ್ಲಿ, ವಿದ್ಯೆಯಲ್ಲಿ ವೈಭವಶಿಖರಕ್ಕೆ ಏರಿದ ವಿಜಯ ನಗರವು ಶಕ್ತಿಪ್ರದರ್ಶನದಲ್ಲಿಯೂ ಅಂತಹದೇ ಒಂದು ಮಟ್ಟದಲ್ಲಿತ್ತೆಂದು ಹೇಳ ಬೇಕು. ಪೇಜನೆಂಬ ಪ್ರವಾಸಿಯು ಕೃಷ್ಣದೇವರಾಯನು ಎಣ್ಣೆಯನ್ನು ಸವರಿ ಕೊಂಡು, ಅಂಗಸಾಧನೆ ಮಾಡಿ, ಖಡ್ಗದಾಟ ಆಡಿ, ಕುಸ್ತಿ ಹಿಡಿಯುತ್ತಿದ್ದನೆಂದೂ ಅನಂತರ ಬ್ರಾಹ್ಮಣನಿಂದ ಪವಿತ್ರ ಸ್ನಾನ ಮಾಡುತ್ತಿದ್ದನೆಂದೂ ತಿಳಿಸುತ್ತಾನೇ ಕೃಷ್ಣದೇವರಾಯನು ರಾಜಕುಮಾರ ವೀರಭದ್ರನನ್ನು ಧ್ವಂಧ್ವ ಯುದ್ಧಕ್ಕಾಗಿಯೆ. ಕರೆಯಿಸಿಕೊಂಡನೆಂದು ತಿಳಿಯುತ್ತದೆ. ಈ ಶಕ್ತಿಪ್ರದರ್ಶನದ ಬಾಹ್ಯಘಟನೆಯು ಅಷ್ಟೊಂದು ಮಹತ್ವದ್ದಾಗಿರಲಿಕ್ಕಿಲ್ಲ. ಆದರೆ ಅದರಿಂದ ಸೂಚಿತವಾಗುವ ಜನರ ಪ್ರವೃತ್ತಿಯು ಮಾತ್ರ ಹುರುಳುಳ್ಳದ್ದಾಗಿದೆ. ದ್ವಂದ್ವಯುದ್ಧದಲ್ಲಿ ಸತ್ತವನ ಆಸ್ತಿ ಯನ್ನು ಗೆದ್ದವನು ಅರಸನ ಅನುಮತಿಯನ್ನು ಪಡೆದು ತೆಗೆದುಕೊಳ್ಳುತ್ತಿದ್ದನೆಂದು ನ್ಯುನಿಜನು ಹೇಳುತ್ತಾನೆ.

ಮಹಾನವಮಿಯ ಉತ್ಸವವನ್ನು ಬಣ್ಣಿಸಿದ ಪರದೇಶದ ಪ್ರವಾಸಿಗಳು ವಿಜಯನಗರದಲ್ಲಿ ಕಲೆಗೆ ಇದ್ದ ಉತ್ತೇಜನವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಶಾರೀ ರಿಕ ಬಲಸಂವರ್ಧನೆಯಂತೆಯೇ ಕಲೆಯ ಸಂವರ್ಧನೆಯೂ ಆಗ ನಡೆಯುತ್ತಿ ತ್ತೆಂಬುದನ್ನು ನಾವು ಕಾಣುತ್ತೇವೆ. ಮಹಾನವಮಿಯ ಉತ್ಸವವು ವಿವಿಧ ಕಲಾ ವಿದರನ್ನು ಒಂದೆಡೆ ಸೇರಿಸಿ, ಅವರಿಗೆ ಉತ್ತೇಜನ, ಪ್ರತಿಫಲಗಳನ್ನು ಕೊಡುವ ಒಂದು ಯೋಗ್ಯ ಪ್ರಸಂಗವಾಗಿ ಪರಿಣಮಿಸಿತು. ವಿಶೇಷತಃ ನೃತ್ಯವಂತೂ ತೀರ ಉನ್ನತ ಸ್ಥಿತಿಯಲ್ಲಿತ್ತು. ಪ್ರವಾಸಿಕರ ಕಣ್ಮನಗಳನ್ನು ಸೆಳೆದುದರಲ್ಲಿ ನೃತ್ಯವಿಲಾಸವೂ ಒಂದಾಗಿದೆ. ಅದನ್ನವರು ಬಾಯಿತುಂಬ ಹೊಗಳಿದ್ದಾರೆ. "Never was dancing held in greater esteem in the History of South India than in the days of Vijayanagar." ( ವಿಜಯನಗರದ ಕಾಲಕ್ಕೆ ನೃತ್ಯಕ್ಕೆ ದೊರೆಯುತ್ತಿದ್ದ ಮನ್ನಣೆಯು ದಕ್ಷಿಣ ಭಾರತದ ಇತಿಹಾಸದಲ್ಲಿ ಅಪೂರ್ವವಾಗಿದೆ.) ಎಂಬುದಾಗಿ ಪ್ರೊ. ಸಾಲೆತೂರರು ಅಭಿಪ್ರಾಯಪಡುತ್ತಾರೆ. ಪರ್ಶಿಯಾದ ಅಬ್ದುಲ್ ರಝಾಕನಂತೂ ನೃತ್ಯವಿಲಾಸದ ವರ್ಣನೆಯಿಂದ ಮುಗ್ಧನಾಗಿ ಹೋಗಿದ್ದಾನೆ. ನೃತ್ಯದ ಸ್ತ್ರೀಯರ ವರ್ಣನೆ ಅವನ ವೃತ್ತಾಂತದಲ್ಲಿ ಬಹು ಮುಖ್ಯವಾಗಿ ಕಂಡುಬರುತ್ತದೆ. ನೃತ್ಯಕಲಾ ವಿನ್ಯಾಸವು, ನೃತ್ಯಸ್ತ್ರೀಯರ ಮಧುರ ಭಾವಭಂಗಿಗಳು, ಪಾದಗಳ ಗತಿಯಲ್ಲಿಯ ಮೋಹಕತೆಯು ಜನತೆಯ ಅರಿವನ್ನು ಮರೆಯಿಸಿ, ಮಂತ್ರಮುಗ್ಧರನ್ನಾಗಿ ಮಾಡುತ್ತಿ ತ್ತೆಂದೂ ಸಂತೋಷಾತಿರೇಕದಿಂದ ಪ್ರೇಕ್ಷಕರು ಉನ್ಮಾದ ಹೊಂದುತ್ತಿದ್ದರೆಂದೂ

ಆತನು ಹೇಳುತ್ತಾನೆ. ಬಹುಶಃ ಈ ಮಾತುಗಳಲ್ಲಿ ಅತ್ಯುಕ್ತಿ ಇರಲಿಕ್ಕಿಲ್ಲ. "ಅರಮನೆಯಲ್ಲಿ ಒಂದು ಭವ್ಯ ನಾಟಕಶಾಲೆ ಇತ್ತು. ಅಲ್ಲಿ ಗೋಡೆಗಳ ಮೇಲೆ ನೃತ್ಯದ ವಿವಿಧ ಭಂಗಿಗಳನ್ನು ಪ್ರದರ್ಶಿಸುವ ಚಿತ್ರಗಳಿದ್ದವು. ಅವುಗಳಿಂದ ರಾಣಿಯರು ನೃತ್ಯಕಲೆಯನ್ನು ಅಭ್ಯಾಸಿಸಬಹುದಾಗಿತ್ತು." ಎಂದೂ ಪೇಜನು ಹೇಳುತ್ತಾನೆ. ಅರಮನೆಯಲ್ಲಿ ನಾಟಕಶಾಲೆ ಇತ್ತೆಂಬ ಮಾತು ಶಾಸನಗಳಿಂದಲೂ ಪುಷ್ಟಿಪಡೆಯುತ್ತದೆ. "ಪಟ್ಟದ ನಾಟಕ ಶಾಲೆ"ಯ ಶೃಂಗಾರಮ್ಮನು ಶ್ರೀಸಾಗರದ ಅಗ್ರಹಾರ ಸ್ಥಾಪಿಸಿದಳೆಂದು ಒಂದು ಶಾಸನದಿಂದ ತಿಳಿಯುತ್ತದೆ. ಇದರಲ್ಲಿ ಅರಮನೆಯ ನಾಟಕಶಾಲೆ ("ಪಟ್ಟದ ನಾಟಕ ಶಾಲೆ") ಉಕ್ತವಾಗಿದೆ. ನೃತ್ಯದ ಸ್ತ್ರೀಯರಿಗೆ ದೊರೆಯುವ ಮನ್ನಣೆಯನ್ನಂತೂ ಬಹು ಜನ ಪ್ರವಾಸಿಕರು ಮುಕ್ತಕಂಠದಿಂದ ಬಣ್ಣಿಸಿದ್ದಾರೆ. ರಾಯರ ಎದುರು ತಾಂಬೂಲ ಸವಿಯಬಾರದೆಂಬ ಸಂಪ್ರದಾಯ ಆಗ ಇದ್ದಿತು. ಆದರೆ ನೃತ್ಯದ ಸ್ತ್ರೀಯರು ಮಾತ್ರ ಸಭೆಗಳಲ್ಲಿ ರಾಯರ ಎದುರು ತಾಂಬೂಲ ಸವಿಯುತ್ತಿದ್ದರೆಂದು ಪ್ರವಾಸಿಗಳು ಹೇಳುತ್ತಾರೆ. ರಾಯರು ಸಭೆಗಳಲ್ಲಿ ನೃತ್ಯದ ಸ್ತ್ರೀಯರಿಗೆ ತೋರಿಸುತ್ತಿದ್ದ ಈ ಅತಿಶಯವಾದ ದಾಕ್ಷಿಣ್ಯವು ಒಂದು ಪಕ್ಷಕ್ಕೆ ಅನುಚಿತವೆಂದು ಅನಿಸಿದರೂ ಆ ದಾಕ್ಷಿಣ್ಯದ ಹಿಂದೆ ಅಡಗಿರುವ ಉತ್ಕಟ ಕಲಾಪ್ರೇಮವನ್ನು ಮಾತ್ರ ಯಾರಾದರೂ ಹೊಗಳಲೇಬೇಕು.

ವಿಜಯನಗರದ ನವರಾತ್ರಿಯ ಹಬ್ಬವು ಸಕಲ ಕಲಾಪ್ರೇಮಿಗಳ ಹಬ್ಬವೆಂದು ಹೇಳಬೇಕು. ಏಕೆಂದರೆ ಅಲ್ಲಿ ಎಲ್ಲ ಕಲಾವಿದರಿಗೂ ಔತಣವಿರುತ್ತಿತ್ತು; ಕಲಾಪ್ರದರ್ಶನಕ್ಕೆ ಅನುವು ದೊರೆಯುತ್ತಿತ್ತು; ಉತ್ತಮ ಕಲಾಪ್ರದರ್ಶನಕ್ಕೆ ಪಾರಿತೋಷಕ ದೊರೆಯುತ್ತಿತ್ತು. ಅಬ್ದುಲ್ ರಝಾಕನು ತನ್ನ ವೃತ್ತಾಂತದಲ್ಲಿ ಈ ಮಾತನ್ನು ಹೇಳಿದ್ದಾನೆ. "All the readers, story tellers, musicians, jugglers were rewarded by the King with gold and garment." (ಗಮಕಿಗಳು ಕತೆಗಾರರು, ಗಾಯಕರು, ಡೊಂಬರು ಎಲ್ಲರಿಗೂ ಹೊನ್ನು-ಉಡುಗೊರೆಗಳು ದೊರೆಯುತ್ತಿದ್ದುವು.) ನೃತ್ಯ ಸಂಗೀತಗಳ ಮೇಳವಾದ ಕೋಲಾಟವು ಊರ್ಜಿತ ಸ್ಥಿತಿಯಲ್ಲಿತ್ತೆಂದು ಪೀಟ್ರೊ ದೆಲಾವಾಲೆ ಹೇಳುತ್ತಾನೆ. ವಿಜಯನಗರದ ಶಿಲ್ಪದಲ್ಲಿ ಕೋಲಾಟದ ಸುಂದರ ಚಿತ್ರಗಳಿವೆ.

ರಾಮರಾಯನು ವೀಣಾಪ್ರವೀಣನೆಂದು ಶಾಸನಗಳಲ್ಲಿ ಉಕ್ತನಾಗಿದ್ದಾನೆ. ಆತನ ಸಂಗೀತ ಪ್ರೀತಿಯು ಪ್ರಸಿದ್ಧವೇ ಆಗಿದೆ. ಆತನ ಆಜ್ಞೆಯ ಮೇರೆಗೆ ರಾಮಾಮಾತ್ಯನು "ಸ್ವರಮೇಳಕಳಾನಿಧಿ" ಯನ್ನು ಬರೆದನು. ರಘುನಾಥನಾಯಕನೆಂಬವನು "ಸಂಗೀತ ಸುಧೆ" ಯನ್ನು ಬರೆದಂತೆಯೂ ಹಾಗೂ ಆತನು ಹೊಸ

ಮೇಳಗಳನ್ನೂ ರಾಗಗಳನ್ನೂ ಹುಡುಕಿ ತೆಗೆದಂತೆಯೂ ತಿಳಿದುಬರುತ್ತದೆ. ಇಮ್ಮಡಿ ದೇವರಾಜನ ಆಸ್ಥಾನದಲ್ಲಿದ್ದ ಪಂಡಿತ ಕಲ್ಲಿನಾಥನು ಅರಸನ ಆಣತಿಯ ಮೇರೆಗೆ ಶಾರ್ಙ್ಗದೇವನ 'ಸಂಗೀತ ರತ್ನಾಕರ' ಎಂಬ ಗ್ರಂಥಕ್ಕೆ ಟೀಕೆ ಬರೆದನು. ಇದರಿಂದ ವಿಜಯನಗರದ ಕಾಲಕ್ಕೆ ಸಂಗೀತಕ್ಕೆ ಸಾಕಷ್ಟು ಪ್ರೋತ್ಸಾಹನವು ದೊರೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಕಂಪಣ ಒಡೆಯರ ಅರಮನೆಯ ಸರ್ವನಿರ್ವಾಹಕಾರನು ಗುಡಿಯಲ್ಲಿಯ ಗಾಯನ- ವಾದನಗಳಿಗಾಗಿ ೧೩೬೩ರಲ್ಲಿ ದತ್ತಿ ಕೊಟ್ಟನೆಂದು ಉಲ್ಲೇಖವಿದೆ. ೧೪೭೦ರಲ್ಲಿ ಓರ್ವ ನಾಯಕನ ಹೆಂಡತಿ ಕಲ್ಲರಸಿಯಮ್ಮನು ಸಿದ್ಧಮಲ್ಲಿಕಾರ್ಜುನ ಗುಡಿಯ ಸಂಗೀತಕ್ಕಾಗಿ ದತ್ತಿಕೊಟ್ಟಳೆಂದು ತಿಳಿಯುತ್ತದೆ. ಆಗಿನ ಕಾಲದ ಸ್ತ್ರೀಯರು ಸಂಗೀತದಲ್ಲಿ, ವಾದ್ಯ ಬಾರಿಸುವುದರಲ್ಲಿ ಪ್ರಾವೀಣ್ಯ ಪಡೆದದ್ದನ್ನು ನ್ಯೂನಿಜನು ಹೇಳುತ್ತಾನೆ. ರಾಮಭದ್ರಾಂಬೆಯು ಅನೇಕ ರಾಗಗಳನ್ನೂ ತಾಳಗಳನ್ನೂ ಹೇಳಿದ್ದಾಳೆ. ದೊಡ್ಡ ಮನೆತನದ ಸ್ತ್ರೀಯರು ಕೂಡ ಸಂಗೀತದಲ್ಲಿ ಆಸಕ್ತಿ ವಹಿಸಿ ದತ್ತಿ ಕೊಡುವಂತಹ ಘಟನೆಗಳಿಂದ, ಆ ಕಲೆಗೆ ಇರುವ ಪ್ರಾಶಸ್ತ್ಯ, ಹಾಗೆ ದತ್ತಿ ಕೊಡುವವರ ಮನಸ್ಸಿನ ಸಂಸ್ಕಾರ ಇವು ವ್ಯಕ್ತವಾಗುತ್ತವೆ. ಕೃಷ್ಣದೇವರಾಯನು ಸ್ವತಃ ಸಂಗೀತಜ್ಞನಾಗಿದ್ದನು. ಯುದ್ಧದಲ್ಲಿ ತೋರಿಸುವ ಆಸಕ್ತಿಯನ್ನೇ ಆತನು ಕಾವ್ಯಸಂಗೀತಗಳಲ್ಲಿ ತೋರಿಸುತ್ತಿದ್ದನು. ವೀಣೆ ಕಲಿಸಿದ ತನ್ನ ಒಬ್ಬ ಗುರುವಿಗೆ ಗುರುದಕ್ಷಿಣೆ ಕೊಟ್ಟ ಸಂಗತಿಯ ಉಲ್ಲೇಖವು ಒಂದು ಕಡೆಗೆ ಬರುತ್ತದೆ. ವಿಜಯನಗರದಲ್ಲಿ ಮಿಕ್ಕ ವಾದ್ಯಗಳಿಗೂ ವಿಶೇಷ ಪ್ರೋತ್ಸಾಹವು ಇದ್ದಿರಬೇಕು. ಭೇರಿ, ದುಂದುಭಿ, ಮಹಾಮುರಜ ಇವುಗಳ ಉಲ್ಲೇಖಗಳು ಅಲ್ಲಲ್ಲಿ ಬರುತ್ತವೆ. ಅಲ್ಲಪ್ಪನಾಯಕನು ಹುರವಳ್ಳಿಯ ಹನುಮಂತ ದೇವಾಲಯದ ತಮ್ಮಟಿಗಾರರಿಗಾಗಿ ೧೫೩೩ರಲ್ಲಿ ಕೊಪ್ಪ ಗ್ರಾಮದ ಹೊಲವನ್ನು ಕೊಟ್ಟಂತೆ ಶಾಸನದಿಂದ ತಿಳಿದುಬರುತ್ತದೆ. ಅಂತು ಗಾಯನ, ವಾದನ ಇವುಗಳಿಗೆ ಸಾಕಷ್ಟು ಪ್ರೋತ್ಸಾಹವು ಇತ್ತು.

'ಹಾಳು ಹಂಪೆ'ಯು ಇಂದಿಗೂ ಪುಂಖಾನುಪುಂಖವಾಗಿ ಪ್ರವಾಸಿಕರನ್ನು ಆಕರ್ಷಿಸುವುದು ವಿಜಯನಗರದ ಶಿಲ್ಪಕಲೆಯ ಹೆಚ್ಚಳದ ದ್ಯೋತಕವೆಂದು ಬೇರೆ ಹೇಳಬೇಕಾಗಿಲ್ಲ. ರಾಜ್ಯವಳಿಯಿತು; ಸಂಪತ್ತು ಹಾಳಾಯಿತು; ಆದರೆ ವಿಜಯನಗರದ ಕೀರ್ತಿಯೇನೋ ಇನ್ನೂ ಉಳಿದಿದೆ. ಆ ಕೀರ್ತಿಯನ್ನು ಹೆಚ್ಚಿಸುವುದಕ್ಕೆ ನಮಗೆ ಉಳಿದಿರುವ ಸಾಧನವೆಂದರೆ ವಿಜಯನಗರದ ಶಿಲ್ಪವೇ ಸರಿ. ವಿತರಣವೃತ್ತಿಯ ದ್ಯೋತಕಗಳಾಗಿದ್ದರೂ ರಸಿಕತನದ ನಿದರ್ಶನಗಳಾಗಿರುವ ಗುಡಿಗಳು ಹಾಳುಸ್ಥಿತಿಯಲ್ಲುಳಿದಿವೆ. ಜೀರ್ಣ ವಿಜಯನಗರದ ದರ್ಶನದಿಂದ ಧನ್ಯತೆ ಪಡೆಯುವ ಜನರು

ಇಂದಿಗೂ ಅಸಂಖ್ಯರಾಗಿದ್ದಾರೆ. ವಿಜಯನಗರದ ಶಿಲ್ಪಕಲೆಯು ಹೊಯ್ಸಳರ ಅನುಕರಣವಲ್ಲವೆಂದು ಪ್ರೊ. ಸಾಲೆತ್ತೂರರವರು ಹೇಳುತ್ತಾರೆ. ಶಿಲ್ಪಿಗಳಿಗೆ ರಾಯರು ಸಾಕಷ್ಟು ಪ್ರೋತ್ಸಾಹ ಕೊಡುತ್ತಿದ್ದರು. ಈ ಸಂದರ್ಭದಲ್ಲಿ ಟೇಲರನು ಹೇಳಿದ ಒಂದು ಸಂಗತಿಯು ಮನೋರಂಜಕವೂ ಅರ್ಥ ಗರ್ಭಿತವೂ ಆಗಿದೆ. " ಒಮ್ಮೆ ಸುಮಂತರ ಮೂರ್ತಿ ಆಚಾರ್ಯನೆಂಬ ಶಿಲ್ಪಿಯು ಮಧುರೆಯ ವಸಂತ ಮಂಟಪಗಳನ್ನು ಕೆತ್ತಿದನು. ಆಗ ತಿರುಮಲರಾಯನು ಅರಸನಾಗಿದ್ದನು. ಆತನು ಶಿಲ್ಪಿಯ ಕೌಶಲ್ಯವನ್ನು ವಿಶೇಷವಾಗಿ ಮೆಚ್ಚಿದನು. ಆ ಕುಶಲ ಶಿಲ್ಪಿಯನ್ನು ಸನ್ಮಾನಿಸುವುದು ಅವಶ್ಯವೆಂದರಿತ ಅರಸನು ಒಂದು ಸನ್ಮಾನಕೂಟವನ್ನು ಏರ್ಪಡಿಸಿದನು. ಕೂಡಿದ ಸಭೆಯಲ್ಲಿ ಸ್ವತಃ ಅರಸನು ತನ್ನ ಕೈಯಿಂದ ಸುಣ್ಣ ತೊಡೆದು ಶಿಲ್ಪಿಗೆ ತಾಂಬೂಲ ಕೊಟ್ಟನು. ವಿಜಯನಗರದ ಅರಸರ ಎದುರಿನಲ್ಲಿ ತಾಂಬೂಲವನ್ನು ಯಾರೂ ಸವಿಯಕೂಡದೆಂಬ ಶಿಷ್ಟಾಚಾರವು ಸಾಂಪ್ರದಾಯಿಕವಾಗಿ ಆಗ ಬಂದಿತ್ತು. ಆದರೆ ಅರಸನು ಮಾಡಿದ ಸನ್ಮಾನದಿಂದ ಮೈಮರೆತ ಶಿಲ್ಪಿಯು ಗರ್ವದಿಂದ ಅರಸನ ಎದುರಿನಲ್ಲಿಯೆ ತಾಂಬೂಲ ಬಾಯಿಗೆ ಹಾಕಿಕೊಂಡನು. ಅನಂತರ ಆತನಿಗೆ ತನ್ನ ಅನುಚಿತ ಕಾರ್ಯದ ಅರಿವು ಆಯಿತು. ಆಗ ಶಿಲ್ಪಿಯು ಅನುಚಿತ ಕಾರ್ಯವನ್ನು ಮಾಡಿದ ತನ್ನ ಕೈಬೆರಳುಗಳನ್ನು ಕತ್ತರಿಸಿಕೊಂಡನು. ಅರಸನು ಮೆಚ್ಚಿ ಆತನಿಗೆ ಹೊನ್ನನ್ನೂ ಉಡುಗೊರೆಯನ್ನೂ ಕೊಟ್ಟನು. "

ಗಳಿಗರಲ್ಲಿ ಸಿಂಗರಾಜನೆಂಬ ಅಧಿಕಾರಿಯು — ಗಂಡಭೇರುಂಡ ಮೂರ್ತಿಯನ್ನು ಗೋಪುರದ ಬಾಗಿಲಿಗೆ ತರುವಾಗ — ಕಟ್ಟಿಗೆ ಕೆಲಸ ಮಾಡಿದ್ದಕ್ಕಾಗಿ ದಿವಿಂಗೋಜನೆಂಬ ಕಮ್ಮಾರನಿಗೆ ಪಾರಿತೋಷಕ ಕೊಟ್ಟನು. ಈ ರೀತಿಯಾಗಿ ಶಿಲ್ಪಿಗಳಿಗೆ ಬಹುರೀತಿಯ ಉತ್ತೇಜನ ದೊರೆಯುತ್ತಿತ್ತು. ಇದರ ಪರಿಣಾಮವನ್ನು ಬೇರೆಯಾಗಿ ನಿರ್ದೇಶಿಸಬೇಕಾಗಿಲ್ಲ.

ಇನ್ನು ನಾಟ್ಯಕಲೆಯ ವಿಚಾರ. ಅರಮನೆಯಲ್ಲಿ ನಾಟಕಶಾಲೆ ಇತ್ತೆಂದೂ ರಾಣಿಯರು ನೃತ್ಯ ಕಲಿಯುತ್ತಿದ್ದರೆಂದೂ ಈ ಮೊದಲೇ ಹೇಳಿದೆ. ಪಟ್ಟದ ನಾಟಕಶಾಲೆಯ ಉಲ್ಲೇಖವು ಶಾಸನದಲ್ಲಿದೆ. ನೃತ್ಯ ಸಂಗೀತಗಳಿಗೆ ವಿಶೇಷ ಪ್ರೋತ್ಸಾಹವಿದ್ದ ವಿಜಯನಗರದಲ್ಲಿ ನಾಟ್ಯಕಲೆಗಾದರೂ ಸಾಕಷ್ಟು ಪೋಷಣೆ ಇದ್ದಿರಬೇಕು. ರಂಗಭೂಮಿಯು ಬೆಳವಣಿಗೆ ಪಡೆಯಿತೆಂಬುದಕ್ಕೆ ನಿದರ್ಶನಗಳಿವೆ. ಕೃಷ್ಣದೇವರಾಯನು ಸ್ವತಃ ನಾಟಕಕಾರನಾಗಿದ್ದನು. ಅವನ ' ಜಾಂಬುವತಿ ಕಲ್ಯಾಣ'ವು ವಸಂತೋತ್ಸವದಲ್ಲಿ ಅಭಿನಯಿಸಲ್ಪಟ್ಟಿತು. ಸಾಳುವ ಗೋಪತಿಪ್ಪ ಭೂಪಾಲನ 'ತಾಳದೀಪಕ'ದಿಂದ ವಿಜಯನಗರ ರಂಗಭೂಮಿಗೆ ವಿಶೇಷ ಸಹಾಯವಾಗಿರಬೇಕು.

"ಗಂಗಾದಾಸ ಪ್ರತಾಪವಿಲಾಸ"ದಲ್ಲಿ ಓರ್ವ ನಟನ ಉಲ್ಲೇಖವಿದೆ. ಬೊಂಬೆಯಾಟದವನಿಗೆ ಗಂಗದೇವರಾಯನು ೧೪೨೦ರಲ್ಲಿ ದತ್ತಿಕೊಟ್ಟನು. "ಬೊಂಬೆಯಂ ಏಕಮಂ ಪಿಡಿದು ಸೂತ್ರಿಕನ್ ಆಡಿಸುವಂತೆ ಆ ಬೊಂಬೆಗೆ" ಎಂಬ ಉಲ್ಲೇಖವಿದೆ. ಮೂರನೆಯ ಅರಸುಮನೆತನವಾದ ತುಳುವಂಶದವರು ತುಳುದೇಶದಿಂದ ಬಂದವರು. ಅವರು ಅಲ್ಲಿ ಪ್ರಚಾರದಲ್ಲಿದ್ದ, ಈಗಲೂ ಇರುವ ಯಕ್ಷಗಾನದ ಪದ್ಧತಿಯನ್ನು ವಿಜಯನಗರಕ್ಕೆ ತಂದರು.

ರಾಯರ ಕಲಾದಾಕ್ಷಿಣ್ಯವು ಬಹು ದಿವಸದಿಂದ ನಮಗೆ ಗೋಚರವಾಗುತ್ತದೆ. ನೃತ್ಯ, ಸಂಗೀತ, ವಾದ್ಯ, ನಾಟಕ, ಚಿತ್ರಕಲೆ, ಶಿಲ್ಪ, ಸಾಹಿತ್ಯಗಳಂತೂ ಸರಿಯೇ; ಕೃಷ್ಣದೇವರಾಯನು ನಂದೀ ತಿಮ್ಮಯ್ಯನೆಂಬ ಕವಿಗೆ ಪಗಡೆಯ ಆಟದ ಪ್ರಾವಿಣ್ಯಕ್ಕಾಗಿ ಒಂದು ಅಗ್ರಹಾರವನ್ನು ಉಂಬಳಿ ಕೊಟ್ಟನೆಂದು ತಿಳಿಯುತ್ತದೆ. ಜನತೆಯ ಮನಸ್ಸು ಆಗ ಒಂದು ಉನ್ನತವಾದ ಸ್ಥಿತಿಯಲ್ಲಿತ್ತೆಂದು ನಾವು ಕಂಡುಕೊಂಡಿದ್ದೇವೆ. ಈ ಮಾತನ್ನು ಪುಷ್ಟೀಕರಿಸುವ ಸಂಗತಿಗಳು ನಮಗೆ ಇನ್ನೂ ಕೆಲವು ದೊರೆಯುತ್ತವೆ. ಅವುಗಳಲ್ಲಿ 'ನೆತ್ತರಗೊಡುಗೆ' ಎಂಬ ಹೆಸರಿನ ಶಾಸನಗಳು ಮಹತ್ವದವುಗಳಾಗಿವೆ. ಧರ್ಮಕ್ಕಾಗಿ, ಸಾರ್ವಜನಿಕ ಕಾರ್ಯಕ್ಕಾಗಿ ತಮ್ಮ ಮೈನೆತ್ತರು ಹರಿಯಿಸುವ ಸ್ವಾರ್ಥತ್ಯಾಗದ ರೀತಿಯು ಆ ಕಾಲಕ್ಕೆ ಇತ್ತು. ತುರುಕಾಳೆಗಗಳಲ್ಲಿ ವೈರಿಗಳಿಂದ ಹಳ್ಳಿಗಳು ಮುತ್ತಲ್ಪಟ್ಟಾಗ, ಇಲ್ಲವೆ ನಾಡಿನಲ್ಲಿ ದೊಂಬೆಗಳು ನಡೆದಾಗ ಸ್ವಾರ್ಥತ್ಯಾಗಿಗಳು ಮುಂಬಂದು ತಮ್ಮ ಮೈನೆತ್ತರು ಹರಿಯಿಸುತ್ತಿದ್ದರು. ಅದರ ದ್ಯೋತಕವೇ 'ನೆತ್ತರಗೊಡುಗೆ.' ಈ ರೀತಿ ಪ್ರಾಣವೆರೆದವರ ಆಪ್ತವರ್ಗಕ್ಕೆ ಉಂಬಳಿಗಳು ಕೊಡಲ್ಪಡುತ್ತಿದ್ದವು. ಸಾರ್ವಜನಿಕ ಕಾರ್ಯಗಳಲ್ಲಿ ಆಸಕ್ತಿ ವಹಿಸುವ ಜನರೂ ಆಗ ವಿಶೇಷವಾಗಿದ್ದರೆಂದು ತಿಳಿಯುತ್ತದೆ. ಅಂತಹರಿಗೆ ಪ್ರಭುತ್ವದವರು ಉಂಬಳಿ, ಮಾನ್ಯ, ಗೌಡಿಕೆ ಇವುಗಳನ್ನು ಕೊಡುತ್ತಿದ್ದ ಬಗೆಗೆ ಉಲ್ಲೇಖಗಳಿವೆ. ಗಣ್ಯವಾದ ಕಾರ್ಯವನ್ನು ಎಸಗಿದವರಿಗೆ, ಜೀವನದ ಯಾವುದೊಂದು ರಂಗದಲ್ಲಿಯೂ ಪ್ರಾವಿಣ್ಯವನ್ನು ಪಡೆದವರಿಗೆ, ಧಾರ್ಮಿಕ ಸಂಸ್ಥೆಗಳಿಗೆ ರಾಯರು ಪದವಿಗಳನ್ನೂ ಹೊನ್ನನ್ನೂ ಕೊಟ್ಟು ಗೌರವಿಸುತ್ತಿದ್ದರು.

ಆ ಕಾಲದ ಅನೇಕ 'ಧರ್ಮಶಾಸನ'ಗಳು ಉಪಲಬ್ಧವಿವೆ. ಧರ್ಮಶಾಸನಗಳೆಂದರೆ ಪ್ರಜೆಗಳು ತಮ್ಮ ಅರಸರ ಕ್ಷೇಮಚಿಂತನೆಗಾಗಿ ಧರ್ಮ ಮಾಡುವುದು. ತಮ್ಮ ಅರಸನಿಗೆ ಕ್ಷೇಮವಾಗಲೆಂಬ ಉದ್ದೇಶದಿಂದ ಗುಡಿಗಳಿಗೆ ದತ್ತಿ ಬಿಟ್ಟುಕೊಟ್ಟ ಉಲ್ಲೇಖವು ಈ ಧರ್ಮಶಾಸನಗಳಲ್ಲಿ ಇರುತ್ತದೆ. ಈ ಧರ್ಮಶಾಸನಗಳ ಸಂಖ್ಯೆ

ಯನ್ನು ನೋಡಿದರೆ ಆ ಕಾಲದ ರಾಜಪ್ರಜಾನುರಾಗವು ಮಾದರಿಯದಾಗಿರಬೇಕೆಂದು ಕಂಡುಬರುತ್ತದೆ. ೧೩೮೦ ರಲ್ಲಿ ತಾಮನಂದಿ ಆದಿನಾಥನ ಮಗನು ಬುಕ್ಕರಾಯನ ಕ್ಷೇಮಚಿಂತನಕ್ಕಾಗಿ ಮುರಾಸೂರಿನಲ್ಲಿ ಆದಿನಾರಾಯಣನ ಮೂರ್ತಿಯನ್ನು ಸ್ಥಾಪಿಸಿದನು. ಇಂತಹ ಕಾರ್ಯಗಳು ಕನ್ನಡಿಗರಿಗೆ ಹೆಗ್ಗಳಿಕೆಯ ವಿಷಯಗಳೇ ಆಗಿದ್ದವು. ಆದರೆ ಇಂತಹ ಧರ್ಮಕಾರ್ಯವು ತಮ್ಮ ಅಭೀಷ್ಟಪ್ರಾಪ್ತಿಗಾಗಿ ಇರದೆ ತಮ್ಮ ಒಡೆಯರ ಕ್ಷೇಮಚಿಂತನಕ್ಕೂ ಇರುವುದೆಂದರೆ ಒಂದು ವಿಶೇಷವೆಂದೇ ಹೇಳಬೇಕು. ಬುಕ್ಕರಾಯನು ವಿಶೇಷ ಜನಪ್ರಿಯನಾದ್ದರಿಂದ ಆತನ ಸಲುವಾಗಿ ಅನೇಕ ಧರ್ಮಶಾಸನಗಳಿವೆ. ೧೩೮೩ರಲ್ಲಿ ಇರುಗಪ್ಪನೆಂಬವನು ಮಹೇಂದ್ರಮಂಗಲವನ್ನು ದತ್ತಿಯಾಗಿ ಕೊಟ್ಟನು. ಆತನ ನಂತರ ಬರುವ ಇಮ್ಮಡಿ ಹರಿಹರನ "ಖಡ್ಗ ದೇವತೆಗೆ ಜಯಸಿಕ್ಕುವುದಕ್ಕಾಗಿ" ಪಳ್ಳಿಯಾರ ನಾಡಿನ ಪಾರುಪತ್ಯಗಾರನೂ ಆ ಊರಿನ ನಿವಾಸಿಗಳೂ ಧರ್ಮ ಮಾಡಿದರು. ಮುಂಬಳ್ಳಿಯ ವರ್ತಕರು "ದೇವ ರಾಯನು ಭೂಮಂಡಲದ ಒಡೆಯನಾಗಲೆಂದು ಆಶಿಸಿ" ಪ್ರತಿಯೊಂದು ಮಗ್ಗಕ್ಕೆ ಒಂದು ಗದ್ಯಾಣದಂತೆ ಹಣ ಶೇಖರಿಸಿ ಕೊಟ್ಟರು. ತಮ್ಮ ಉತ್ಪನ್ನದ ಕಿಂಚಿ ದಂಶವೂ ಕೂಡ ಹೀಗೆ ಸತ್ಕಾರ್ಯಕ್ಕೆ ವಿನಿಯೋಗವಾಗಬೇಕೆಂಬ ವರ್ತಕರ ಪ್ರವೃತ್ತಿಯು ಸ್ತುತ್ಯವಾಗಿದೆ. ತಮ್ಮ ಒಡೆಯನು ಭೂಮಂಡಲದ ಒಡೆಯನಾಗ ಲೆಂಬ ಹೆಮ್ಮೆ ಅವರಿಗೆ; ವಿಜಯನಗರದ ವಿಜಯಧ್ವಜವು ಜಗತೀತಲದಲ್ಲೆಲ್ಲ ವಿರಾಜಿಸಬೇಕೆಂಬ ಆಕಾಂಕ್ಷೆ ಅವರಿಗೆ. ಆ ಹಂಬಲಕ್ಕೆ ಕೃತಿಯ ಬೆಂಬಲವಿದೆ ಅವ ರಲ್ಲಿ. ಮಲ್ಲಿಕಾರ್ಜುನ ಮಹಾರಾಯನ ಕ್ಷೇಮಚಿಂತನೆಗಾಗಿಯೂ ಧರ್ಮಶಾಸನ ಗಳಿವೆ. ೧೪೫೩ರಲ್ಲಿ ದೇವಪ್ಪಗಳು ಮಲ್ಲಿಕಾರ್ಜುನನ 'ಆರೋಗ್ಯಲಾಭ'ಕ್ಕಾಗಿ ಸೇದಿಯಾರ ನಲ್ಲೂರ ಗ್ರಾಮವನ್ನು ದತ್ತಿಕೊಟ್ಟರು. ಆಳ್ದನ ಆರೋಗ್ಯಕ್ಕಾಗಿ ಕಾತರಿಸುವ ಜನರು ವಿಜಯನಗರ ಸಾಮ್ರಾಜ್ಯದಲ್ಲಿದ್ದರು. ನರಸಿಂಗದೇವ ಮಹಾ ರಾಯನಿಗೆ ಬೀರಪ್ಪನಾಯಕ ಎಂಬವನೂ ಇಮ್ಮಡಿ ನರಸಿಂಗರಾಯನಿಗೆ ಕಸವೆ ನಾಯಕನೂ ಧರ್ಮಶಾಸನ ಮಾಡಿಸಿದ್ದಾರೆ.

ಕೃಷ್ಣದೇವರಾಯನ ಜನಪ್ರಿಯತೆಯಂತೂ ಶ್ಲಾಘನೀಯವಾಗಿದೆ. ಅವನ ಕಾಲದ ಧರ್ಮಶಾಸನಗಳು ಅನೇಕವಿವೆ. ೧೫೧೩ರಲ್ಲಿ ರಾಯಪ್ಪಕೊಂಡನರಸು ಆಯೋಧ್ಯಾಪುರವನ್ನು ಕೃಷ್ಣದೇವನ ಧರ್ಮಕ್ಕೆ ಕೊಟ್ಟನು. ಕೊಮ್ಮೂರಿನಲ್ಲಿ ಒಂದು ವೀರಭದ್ರನ ಗುಡಿಯು ಕಟ್ಟಲ್ಪಟ್ಟಿತು. ೧೫೨೩ರಲ್ಲಿ ಗೋವಿಂದರಾಜನು ೧೪೭ ಗದ್ಯಾಣಗಳನ್ನು "ಕೃಷ್ಣದೇವರಾಯನು ಕುದುರೆ, ಆನೆ, ದಳ, ಧನ, ವಿಜಯಗಳನ್ನು ಪಡೆಯಲೆಂದು" ಕೊಟ್ಟನು. ಬಸವಯ್ಯನಾಯಕ, ಹನುಮಪ್ಪನಾಯಕ ಎಂಬು

ವರು ಅನುಕ್ರಮವಾಗಿ ೧೫೨೨ರಲ್ಲಿ, ೧೫೨೯ರಲ್ಲಿ ದತ್ತಿ ಕೊಟ್ಟರು. ೧೫೨೯ರಲ್ಲಿ ಶಿವ ರಾತ್ರಿಯ ಸುದಿನ ಚೆನ್ನಿಸೆಟ್ಟಿಯು ಪಂಕಜನ ಹಳ್ಳಿಯನ್ನು ರಾಯನ ಧರ್ಮಕ್ಕಾಗಿ ಬಿಟ್ಟುಕೊಟ್ಟನು. ಹೀಗೆಯೇ ಅಚ್ಯುತರಾಯ, ಸದಾಶಿವರಾಯ ಇವರ ಕ್ಷೇಮಚಿಂತನ ಕ್ಕಾಗಿ ಧರ್ಮಶಾಸನಗಳಿವೆ. ರಾಮರಾಯನ ಕಾಲಕ್ಕೂ ಧರ್ಮಶಾಸನಗಳು ಹೆಚ್ಚಾ ಗಿವೆ. ಆತನು ಆ ಕಾಲದ 'ಧರ್ಮದ ಪಾರುಪತ್ಯಗಾರ'ನೆಂದು ಸ್ತುತಿಸಲ್ಪಟ್ಟಿದ್ದಾನೆ. ನಾಡಿನ ನೆಮ್ಮದಿಗಾಗಿ ದಾನ ಕೊಡುವಲ್ಲಿ ಮನಸ್ಸಿನ ವೈಶಾಲ್ಯ ವ್ಯಕ್ತವಾಗುತ್ತದೆ. ಆದರೆ ವಿಜಯನಗರದ ವೈಶಿಷ್ಟ್ಯವು ಇಷ್ಟಕ್ಕೇ ಮುಗಿಯುವುದಿಲ್ಲ. ದಾನವು ಉಚಿತ ವಾದ ರೀತಿಯಲ್ಲಿಯೇ ವಿನಿಯೋಗಿಸಲ್ಪಡುವಂತಹ ವ್ಯವಸ್ಥೆ ಆಗ ಇತ್ತು. ಮೈಸೂರ ಶಾಸನ ಇಲಾಖೆಯ ೧೯೦೮ರ ವರದಿಯಲ್ಲಿ ಉಕ್ತವಾದ ರಂಗಪುರದ ರಂಗನಾಥನ ಗುಡಿಯ ಶಾಸನದಲ್ಲಿ 'ಮಲ್ಲಪ್ಪಯ್ಯನ ದಾನದ ಗುಮಾಸ್ತೆ ಹೆಬ್ಬಾರುವ ರೊದ್ದ ಉಪಾಧ್ಯಾಯ ಸೀಮೆಯ ಪಾರುಪತ್ಯಗಾರನು ದಾನವು ಉಚಿತವಾದ ರೀತಿಯಲ್ಲಿ ವಿನಿಯೋಗಿಸಲ್ಪಡುವುದನ್ನು ನೋಡುವಂತೆ ಆಜ್ಞಾಪ್ತನಾದನು." ಎಂಬ ಉಲ್ಲೇಖ ವಿದೆ. ಕೃಷ್ಣದೇವರಾಯನು ಆಡಳಿತದ ಸುವ್ಯವಸ್ಥೆಗೆ ಬಹುಮಟ್ಟಿಗೆ ಕಾರಣನಾಗಿ ದ್ದಾನೆ. ಸಾಮ್ರಾಜ್ಯವು ಅಳಿದರೂ ಸುವ್ಯವಸ್ಥೆಯು ಅಳಿಯಲಿಲ್ಲವೆಂದು ಡಾ. ಕೃಷ್ಣ ಸ್ವಾಮಿ ಅಯ್ಯಂಗಾರರು ಹೇಳುತ್ತಾರೆ.

ಈ ಬರೆಹದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಮಾನವನ ಬಹುಮುಖದ ಬೆಳವಣಿಗೆಗೆ ಅವಕಾಶ, ಪ್ರೋತ್ಸಾಹಗಳಿದ್ದವೆಂದೂ ಜನತೆಯಲ್ಲಿ ಮನಸ್ಸಿನ ಉಚ್ಚ ಸಂಸ್ಕಾರವು ಕಂಡುಬರುತ್ತಿತ್ತೆಂದೂ ತೋರಿಸುವ ಪ್ರಯತ್ನವನ್ನು ಮಾಡಲಾಗಿದೆ. ಧರ್ಮರಕ್ಷಣೆಯು ವಿಜಯನಗರದ ಸ್ಥಾಪಕರ ಉದ್ದೇಶವೇ ಆಗಿತ್ತೆಂದಮೇಲೆ ಆಗ ಧರ್ಮರಕ್ಷಣೆಯು ಸರಿಯಾಗಿ ನಡೆಯಿತೆಂದು ಬೇರೆ ಹೇಳಬೇಕಾಗಿಲ್ಲ. ಧರ್ಮ, ವಿದ್ಯೆ, ಸಾಹಿತ್ಯ, ಕಲೆ, ಶಕ್ತಿ ಇವುಗಳ ಬೆಳವಣಿಗೆಯಿಂದ ಆ ಕಾಲದವರ ಚಿತ್ತ, ಬುದ್ಧಿ, ಮನಸ್ಸು, ಅಹಂಕಾರ ಇವುಗಳ ವಿಕಾಸದ ಪರಿಚಯವು ನಮಗೆ ಆಗುತ್ತದೆ. ಧರ್ಮಶಾಸನಗಳಿಂದ ಜನತೆಯ ಉಚ್ಚ ಸಂಸ್ಕಾರವು ತಿಳಿದುಬರುತ್ತದೆ. ಅಂತೂ ಅನೇಕ ವಿಧದಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಸಂಸ್ಕೃತಿಸಂವರ್ಧನ ಕಾರ್ಯವು ನಡೆಯಿತೆಂದು ಸ್ಫುಟವಾಗಿ ಕಂಡುಬರುತ್ತದೆ.

ಸಿರಿಗನ್ನಡಂ ಗೆಲ್ಗೆ

## ಈ ಪುಸ್ತಕದಲ್ಲಿ ಉಲ್ಲೇಖಿಸಲ್ಪಟ್ಟ
# ಗ್ರಂಥ ಹಾಗೂ ಗ್ರಂಥಕರ್ತರ ಸೂಚಿ

## ಒಪ್ಪೋಲೆ

| ಪುಟ. | ಸಾಲು. | ತಪ್ಪು. | ಒಪ್ಪು. |
|---|---|---|---|
| ೪ | ೧ | ಅಪ್ಪಳಕದ | ಅಪ್ಪ ಅಳಕದ |
| ೬ | ೧ | “ವಾಣಿ | “ಲಕ್ಷ್ಮೀವರಂ....ಎನ್ನ ವಾಣಿಯಿಂ” |
| ೭ | ೮ | ಶ್ರೇಷ | ಶ್ರೇಷ್ಠ |
| ೮ | ೧೫ | ಬಱಿಕೆಯ್ವ | ಬಱಿಕೆಯ್ವ |
| ೨೯ | ೨೧ | ಪ್ರದಕ್ಷಿಣೆ | ಪ್ರದಕ್ಷಿಣೆ |
| ೩೦ | ೨೯ | ನಿಮುಗಮೀಯರ | ನಿಮುಗಮೀಯಿರ |
| ೩೩ | ೮ | ವಿರಕ್ತವೃತ | ವಿರಕ್ತವ್ರತ |
| ೩೭ | ೨೭ | ಅಸಮಾನ್ಯವಾದುದು | ಅಸಾಮಾನ್ಯವಾದುದು |
| ೩೮ | ೫ | ಹ್ಯೇಯ | ಹೇಯ |
| ೪೦ | ೧೯ | ವಾಙ್ಗ್ಮನ | ವಾಙ್ಮನ |
| ೪೧ | ೬ | ಹ್ಯೇಯ | ಹೇಯ |
| ೪೮ | ೧ | ಬಱಿಕೆಯ್ವ | ಬಱಿಕೆಯ್ವ |
| ೪೮ | ೧೯ | ಕವಿಭಾಳ....ಳುಂಟೆನೊರ್ವ.... | ಕವಿಭಾಳ .... ಳುಂಟೆನ್ನೊರ್ವ |
| ೪೯ | ೧೭ | ಭರತಸುತ ಶಾಸ್ತ್ರ | ಭರತ ಸುರತ ಶಾಸ್ತ್ರ |
| ೫೧ | ೧೧ | ಕೇವಣಿಪಬೇಕೆಂಬ | ಕೇವಣಿಪುದೆಂಬ |
| ೬೦ | ೧೬ | ತಾರಾಮತಿ | ಚಂದ್ರಮತಿ |
| ೬೫ | ೧೦ | ಯಜ್ಞಶತವೆಯ್ದ | ಯಜ್ಞಶತವೆಯ್ದಿ |
| ೭೪ | ೭ | ಪಡೆದು | ಪದೆದು |
| ೭೫ | ೩ | ಕುಸುಮ....ಗಲ್ಲದ | ಕೂಸುಮನೀವುದರಿಕೇಸರಿಗಲ್ಲದ |
| ೭೫ | ೧೪ | ಕೊಟ್ಟು | ಕೊಟ್ಟ |
| ೮೨ | ೬ | ಕೊಡೆ | ಕೂಡೆ |
| ೮೫ | ೯ | [೧೯೭೫] | [೧೮೩೮] |
| ೯೨ | ೧೫ | ಪೊಣ್ದಂ | ಪೂಣ್ದಂ |
| ೧೦೮ | ೧೫ | ಚಂಪೂ | ವೃತ್ತ |
| ೧೩೧ | ೫ | ಕನ್ನಡ ಕೈಪಿಡಿ | ಕರ್ನಾಟಕ ಕೈಪಿಡಿ |
| ೧೩೭ | ೯ | ಕಾಪಿಡಿವುದಱಿಂಬರ್ಪ | ಕಾಪಿಡಿವುದಱಿಂ ಬರ್ಪ |
| ,, | ೧೦ | ದೇಶಕೋಶಂಗಳುಮುದಬಿಂ | ದೇಶಕೋಶಂಗಳುಮುದಱಿಂ |
| ೧೪೪ | ೨೧ | ಶಾಶನ | ಶಾಸನ |
| ೧೪೬ | ೧ | ಶ್ರೆಷ್ಠರೇ | ಶ್ರೇಷ್ಠರೇ |
| ,, | ೧೦ | ವಿಚಾರಚಾರಚತುರರುಂ | ವಿಚಾರಾಚಾರಚತುರರುಂ |
| ೧೫೭ | ೪ | ಪೋಷೆಣೆ | ಪೋಷಣೆ |
| ೧೬೪ | ೬ | ತಿಳಿಸುತ್ತಾನೇ | ತಿಳಿಸುತ್ತಾನೆ. |
| ,, | ೭ | ಯುದ್ಧಕ್ಕಾಗಿಯೆ. | ಯುದ್ಧಕ್ಕಾಗಿಯೇ |